


# ಹೊಸತು

## ನೆಮ್ಮದಿಯ ನಾಳೆ ನಮ್ಮದು



ಪೆಂಬರ್ ೧೯೯೯
ಲೆ : ರೂ. ೧೦

ನಾವೆಲ್ಲರು ಒಂದೆ ಜಾತಿ, ಒಂದೆ ಮತ, ಒಂದೆ ಕುಲ; ನಾವು ಮನುಜರು

# ಹೊಸತು

## ಒಳಗೇನಿದೆ.....




ಚಿತ್ರಗಳು : ಗುಜ್ಜಾರ್, ಮೋಹನ, ನಾಡಿಗ್, ರವಿಕುಮಾರ್ ಅಜ್ಜೀಪುರ
ಮುಖಪುಟ ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ


ಯಥಾಪ್ರಕಾರ ನವಂಬರ್ ಅಂದರೆ ಕರ್ನಾಟಕದಲ್ಲಿ ಉತ್ಸವ ನಡೆಯಬೇಕು, ನಡೆಯಿತು. ಡಿಸೆಂಬರ್‌ನಲ್ಲೂ ಸ್ವಲ್ಪ ನಡೆಯುತ್ತಿರುತ್ತದೆ. ಉಲ್ಲಾಸವನ್ನು ತಂದು ಸಂಭ್ರಮದಿಂದ ರಾಜ್ಯೋತ್ಸವವನ್ನು ಆಚರಿಸಲು ಕಳೆದ ಒಂದು ವರ್ಷದಲ್ಲಿ ಏನು ಮಹತ್ತರ ಸಾಧನೆಯಾಯಿತೆಂದು ಪ್ರಶ್ನೆ ಹಾಕಿಕೊಳ್ಳದಿರುವುದರಿಂದ ಯಾಂತ್ರಿಕವಾಗಿ ಆಚರಣೆ ನಡೆಯುತ್ತದೆ. ಎಷ್ಟೋ ಕಡೆ ಕಿವಿಯೊಳಕ್ಕೆ ಗುಂಡು ಹಾರಿಸುವ ರೀತಿಯಲ್ಲಿ ''ಸಂಗೀತ'' ಧ್ವನಿಸುತ್ತದೆ. ಅದರಲ್ಲಿ ಯಾವ ಮಾಧುರ್ಯವಿದೆಯೋ ತಿಳಿಯುವುದಿಲ್ಲ. ರಾಜ್ಯದ ಸಂಸ್ಕೃತಿಯೆಂದರೆ ಇದು ಎಂಬಂತಾಗಿರುವುದು ಅಷ್ಟೇನೂ ಒಳ್ಳೆಯ ಸೂಚನೆಯಲ್ಲ. ಜೊತೆಗೆ ನಮ್ಮ ಮಾನವಿಕ ಮತ್ತು ನೈಸರ್ಗಿಕ ಸಂಪನ್ಮೂಲಗಳನ್ನು ರೂಢಿಸಿಕೊಳ್ಳುವಲ್ಲಿ ವರ್ಷದಿಂದ ವರ್ಷಕ್ಕೆ ಉನ್ನತ ಮಟ್ಟಕ್ಕೇರುತ್ತಿದ್ದೇವೆಯೇ ಎಂಬ ಪ್ರಶ್ನೆ ಹಾಕಿಕೊಂಡರೆ ಸಮಾಧಾನ ತರುವ ಉತ್ತರ ದೊರೆಯುವ ಸಂಭವವೂ ಇಲ್ಲ. ರಾಜ್ಯೋತ್ಸವದ ಸಂದರ್ಭದಲ್ಲಿ ನಮ್ಮ ಇಡೀ ವರ್ಷದ ಬೆಳವಣಿಗೆ ಅಥವಾ ಅದರ ಅಭಾವವನ್ನು ತಪಾಸಣೆ ಮಾಡಿಕೊಳ್ಳುವುದು ಆರೋಗ್ಯಕರ.

ಉತ್ಸವವೆಂದರೆ ಶಾಲಾ ಮಕ್ಕಳಿಗೆ ಒಂದು ರೀತಿಯಲ್ಲಿ ಉತ್ಸಾಹ, ಇನ್ನೊಂದು ರೀತಿಯಲ್ಲಿ ಶಿಕ್ಷೆ. ಉದಾಹರಣೆಗೆ ಬೆಂಗಳೂರಿನ ಶಾಲಾ ಬಾಲಕ ಬಾಲಕಿಯರು ಒಟ್ಟಾಗಿ ಸೇರಿ ಹತ್ತಾರು ಆಕರ್ಷಕ ಪ್ರದರ್ಶನ ನೀಡಿ ಹರ್ಷ ತಂದರು. ಎಂಟು ಸಾವಿರ ಮಕ್ಕಳು ಕಲಿತು ಇಂತಹ ಪ್ರದರ್ಶನ ನೀಡುತ್ತಾರೆಂದರೆ ಅದು ತೃಪ್ತಿ ತರುವ ಸಂಗತಿಯೇ ಹೌದು. ಆದರೆ ಅವರಿಗೆ ಸಂಯೋಜಕರು (ಅಂದರೆ, ಶಿಕ್ಷಣ ಇಲಾಖೆ) ಗೌರವಕ್ಕಿಂತ ಕಿರುಕುಳವನ್ನೇ ನೀಡುವುದು ಹೆಚ್ಚು. ವಿಶೇಷತಃ ಪೊಲೀಸರು ಅವರನ್ನು ಹಾಗೂ ಪ್ರದರ್ಶನ ನೋಡಲು ಬರುವವರನ್ನು ನಡೆಸಿಕೊಳ್ಳುವ ರೀತಿ ನಿಜಕ್ಕೂ ಅಸಹ್ಯ ಹುಟ್ಟಿಸುತ್ತದೆ. ನಮ್ಮ ಗಡಿಗಳಲ್ಲಿ ಸೈನಿಕರು ದೇಶವನ್ನು ರಕ್ಷಿಸುವಂತೆ ಈ ಪೊಲೀಸರು ಅಧಿಕಾರಿಗಳನ್ನು ಹಾಗೂ ಮಂತ್ರಿಗಳನ್ನು ಜನರಿಂದ ರಕ್ಷಿಸುತ್ತಾರೆ ! ಇಂತಹ ಸುಂದರ ಸಮಾರಂಭಗಳಿಗೆ ಮಂತ್ರಿಗಳು ಬರದಿದ್ದರೆ ಮಕ್ಕಳು ಹಾಗೂ ಜನ ನೆಮ್ಮದಿಯಿಂದ ಉತ್ಸವವನ್ನು ಆಚರಿಸಬಹುದೇನೋ ಎನಿಸುತ್ತದೆ.

ಅಂದು ಬೆಂಗಳೂರಿನ ಸಮಾರಂಭಕ್ಕೆ ಮುಖ್ಯಮಂತ್ರಿ ಕೃಷ್ಣ ದಯಮಾಡಿಸಿದ್ದು ಬೆಳಿಗ್ಗೆ ಹತ್ತೂವರೆಗೆ. ಮಕ್ಕಳನ್ನು ಏಳೂವರೆಯಿಂದಲೇ ಕಲೆ ಹಾಕಿದ್ದರು. ಬಹುತೇಕ ಯಾರೂ ತಿಂಡಿಯನ್ನು ತಿಂದು ಬಂದಿರಲಿಲ್ಲ. ಆತ ಬರುವ ಮೂರು ಘಂಟೆಗೆ ಮುಂಚೆ ಮಕ್ಕಳನ್ನು ಏಕೆ ಅಲ್ಲಿ ಕೊಳೆಸಬೇಕೋ ತಿಳಿಯದು. ಜೊತೆಗೆ ಆನೆಯಿಂದ ಹಾರ, ಹೆಲಿಕಾಪ್ಟರ್‌ನಿಂದ ಹೂವಿನ ಮಳೆ. ಆ ಕರ್ಕಶ ನಿನಾದ ಇಲ್ಲದಿದ್ದರೆ ಉತ್ಸವಕ್ಕೆ ಕಳೆ ಕಟ್ಟುವುದಿಲ್ಲವೇನೊ!

ಕೃಷ್ಣ ಮಹೋದಯರು ಮಕ್ಕಳಿಗೆ ಹೀಗೆ ಅಪಚಾರ ಮಾಡಿದ್ದು ಕ್ಷಮಾರ್ಹವಲ್ಲ. ಆದರೆ ಅದಕ್ಕಿಂತಲೂ ದೊಡ್ಡ ಅಪಚಾರ ಮಾಡಿದ್ದಾರೆ ಅವರು. ಇಡೀ ಕರ್ನಾಟಕದ ಜನ ಸಾಯಿಬಾಬನ ಮಕ್ಕಳು ಎಂದು ಹೇಳಿ ನಮ್ಮ ಮುಖಕ್ಕೆ ಸಗಣಿ ಬಳಿದಿದ್ದಾರೆ. ಇದು ಖಂಡನೀಯವಾದದ್ದು. ನಮಗೇಕೆ ಬೇಕು ಅಂತಹ ಅಪ್ಪ ? ಕೈಚಳಕದ ಪ್ರದರ್ಶನದಲ್ಲಿ ನೈಪುಣ್ಯ ಹೊಂದಿದವರು ನಮ್ಮ ರಾಜ್ಯದಲ್ಲಿ ಸಾವಿರ ಜನ ಇದ್ದಾರೆ. ಸಾಯಿಬಾಬ ಅವರ ಪೈಕಿ ಒಬ್ಬ ಅಷ್ಟೆ. ಬೇಕಾದರೆ ಕೃಷ್ಣ ತನ್ನ ತಂದೆಯಾಗಿ ಬಾಬಾನನ್ನು ಆಯ್ಕೆ ಮಾಡಿಕೊಳ್ಳಲು ಸ್ವತಂತ್ರರು. ಆದರೆ ನಮ್ಮ ಪರವಾಗಿ ಅಂತಹ ಅವಮಾನದ ಮಾತನ್ನಾಡಿ ಆತನ ಪಾದಕ್ಕೆರಗುವುದು ಕೀಳು ಸಂಸ್ಕೃತಿಯ ಪ್ರತೀಕ.

ಇಷ್ಟೇ ಸಾಲದೆಂಬಂತೆ ತಾನು ವಾಸ ಮಾಡಲಿರುವ ಸರ್ಕಾರದ ಮನೆಯನ್ನು ಮೂರ್ಖತನದಿಂದ ವಾಸ್ತುತಂತ್ರಕ್ಕೆ ಅಳವಡಿಸಲು ೫೦ ಲಕ್ಷ ರೂಪಾಯಿ ಖರ್ಚು ಮಾಡುತ್ತಿದ್ದಾರಂತೆ ಈ ಮುಖ್ಯಮಂತ್ರಿಗಳು. ಉತ್ತರಕ್ಕೆ ಮುಖ ಮಾಡಿ ಕೂತರೆ ಮಾತ್ರ ಕೆಲವರಿಗೆ ಪ್ರವೃತ್ತಿ ಆಗುತ್ತದಂತೆ. ಅದಕ್ಕೆ ಕಕ್ಕಸ್ಸನ್ನು ಆ ರೀತಿ ಕಟ್ಟಿಸಿಕೊಳ್ಳುವುದು ಶಾಸ್ತ್ರ ಸಮ್ಮತ ! ಬೌದ್ಧಿಕ ಮಲಬದ್ಧತೆ ಇರುವವರ ಗೋಳು ಇದು. ನಮ್ಮ ಮುಖ್ಯಮಂತ್ರಿಯವರಿಗೆ ಈ ಜಾಡ್ಯ ತಟ್ಟಿರುವುದು ಶೋಚನೀಯ. ಅವರ ಬೌದ್ಧಿಕ ಆರೋಗ್ಯ ಉತ್ತಮಗೊಳ್ಳಲೆಂದು ಹಾರೈಸೋಣ. ಬಾಬಾ, ವಾಸ್ತು, ಇವುಗಳ ಮಧ್ಯೆ ಅವರ ಕಂಪ್ಯೂಟರೀಕರಣ, ರಾಜ್ಯದ ಅಭಿವೃದ್ಧಿ ಇತ್ಯಾದಿ ಯಾವ ದಿಕ್ಕು ಹಿಡಿಯುತ್ತದೋ ಎಂಬ ಆತಂಕ ರಾಜ್ಯೋತ್ಸವದಲ್ಲಿ ಅವರು ನೀಡಿರುವ ಬಳುವಳಿ.



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧ ಸಂಚಿಕೆ - ೫ ಡಿಸೆಂಬರ್ ೧೯೯೯

**ಪ್ರಧಾನ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ ಮಂಡಲಿ**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ರಹಮತ್ ತರೀಕೆರೆ
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

**ವ್ಯವಸ್ಥಾಪಕರು**

ಎಸ್. ಸುರೇಂದ್ರ
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೮೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail:nkp@bgl.vsnl.net.in


## ವ್ಯಾಪಕ ವಿಷಗಾಳಿ

ಈಗ ರೋಮಿನ ಮಧ್ಯೆ ವ್ಯಾಟಿಕನ್‌ನಲ್ಲಿದ್ದು ಕ್ರೈಸ್ತ ಧರ್ಮದ ಒಂದು ಪಂಗಡಕ್ಕೆ ಜಗದ್ಗುರುವಾಗಿರುವ ಪೋಪರನ್ನು ಕಂಡರೆ ಭಾರತೀಯ ಜನತಾ ಪಕ್ಷಕ್ಕೆ ಅತೀವ ಪ್ರೀತಿ-ಗೌರವಗಳಿವೆ. ಏಕೆಂದರೆ ಆತನ ಸ್ವಂತ ನಾಡಾದ ಪೋಲೆಂಡಿನ ರಾಜಕೀಯದಲ್ಲಿ ಜೆರೆತು ಅಲ್ಲಿದ್ದ ಕಮ್ಯುನಿಸ್ಟ್ ಸರ್ಕಾರವನ್ನು ಉರುಳಿಸಲು ಆತನದೂ ಕಾಣಿಕೆಯಿದೆ. ಅಂತೆಯೇ ವಿಶ್ವದ ಬೇರೆ ಕಡೆಗಳಲ್ಲೂ ಕಮ್ಯುನಿಸ್ಟರ ವಿರೋಧವಾಗಿ ಆತ ಮುಂಚೂಣಿಯಲ್ಲಿರುತ್ತಾರೆ. ಆದರೂ ಈ ಬಾರಿ ಪೋಪ್ ಭಾರತಕ್ಕೆ ಭೇಟಿಯಿತ್ತಾಗ ಕೇಂದ್ರ ಸರ್ಕಾರವನ್ನು ನಡೆಸುತ್ತಿರುವ ವಾಜಪೈ ಸರ್ಕಾರಕ್ಕೆ ಸ್ವಲ್ಪ ಇಬ್ಬಂದಿತನ ಉಂಟಾಯಿತು. ಏಕೆಂದರೆ ಅವರ ಪರಿವಾರದ ನಾಯಕರು ಪೋಪನು ಬರಕೂಡದೆಂದೂ, ಬಂದರೆ ಹಿಂದಿನ ಕೆಲವು ಘೋರ ಕುಕೃತ್ಯಗಳಿಗಾಗಿ ಕ್ಷಮೆ ಕೇಳಬೇಕೆಂದೂ, ಮತಾಂತರಕ್ಕೆ ಪ್ರೋತ್ಸಾಹ ನೀಡಬಾರದೆಂದೂ ವಿವಿಧವಾಗಿ ಹೇಳಿಕೆಗಳನ್ನು ನೀಡಿದ್ದರು. ತೊಟ್ಟಿಲು ತೂಗುತ್ತಾ ಮಗುವನ್ನು ಚಿವುಟುವುದರಲ್ಲಿ ನಿಷ್ಣಾತರಾದ ಅದ್ವಾನಿ ಬುದ್ಧಿವಂತಿಕೆಯ ಮಧ್ಯಸ್ಥಿಕೆ ವಹಿಸಬೇಕಾಗಿ ಬಂತು. ಗೃಹಮಂತ್ರಿಯಾಗಿ ಪರಿವಾರದವರಿಗೆ ಬುದ್ಧಿವಾದ ಹೇಳಿದರು, ಸಾಂಸ್ಕೃತಿಕ ಪರಿವಾರದ ನಿಷ್ಠಾವಂತ ಕಾರ್ಯಕರ್ತರಾಗಿ ಒಳಗೊಳಗೇ ಅಪಶ್ರುತಿಗಳಿಗೆ ಕುಮ್ಮಕ್ಕು ನೀಡಿದರು. ಕ್ರೈಸ್ತ ಧರ್ಮಗುರು ಮಾತ್ರ ತನ್ನ ಪಟ್ಟನ್ನು ಬಿಡದೆ ಏನು ಹೇಳಬೇಕಿತ್ತೋ ಅದನ್ನು ಹೇಳಿಯೇ ಹೋದರು.

ಮತಾಂತರದ ಪ್ರಶ್ನೆಯನ್ನು ಪೇಜಾವರ ಸ್ವಾಮಿಗಳು ಸರಳೀಕರಿಸಿದಂತೆ ಅವರ ಪರಿವಾರವೂ ಮಾಡಿದೆ. ಅವರಿಗೆ ತರ್ಕ ರುಚಿಸುವುದಿಲ್ಲವೆಂದು ತೋರುತ್ತದೆ. ಕ್ರೈಸ್ತನಾಗಲಿ ಮಧ್ವನಾಗಲಿ ಒಂದರ್ಥದಲ್ಲಿ ಮತಾಂತರ ಹೊಂದಿದವರೇ ಆಗಿದ್ದಾರೆ. ಹುಟ್ಟಿನಿಂದ ಮಧ್ವಾಚಾರ್ಯರು ಮಾಧ್ವರಾಗಿರಲಿಲ್ಲ. ಕ್ರಿಸ್ತನು ಹುಟ್ಟಿನಿಂದ ಯೆಹೂದ್ಯ. ಇಸ್ಲಾಂ ಪ್ರತಿಪಾದಕ ಪೈಗಂಬರ್ ಹುಟ್ಟಿನಿಂದ ಯಾವ ಮತದವರು ? ಅಂದರೆ, ಸೈದ್ಧಾಂತಿಕ ಪರಾಮರ್ಶೆಯಿಂದ ವ್ಯಕ್ತಿಗಳು ಬದಲಾವಣೆ ಹೊಂದುತ್ತಿರುತ್ತಾರೆ. ಯಾವ ಮತಕ್ಕೂ ಸೇರಲು ಇಚ್ಛಿಸದವರಿರುವಂತೆ ಒಂದರಿಂದ ಇನ್ನೊಂದಕ್ಕೆ ಹೋಗುವವರೂ ಇರುತ್ತಾರೆ. ಅದನ್ನು ತಪ್ಪಿಸುವ ಹಕ್ಕು ಯಾರಿಗೂ ಇಲ್ಲ. ಆಮಿಷಗಳಿಗೆ ಮಾರುಹೋಗಿ ಮತಾಂತರ ಹೊಂದುವವರ ಪ್ರಶ್ನೆಯೇ ಬೇರೆ. ಅವರಿಗೆ ಆಮಿಷಗಳು ಆಕರ್ಷಕವಾಗುತ್ತವೇಕೆ ? ನಮ್ಮ ಸಾಮಾಜಿಕ-ಸಾಂಸ್ಕೃತಿಕ ಆಯಕಟ್ಟನ್ನು ಈ ದೃಷ್ಟಿಯಿಂದ ಅವಲೋಕನ ಮಾಡಿಕೊಳ್ಳಬೇಕು. ಬಲವಂತವಾಗಿ ಯಾರನ್ನಾದರೂ ಮತಾಂತರಕ್ಕೆ ಗುರಿಮಾಡುವ ಸನ್ನಿವೇಶವಿದ್ದರೆ ಅದನ್ನು ಸಾರ್ವಜನಿಕವಾಗಿ ವಿರೋಧಿಸುವುದು ನಮ್ಮೆಲ್ಲರ ಕರ್ತವ್ಯವೇ ಆಗಿದೆ.

ಕ್ಷಮಾಪಣೆಯ ಸೋಗಿನಿಂದ ಯಾವ ಪ್ರಯೋಜನವೂ ಇಲ್ಲ. ಇತಿಹಾಸವನ್ನು ಅದರಿಂದ ಬದಲಾಯಿಸಲಾಗುವುದಿಲ್ಲ. ಹಾಗೆ ನೋಡಿದರೆ ನಮ್ಮ ಸಮಾಜದಲ್ಲಿ ಹಲವು ಶತಮಾನಗಳಿಂದ ಎಸಗಲಾಗಿರುವ ಅಸ್ಪೃಶ್ಯತೆಯಂತಹ ದೌರ್ಜನ್ಯಗಳಿಗೆ ಯಾರು ಯಾರ ಕ್ಷಮಾಪಣೆ ಕೇಳಬೇಕು ? ಇಡೀ ರಾಷ್ಟ್ರವು ಈಗ ಅಭಿವೃದ್ಧಿ ಪಥದಲ್ಲಿದೆಯೆಂದು ಹೇಳಿ ಈ ಪ್ರಶ್ನೆಯನ್ನು ಸಂಘ ಪರಿವಾರದ ನಾಯಕರೊಬ್ಬರು ತಳ್ಳಿಹಾಕಿದ್ದಾರೆ. ಈ ಬೃಹತ್ ಸಮಸ್ಯೆಯನ್ನು ಹಾಗೆ ಸರಳೀಕರಿಸುವುದು ಅವಕಾಶವಾದಿತನಕ್ಕೆ ನಿದರ್ಶನವಾಗುತ್ತದೆ, ಅಷ್ಟೆ.

ಪೋಪ್ ಭೇಟಿಯ ಸಂದರ್ಭದಲ್ಲಿ ನಿರ್ಮಿಸಲಾದ ಕೋಮು ಭಾವನೆಯು ವಿಷಗಾಳಿಯಂತೆ ಹಬ್ಬಿಕೊಂಡು ಯುವಕರ ಮನಸ್ಸುಗಳನ್ನು ಕಲುಷಿತಗೊಳಿಸಿದೆ. ಅದಕ್ಕೆ ವಾಜಪೇಯಿ ಸರ್ಕಾರ ಮತ್ತು ಪರಿವಾರ ಹೊಣೆ. ಈಚಿನ ಒಂದು ದುರ್ಘಟನೆ ನಾವೆಷ್ಟು ಹೀನಾಯ ಸಂಸ್ಕೃತಿಯ ಆರಾಧಕರಾಗುತ್ತಿದ್ದೇವೆಂಬುದನ್ನು ಎತ್ತಿ ತೋರಿಸುತ್ತದೆ. ಬೆಂಗಳೂರಿನ ಸೆಂಟ್ ಜೋಸೆಫ್ ಕಾಲೇಜಿನ ವಿದ್ಯಾರ್ಥಿ- ವಿದ್ಯಾರ್ಥಿನಿಯರು ಆನೇಕಲ್ಲಿನ ಬಳಿ ಒಂದು ಗ್ರಾಮದಲ್ಲಿ ಸಮಾಜಸೇವಾ ಶಿಬಿರದಲ್ಲಿದ್ದಾಗ ಪುಂಡಯುವಕರು ಕೆಲವರು ಅಲ್ಲಿಗೆ ನುಗ್ಗಿ ಅಮಾನುಷವಾಗಿ ವರ್ತಿಸಿದ್ದಾರೆ. ಹಳ್ಳಿಗಳ ಪರಿಚಯ ಮಾಡಿಕೊಡಲೆಂದೇ ವಿದ್ಯಾರ್ಥಿಗಳನ್ನು ರಾಷ್ಟ್ರೀಯ ಸೇವಾ ಯೋಜನೆಯಡಿ ಅಲ್ಲಿಗೆ ಕರೆದುಕೊಂಡುಹೋಗಿ ಶ್ರಮದಲ್ಲಿ ಭಾಗವಹಿಸುವಂತೆ ಮಾಡುವುದು ಹಲವು ದಶಕಗಳಿಂದ ನಡೆದುಬಂದಿದೆ. ಅದು 'ಸೆಂಟ್ ಜೋಸೆಫ್' ಕಾಲೇಜಾದ್ದರಿಂದ ಪರಿವಾರದ ಪುಂಡರಿಗೆ ಭಾವೋದ್ರೇಕವಾಯಿತು. ಅದು ವಿಷಗಾಳಿಯ ಪರಿಣಾಮ. 'ಕ್ರೈಸ್ತ ಮತಕ್ಕೆ ಸೇರಲು ನೀವೆಷ್ಟು ಹಣ ಪಡೆದಿದ್ದೀರಿ' ಎಂಬ ಭರ್ತ್ಸನೆಯ ಮಾತುಗಳನ್ನು ಕಾಲೇಜಿನ ವಿದ್ಯಾರ್ಥಿಗಳು ಕೇಳಬೇಕಾಯಿತು.

ಭಾರತೀಯ ಸಂಸ್ಕೃತಿಯನ್ನು ಪುರಸ್ಕರಿಸುವುದಾಗಿ ಹೇಳಿಕೊಳ್ಳುವ ಸಂಘ ಪರಿವಾರದ ಈ ಘನ ನಡತೆ ಎಂತಹ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆಂಬುದನ್ನು ವಾಜಪೇಯಿ-ಅದ್ವಾನಿ ವಿಚಾರ ಮಾಡಬೇಕು. ಅಂತಹ ಕೆಟ್ಟ ವಾತಾವರಣ ನಿರ್ಮಿಸಿದ್ದಕ್ಕೆ ಅವರು ಕ್ಷಮೆ ಕೇಳುವುದು ಬೇಡ, ಪಶ್ಚಾತ್ತಾಪ ಪಡಲಿ ಸಾಕು. ಜನಸಂಸ್ಕೃತಿಯ ಅನುಯಾಯಿಗಳು ಪರಿವಾರದ ಈ ದುಂಡಾವರ್ತಿ ಅಕ್ರಮಗಳನ್ನು ಖಂಡಿಸಿ ಕ್ರಿಯಾತ್ಮಕವಾಗಿ ಹಿಮ್ಮೆಟ್ಟಿಸಬೇಕು.

## ವಿಶ್ವ ವ್ಯಾಪಾರಿ ಸಂಸ್ಥೆಯ ಇನ್ನೊಂದು ಅವತಾರ

ಕೇಂದ್ರ ಅರ್ಥ ಹಾಗೂ ವಾಣಿಜ್ಯ ಸಚಿವರಿಬ್ಬರೂ ನವಂಬರ್ ಕೊನೆಯಲ್ಲಿ ಅಮೆರಿಕೆಯ ಸಿಯಾಟಲ್ ನಗರದಲ್ಲಿ ನಡೆಯಲಿರುವ ವಿ.ವ್ಯಾ.ಸಂ.ನ ಸಭೆಯ ಬಗ್ಗೆ ಬಹಳ ಹುಮ್ಮಸ್ಸಿನಿಂದ ಪ್ರತಿಕ್ರಿಯಿಸುತ್ತಿದ್ದಾರೆ. ಇನ್ನು ಮುಂದೆ ಎರಡನೆ ತಲೆಮಾರಿನ ಉದಾರೀಕರಣ, ಮುಕ್ತ ಮಾರುಕಟ್ಟೆಯ ಆರ್ಥಿಕತೆ ನಮ್ಮ ರಾಷ್ಟ್ರದಲ್ಲಿ ಬೇರುಬಿಟ್ಟು ಹಾಲು-ಜೇನಿನ ಹೊಳೆ ಹರಿಯುವ ದಿನಗಳು ಸನ್ನಿಹಿತವಾಗಿವೆ ಎಂಬಂತೆ ಹೇಳಿಕೆಗಳನ್ನು ನೀಡಲಾಗುತ್ತಿದೆ. ಮೊದಲನೆ ಸುತ್ತಿನ ಉದಾರೀಕರಣದಲ್ಲಿ ನಮ್ಮ ಸಂಪತ್ತನ್ನು ಹೊರರಾಷ್ಟ್ರಗಳಿಗೆ ಉದಾರವಾಗಿ ಧಾರೆಯೆರೆದುಕೊಟ್ಟದ್ದು ಬಿಟ್ಟರೆ ಬೇರೇನನ್ನು ಸಾಧಿಸಲಾಯಿತೆಂಬುದಕ್ಕೆ ಉತ್ತರವಿಲ್ಲ. ಮುಚ್ಚಿಹೋದ ಸಣ್ಣ ಉದ್ದಿಮೆಗಳು, ಚಿಕ್ಕ ಕಂಪನಿಗಳು, ಹೆಚ್ಚಿನ ನಿರುದ್ಯೋಗ, ಬೀಭತ್ಸವೆನಿಸುವ 'ಸಾಂಸ್ಕೃತಿಕ' ಆಕ್ರಮಣ ಮತ್ತು ಹಲ್ಲೆ, ಇವೆಲ್ಲಾ ಉದಾರೀಕರಣದ ಫಲ. ರಾಜೀವ ಗಾಂಧಿಯಿಂದ ಹಿಡಿದು ವಾಜಪೇಯಿವರೆಗೆ ಯಾವ ಪ್ರಧಾನಿಗೂ ಈ ಫಲ ಕಾಣದೆ ಅವಿತುಕೂತಿಲ್ಲ. ನೋಡಲು ಅವರಿಗೆ ಕಣ್ಣುಗಳಿಲ್ಲ, ಅಷ್ಟೆ. ಜನಸಾಮಾನ್ಯರು ಏರುತ್ತಿರುವ ಬೆಲೆಗಳಿಂದಾಗಿ ಹೇಗೆ ಕಂಗಾಲಾಗಿದ್ದಾರೆಂಬುದು ದೆಹಲಿಯ ಲೋಕಸಭಾ ಭವನದ ಆಸುಪಾಸಿನಲ್ಲಿ ತಿಳಿಯದಿರಬಹುದು; ತುಘಲಕಾಬಾದ್ ಬಳಿಯ ಕೊಳಚೆ




ಪ್ರದೇಶಕ್ಕೆ ದಯಮಾಡಿಸಿ ತಿಳಿದುಕೊಳ್ಳುವ ಸ್ವಾತಂತ್ರ್ಯ ಅವರಿಗಿದೆ. ಅವರು ಅದನ್ನು ಚಲಾಯಿಸಬೇಕೆಂಬುದಷ್ಟೇ ಜನರ ಮನವಿ.

ಉದಾರೀಕರಣದ ಇತ್ತೀಚಿನ ಪ್ರಹಾರ ಸಾರ್ವಜನಿಕ ಪಡಿತರ ವಿತರಣಾ ವ್ಯವಸ್ಥೆಯ ಮೇಲೆ ಆಗಿದೆ. ಇನ್ನು ಮೇಲೆ ಅಲ್ಲಿ ಸಕ್ಕರೆಯ ಸರಬರಾಜನ್ನು ನಿಲ್ಲಿಸಲಾಗುತ್ತದಂತೆ. ಸಾಮಾನ್ಯ ಜನರಿಗೇಕೆ ಸಕ್ಕರೆಯೊಡನೆ ಸರಸ! ಅದಕ್ಕಿಂತಲೂ ಭೀಕರ ಅಪರಾಧಗಳನ್ನು ಕೇಂದ್ರ ಸರ್ಕಾರ ಈಗಾಗಲೆ ಮಾಡಿದೆ. ಇದು ರಾಷ್ಟ್ರದ ಸಂಪತ್ತಿನ ಅಪಹರಣ, ಬೆಳ್ಳಂಬೆಳಕಿನಲ್ಲೇ ಲೂಟಿ. ಅನಿಲ ಪ್ರಾಧಿಕಾರವೊಂದು ನಮ್ಮ ರಾಷ್ಟ್ರದಲ್ಲಿ ಸರ್ಕಾರಿ ಕ್ಷೇತ್ರದಲ್ಲಿದೆ. ಅದರ ವಹಿವಾಟು ಅತ್ಯಂತ ಸಮರ್ಪಕವಾಗಿ ಲಾಭದಾಯಕವಾಗಿ ನಡೆಯುತ್ತಿದೆ. ಹದ್ದಿನ ಕಣ್ಣು ಅದರ ಮೇಲೆ ಬಿದ್ದಿದೆ. ಅದನ್ನು ಸಾರ್ವಜನಿಕ ಕ್ಷೇತ್ರದಿಂದ ಹೊರಹಾಕುವ ಕುತಂತ್ರದಿಂದ ಯಾವ ನಾಯಕನ ಜೇಬು ಎಷ್ಟು ತುಂಬುತ್ತದೆಂದು ತಕ್ಷಣದಲ್ಲಿ ತಿಳಿಯುವುದಿಲ್ಲ. ತುಂಬಿಸಿಕೊಳ್ಳುವುದಂತೂ ನಿಜ.

ಅನಿಲ ಪ್ರಾಧಿಕಾರದ ಷೇರುಗಳನ್ನು ಸರ್ಕಾರೇತರ ಕಂಪನಿಗಳಿಗೆ ಮಾರಬೇಕೆಂಬ ಪ್ರಸ್ತಾಪ ಹಿಂದೆಯೇ ಬಂದಿತ್ತು. ಆಗ ೧೧೦ ರೂಪಾಯಿಗಳಿಗೆ ಷೇರುಗಳನ್ನು ಕೊಳ್ಳಲು ಕಂಪನಿಗಳು ಸಿದ್ಧವಿದ್ದವು. ಅದು ಬಹಳ ಕಡಿಮೆಯೆಂದು ಸರ್ಕಾರವು ಷೇರುಗಳನ್ನು ಮಾರಲಿಲ್ಲ. ಈಗ ಹೊಸ 'ರಾಷ್ಟ್ರೀಯ' ಸರ್ಕಾರ ಅಧಿಕಾರದಲ್ಲಿದೆ. ಅದು ಇವೇ ಷೇರುಗಳನ್ನು ಈಗ ೭೦ ರೂಪಾಯಿಗಳಿಗೆ ಮಾರಲು ಹೊರಟಿದೆ. ಹಾಗೆ ೧೭ ಕೋಟಿ ಷೇರುಗಳನ್ನು ಮಾರುವುದಿದೆ. ಅಂದರೆ ೧೧೯೦ ಕೋಟಿ ರೂಪಾಯಿಗಳ ವ್ಯವಹಾರ. ಸಾರ್ವಜನಿಕ ಸಂಪತ್ತನ್ನು ಹೀಗೆ ಬೇಕಾಬಿಟ್ಟಿ ವಿತರಿಸಲು ವಿಶ್ವ ವ್ಯಾಪಾರಿ ಸಂಸ್ಥೆಯ ಒತ್ತಾಯವಿದೆಯೆಂಬುದು ಒಂದು ಸಮರ್ಥನೆಯಾಗುವುದಿಲ್ಲ. ಅಂತಹ ಸಂಸ್ಥೆಯ ಭಂಟನಾಗಬೇಕೇನು ನಮ್ಮ ಭಾರತ ? ಅದನ್ನು ಆಗುಮಾಡಲು 'ರಾಷ್ಟ್ರೀಯ' ಸರ್ಕಾರ ಅಸ್ತಿತ್ವಕ್ಕೆ ಬಂದಿದೆ ಎನ್ನೋಣವೆ ? ನಮ್ಮ ಸರ್ಕಾರವನ್ನು ವಾಜಪೇಯಿ ಸಂಪುಟ ನಡೆಸುತ್ತದೋ ಬಹುರಾಷ್ಟ್ರೀಯ ಕಂಪನಿಗಳ ನಿರ್ದೇಶಕರು ನಿರ್ದೇಶಿಸುತ್ತಾರೋ ? ಸಿಯಾಟಲ್‌ನಲ್ಲಿ ನಮ್ಮ ದೇಶದ ಸಾರ್ವಭೌಮತ್ವವನ್ನು ಇನ್ನೂ ಹೆಚ್ಚು ಬರಿದುಮಾಡಿಕೊಳ್ಳುವ ಭರಾಟೆಯಲ್ಲಿರುವವರು ಇದಕ್ಕೆ ಉತ್ತರ ನೀಡಬೇಕು.

ಗ್ಯಾರಿ ಆಕರ್‌ಮನ್ ಎಂಬ ಅಮೆರಿಕಾದ ಒಬ್ಬ ಪ್ರತಿನಿಧಿ ಇತ್ತೀಚೆಗೆ ಮುಂಬೈಯಲ್ಲಿ ಹೇಳಿದ : ''ವಾಜಪೇಯಿ ಸರ್ಕಾರ ಚೆನ್ನಾಗಿ ಸ್ಪಂದಿಸುತ್ತಿದೆ. ದೇಶವನ್ನು ಅಭಿವೃದ್ಧಿಯ ಹಾದಿಯಲ್ಲಿ ಕೊಂಡೊಯ್ಯುತ್ತಿದೆ. ಜೀವವಿಮಾ ವಿಭಾಗವನ್ನು ಹೊರದೇಶದವರಿಗೆ ತೆರೆದಿದ್ದು, ಸಾರ್ವಜನಿಕ ಉದ್ಯಮಗಳ ಷೇರುಗಳ ಮಾರಾಟ, ಈ-ವಾಣಿಜ್ಯಕ್ಕೆ ಬೆಂಬಲ, ಮುಂತಾದುವು ಸ್ವಾಗತಾರ್ಹ.'' ಆತ ಹೇಳದಿದ್ದುದು ಇದು : ಯಾರಿಗೆ ಸ್ವಾಗತಾರ್ಹ, ಎಂದು !

ಈ ಹಿನ್ನೆಲೆಯಲ್ಲಿ ಚೀಣಾ ವಿ.ವ್ಯಾ.ಸಂ.ಗೆ ಸೇರ್ಪಡೆ ಹೊಂದುತ್ತಿರುವುದನ್ನು ನಿರುತ್ಸಾಹದಿಂದ ಗಮನಿಸಬೇಕಾಗಿದೆ. ಆ ರಾಷ್ಟ್ರದ ಕೃಷಿ, ದೂರಸಂಪರ್ಕ, ಮುಂತಾದ ಕ್ಷೇತ್ರಗಳಿಗೆ ವಿದೇಶಿ ಖಾಸಗಿ ಬಂಡವಾಳವನ್ನು ಆಹ್ವಾನಿಸಲಾಗುತ್ತಿದೆ. ಅದು ವಿ.ವ್ಯಾ.ಸಂ. ವಿಧಿಸುವ ನಿರ್ಬಂಧ.''ಸಮಾಜವಾದಿ ಮುಕ್ತ ಮಾರುಕಟ್ಟೆ'' ಎಂಬುದು ಒಂದು ಪ್ರಹಸನವಾಯಿತು. ಅದರ ಮುಂದಿನ ಅಂಕ ವಿ.ವ್ಯಾ.ಸಂ. ನಿರ್ದೇಶನದಲ್ಲಿ ಆರಂಭವಾಗಲಿದೆ. ಮಾವೋ ಯಾವಾಗಲೂ ಹೇಳುತ್ತಿದ್ದುದುಂಟು : ''ನಿನ್ನ ಶತ್ರುವು ನಿನ್ನ ಕಾರ್ಯಕ್ರಮವನ್ನು ಮೆಚ್ಚಿಕೊಳ್ಳುತ್ತಿದ್ದರೆ ಮೊದಲು ಜಾಗೃತನಾಗು. ಅಂತಹ ಕಾರ್ಯಕ್ರಮ ನಿನ್ನ ಒಳಿತನ್ನು ಸಾಧಿಸುವುದಿಲ್ಲ,'' ಎಂದು.

ಭಾರತ ಮತ್ತು ಚೀಣಾ ಈ ಮಾತುಗಳನ್ನು ಮತ್ತೆ ಮತ್ತೆ ಮನನ ಮಾಡಿಕೊಳ್ಳಬೇಕಾದ ಅವಶ್ಯಕತೆ ಇದೆ. ಇಲ್ಲದಿದ್ದರೆ ವಿ.ವ್ಯಾ.ಸಂ. ಪಂಜರದಲ್ಲಿ ಸಿಲುಕಿಕೊಂಡು ನಲುಗಿಹೋಗುತ್ತೇವೆ. ಸಿಯಾಟಲ್ ಮಾತುಕತೆಗೆ ತೆರಳುವ ನಮ್ಮ ಸರ್ಕಾರಿ ಪ್ರತಿನಿಧಿಗಳು ಇದನ್ನು ನೆನಪಿನಲ್ಲಿಟ್ಟುಕೊಳ್ಳಲಿ.

## ಭಯಂಕರ ಜಾರ್ಜ್

ಪ್ರಜಾಪ್ರಭುತ್ವದಲ್ಲಿ, ಪತ್ರಿಕಾ ಸ್ವಾತಂತ್ರ್ಯದಲ್ಲಿ ಪ್ರಬಲವಾದ ನಂಬಿಕೆಯುಳ್ಳವರು ಸಮಾಜವಾದಿ ಸಚಿವ ಜಾರ್ಜ್ ಫರ್ನಾಂಡೀಸ್. ಹಾಗೆ ಹೇಳುವುದು ನಗೆಬರಹದ ಒಂದು ತುಣುಕು ಎನ್ನಿಸಿಕೊಳ್ಳುವಂತಾಗಿದೆಯೇನೊ ! ಮಾನವ ಹಕ್ಕುಗಳ ಉಗ್ರ ಪ್ರತಿಪಾದಕ ಜಾರ್ಜ್ ಹಕ್ಕುಗಳನ್ನು ಹತ್ತಿಕ್ಕುವವರ ವಿರುದ್ಧ ಬೇಕಾದರೆ ಡೈನಾಮೈಟ್ ಸಿಡಿಸಲು ಸಿದ್ಧ. ಆದರಿಂದ ರೈಲಿನಲ್ಲಿ ಪ್ರಯಾಣಿಸುವವರಿಗೆ ಪ್ರಾಣನಷ್ಟವಾದರೆ ಅದಕ್ಕೆ ಜಾರ್ಜ್ ಜವಾಬ್ದಾರರಲ್ಲ. ಏಕೆಂದರೆ ಆ ಪ್ರಯಾಣಿಕರು ಪ್ರಜಾಪ್ರಭುತ್ವದ ಪರವಾಗಿ ಹೋರಾಟ ಮಾಡುವುದು ಬಿಟ್ಟು ಪ್ರಯಾಣ ಹೊರಡುವುದೆಂದರೇನು !

ಆ ಜಾರ್ಜ್ ಈಗ ರೂಪಾಂತರ ಹೊಂದಿದ್ದಾರೆ. ಕಾರ್ಗಿಲ್ ಸಂದರ್ಭದಲ್ಲಿ ನಡೆದ ಘಟನೆಗಳಿಗೂ ಮುಂಚೆ ನಡೆದಿದ್ದ ವಿದ್ಯಮಾನಗಳ ಬಗ್ಗೆ ಆಂಗ್ಲಭಾಷಾ ವಾರಪತ್ರಿಕೆ 'ಔಟ್‌ಲುಕ್' ಮತ್ತು ಪಕ್ಷಪತ್ರಿಕೆ 'ಫ್ರಂಟ್‌ಲೈನ್'ಗಳ ವರದಿಗಾರರು ಕೆಲವು ಸೂಕ್ಷ್ಮ ವಿಷಯಗಳನ್ನು ಬೆಳಕಿಗೆ ತಂದಿದ್ದರು. ಅದಕ್ಕೆ ಬ್ರಿಗೇಡಿಯರ್ ಸುರೀಂದರ್ ಸಿಂಗ್‌ಗೆ ಎಂತಹ ಕಿರುಕುಳ ನೀಡಲಾಗುತ್ತಿದೆಯೆಂಬುದು ಇಡೀ ರಾಷ್ಟ್ರಕ್ಕೆ ಗೊತ್ತಿದೆ. ಈಗ ಪತ್ರಿಕಾ ವರದಿಗಾರರ ಸರದಿ. ಆ ಎರಡು ಪತ್ರಿಕೆಗಳ ವರದಿಗಾರರು ಮಿಲಿಟರಿ ಆಯೋಗವೊಂದರ ಮುಂದೆ ಹಾಜರಾಗಿ ಸಾಕ್ಷಿ ನೀಡಬೇಕೆಂದು ಆಜ್ಞೆ ಹೊರಡಿಸಲಾಗಿದೆ. ಹಾಜರಾಗದಿದ್ದರೆ ಉಗ್ರಶಿಕ್ಷೆ. ಹಾಜರಾದರೆ ವರದಿಗಳ ಮೂಲ ತಿಳಿಸಬೇಕೆಂಬ ಆಗ್ರಹ. ಹಾಗೆ ತಿಳಿಸುವುದು ಪತ್ರಿಕಾಧರ್ಮವಲ್ಲವೆಂದು ಹೇಳಲು ಬಾರದು. ಏಕೆಂದರೆ ಅದು ಮಿಲಿಟರಿ ವಿಚಾರಣೆ. ಅಲ್ಲೂ ಒಬ್ಬ ಬ್ರಿಗೇಡಿಯರ್ ಕುಳಿತು ತನಿಖೆ ನಡೆಸುತ್ತಿದ್ದಾರೆ.

ಇದು ಜಾರ್ಜ್ ಫರ್ನಾಂಡಿಸ್ ರಕ್ಷಣಾ ಸಚಿವರಾಗಿ ನಾಗರಿಕರ ಹಕ್ಕುಗಳನ್ನು ಕಾಪಾಡುತ್ತಿರುವ ರೀತಿ. ಸೈನ್ಯದವರ ಜೀವನದ ಹಕ್ಕನ್ನು ಅವರು ಕಾಪಾಡುತ್ತಿರುವ ವಿಧಾನವನ್ನು ಈಚೀಚೆಗೆ ಶ್ರೀನಗರದ ಬಾದಾಮಿಬಾಗ್ ಸೈನಿಕ ಪಾಳೆಯದ ಮೇಲಿನ ದಾಳಿಯಿಂದ ಅರಿತುಕೊಳ್ಳಬಹುದು. ಈ ಉದ್ದಾಮ ಸಚಿವರ ಮಹೋನ್ನತ ಕಾಣಿಕೆಯೆಂದರೆ ಇಡೀ ಸೈನ್ಯದ ನೈತಿಕ ಸ್ಥೈರ್ಯವನ್ನು ಕುಗ್ಗಿಸಿ ಹಾಳುಮಾಡಿರುವುದು. ನಮ್ಮ ಸೈನ್ಯದ ಗರ್ವವು ನೆಲಸಮವಾಗಿದೆ. ಇಂತಹ ಅಧೋಗತಿಗೆ ಕಾರಣರಾದವರು ಕೇಂದ್ರ ಸಚಿವ ಸಂಪುಟದಲ್ಲಿರಬೇಕೋ ತೊಲಗಬೇಕೋ ಎಂಬುದನ್ನು ಜನ ಸಮಚಿತ್ತದಿಂದ ಪರಿಶೀಲಿಸಬೇಕಾಗಿದೆ.


### ಸಮಾಲೋಚಕ ಮಂಡಲಿ

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ,
ಪ್ರಕಾಶ್ ಸಿ. ರಾವ್
ಪಾರ್ಥಸಾರಥಿ
ಬರಗೂರು ರಾಮಚಂದ್ರಪ್ಪ
ಬಸವರಾಜ ಕಲ್ಗುಡಿ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಚಿ. ಶ್ರೀನಿವಾಸರಾಜು
ಸಿದ್ಧನಗೌಡ ಪಾಟೀಲ
ಎಂ. ಎ. ಸೇತುರಾವ್
ಎಲ್. ಹನುಮಂತಯ್ಯ
ಹಾಲಾಡಿ ಮಾರುತಿರಾವ್

### ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

### ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ☎ : ೪೪೧೦೧೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ☎ : ೪೪೪೮೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ☎ : ೨೪೩೦೨

### ಉಚ್ಚನ್ಯಾಯಾಲಯದ ದ್ವಿತೀಯ ಪೀಠ

ಉಚ್ಚನ್ಯಾಯಾಲಯದ ದ್ವಿತೀಯ ಪೀಠವನ್ನು ಉತ್ತರ ಕರ್ನಾಟಕದಲ್ಲಿ ಸ್ಥಾಪಿಸುವುದರಿಂದ ಈ ಭಾಗದ ಕಕ್ಷಿಗಾರರು ತಮಗಾಗಿರುವ ಅನ್ಯಾಯದಿಂದ ಪರಿಹಾರ ಕಂಡುಕೊಳ್ಳಲು ದೂರದ ಬೆಂಗಳೂರಿಗೆ ಹೋಗಿ ಉಚ್ಚನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಲು ಉಂಟಾಗುವ ಅನಗತ್ಯ ಖರ್ಚು-ವೆಚ್ಚ, ದೂರದ ಪ್ರಯಾಣ, ನ್ಯಾಯ ದೊರಕಿಸಿಕೊಳ್ಳಲು ಆಗುವ ವಿಳಂಬ ಹಾಗೂ ಆರ್ಥಿಕ ಹೊರೆಯಿಂದ ಮುಕ್ತಿ ಪಡೆಯಲು ದ್ವಿತೀಯ ಪೀಠದ ಅವಶ್ಯಕತೆ ಇದೆ. ಪ್ರಸ್ತುತ ಪಂಚಾಯತ ರಾಜ್ ವ್ಯವಸ್ಥೆಯಲ್ಲಿರುವ ಅಧಿಕಾರದ ವಿಕೇಂದ್ರೀಕರಣದ ಉದ್ದೇಶದಡಿಯಲ್ಲಿ ಕೂಡ ಇರುವಂತೆ, ಬೆಂಗಳೂರಿನಲ್ಲಿರುವ ಉಚ್ಚ ನ್ಯಾಯಾಲಯವು ತನಗಿರುವ ಅಧಿಕಾರವನ್ನು ಸಂಪೂರ್ಣವಾಗಿ ತನ್ನಲ್ಲಿಟ್ಟುಕೊಳ್ಳದೆ ಸ್ವಲ್ಪ ಭಾಗವನ್ನು ದ್ವಿತೀಯ ಪೀಠಕ್ಕೆ ಹಸ್ತಾಂತರಿಸಿದರೆ, ಈಗಿರುವ ಕೆಲಸದ ಒತ್ತಡವನ್ನು ಕಡಿಮೆ ಮಾಡಿಕೊಳ್ಳಬಹುದು. ಇವೆಲ್ಲವುಗಳಿಗಿಂತ ಮುಖ್ಯವಾಗಿ ಈ ಭಾಗದ ಕಕ್ಷಿಗಾರರಿಗೆ ನ್ಯಾಯ ಪಡೆಯುವಲ್ಲಿ ವಿಳಂಬವಾಗದೆ ಕ್ಷಿಪ್ರಗತಿಯಲ್ಲಿ ನ್ಯಾಯ ದೊರಕಿಸಿಕೊಳ್ಳಲು ಉತ್ತರ ಕರ್ನಾಟಕದಲ್ಲಿ ಉಚ್ಚ ನ್ಯಾಯಾಲಯದ ದ್ವಿತೀಯ ಪೀಠ ಸ್ಥಾಪಿಸುವುದು ಔಚಿತ್ಯಪೂರ್ಣವಾಗಿದೆ.

ಇಲಕಲ್ಲ — *- ಪ್ರಸನ್ನ ವೀ. ಅಲೆಗಾವಿ*

ಉತ್ತರ ಕರ್ನಾಟಕದವರ ಬೆದರಿಕೆಗಾಗಿ ರಾಜ್ಯದಲ್ಲಿ ಮತ್ತೊಂದು ಉಚ್ಚ ನ್ಯಾಯಾಲಯದ ಪೀಠವನ್ನು ಸ್ಥಾಪಿಸುವ ಅಗತ್ಯವಿಲ್ಲ. ಆದರೆ ಅಲ್ಲಿನ ಜನರ ಅನುಕೂಲತೆಯ ದೃಷ್ಟಿಯಿಂದ ಧಾರವಾಡದಲ್ಲಿ ಉಚ್ಚನ್ಯಾಯಾಲಯದ ಪೀಠ ಸ್ಥಾಪನೆಯ ಅವಶ್ಯಕತೆಯಿದೆ. ಇದರಿಂದ ಬೆಂಗಳೂರಿನ ನ್ಯಾಯಾಲಯಕ್ಕೆ ಇರುವ ಒತ್ತಡ ಕಡಿಮೆಯಾಗುತ್ತದೆ. ಖಟ್ಲೆಗಳನ್ನು ಶೀಘ್ರವಾಗಿ ವಿಲೇವಾರಿ ಮಾಡುವುದಕ್ಕೆ ಎರಡು ನ್ಯಾಯಾಲಯಗಳಿಗೂ ಸಾಧ್ಯವಾಗುವುದು. ಬಹುದೂರದ ಊರಿನ ಕಕ್ಷಿದಾರರಿಗೆ ಶ್ರಮ ತಪ್ಪುತ್ತದೆ. ಒಂದು ಪ್ರದೇಶದ ಜನರಿಗೆ ಸೌಲಭ್ಯಗಳನ್ನು ಕಲ್ಪಿಸಿಕೊಡುವಾಗ ಅಂಕಿ-ಅಂಶಗಳ ಆಧಾರಕ್ಕೆ ಜೋತುಬೀಳುವ ಅವಶ್ಯಕತೆಯಿಲ್ಲ. ಉಚ್ಚನ್ಯಾಯಾಲಯದ ಪೀಠಸ್ಥಾಪನೆಗಾಗಿ ಸೌಕರ್ಯ ಒದಗಿಸಲು ಹಣ ಖರ್ಚಾಗಬಹುದು. ಆದರೆ ಇದು ರಾಜ್ಯ ಸರಕಾರಕ್ಕೆ ಅಂತಹ ಹೊರೆ ಎನಿಸುವುದಿಲ್ಲ. ಸರಿಯಾದ ಯೋಜನೆಯಿಂದ ಏನನ್ನೂ ಸಾಧಿಸಲು ಸಾಧ್ಯ. ಪೀಠ ಸ್ಥಾಪನೆಯಿಂದ ಉತ್ತರ ಕರ್ನಾಟಕದ ಜನತೆಗೆ ರಾಜ್ಯ ಸರಕಾರ ನ್ಯಾಯ ಒದಗಿಸಿದಂತಾಗುತ್ತದೆ.

*ಬರೋಡ, ಗುಜರಾತ್* — *- ಸುಷಮ, ವಡೋದರ*

### ಗಾಂಧಿ ವಿಶೇಷಾಂಕ

ಸುಮಾರು ೪-೫ ವರ್ಷ ಪ್ರಾಯದ ಅಲೆಮಾರಿ ಭಿಕ್ಷುಕರ ಮಗುವೊಂದು ಪ್ರತಿದಿನವೂ ಹದಿನೈದು ದಿನಗಳ ವರೆಗೆ ಬಂದು ಆ ಮುಖಪುಟದಲ್ಲಿರುವ ಮಗುವನ್ನು ದಿಟ್ಟಿಸಿ ನೋಡುತ್ತಿದ್ದು ತುಂಬ ಹೊತ್ತಿನ ಮೇಲೆ ಹಿಂತಿರುಗುತ್ತಿತ್ತು.

ಬೆಂಗಳೂರು — **- ಇಂದಿರಾ ಕುಮಾರಿ**

### ಹಿಂದ್ ಸ್ವರಾಜ್

ಅಕ್ಟೋಬರ್ ಸಂಚಿಕೆಯಲ್ಲಿ ಬಂದ ಜಿ. ರಾಜಶೇಖರ ಅವರ 'ಹಿಂದ್ ಸ್ವರಾಜ್'ನ ವಿಶ್ಲೇಷಣೆ ತಪ್ಪು ಗ್ರಹಿಕೆಗಳಿಂದ ಅಸಂಗತ ತರ್ಕಗಳನ್ನು ಮಂಡಿಸುತ್ತಾ ಹೋಗಿದೆ. ಅದು ಪ್ರಕಟವಾದ್ದು ೧೯೦೮ರಲ್ಲಿ; ದಕ್ಷಿಣ ಆಫ್ರಿಕದ ಸತ್ಯಾಗ್ರಹದ ಕಾಲಕ್ಕೆ. ಆಗ ಹಿಟ್ಲರ್‌ನ ಹೆಸರಾಗಲಿ, ಸಂಘ ಪರಿವಾರವಾಗಲಿ ಅಸ್ತಿತ್ವದಲ್ಲೇ ಇರಲಿಲ್ಲ. 'ಆಧುನಿಕತೆ' ಆ ದಿನ ಯಾವ ಸ್ವರೂಪದಲ್ಲಿತ್ತು ಎಂಬ ಕಲ್ಪನೆಯನ್ನು ಲೇಖಕರು ಮಾಡಿಕೊಂಡಂತೆ ಇಲ್ಲ... ಸಾಮ್ರಾಜ್ಯಶಾಹಿ ಶಕ್ತಿಗಳು ಹೇಗೆ ಭಾರತವನ್ನು ಬಂಧಿಸಿಟ್ಟವು, ವಿಮೋಚನೆಗೆ ಹೇಗೆ ವಿಧ್ವಂಸಕ ದಂಗೆಗಳಿಂದ ಪ್ರಯೋಜನವಾಗದು, ಅಹಿಂಸಕ ಅಸಹಕಾರವೆಂಬ ಹೊಸ ಸಾಧನ ಉಪಯುಕ್ತವಾದೀತು, ಎಂದು ಒಬ್ಬ ಯುವ ಕ್ರಾಂತಿಕಾರನೊಡನೆ ಮಾಡಿದ ಸಂವಾದ ಅದು. ...'ಹಿಂದ್ ಸ್ವರಾಜ್' ಈಗ ಪ್ರಸ್ತುತವಾಗುವುದು ಅದರ ಅಕ್ಷರಶಃ ಅರ್ಥದಲ್ಲಲ್ಲ. ನಾಗರಿಕತೆ ಈ ಶತಮಾನದಲ್ಲಿ ಬೆಳೆದ ರೀತಿಯ ಬೇರುಗಳನ್ನು ಅದು ಪ್ರಶ್ನಿಸುತ್ತದೆ. ಈಗಲೂ ಈ ಮನೋಧರ್ಮ ದೂರವಾಗಿಲ್ಲ. ಆ ಪ್ರಶ್ನೆಗಳೇ ಇಂದು ಇನ್ನೂ ಪ್ರಖರವಾಗಿವೆ. ಮರು ಚಿಂತನೆಯೂ ಪ್ರಾರಂಭವಾಗಿದೆ. ಅಷ್ಟನ್ನು ಮಾತ್ರ ಗ್ರಹಿಸುವುದೊಳ್ಳೆಯದು.

*ಬೆಂಗಳೂರು* — ***- ಕೆ. ಎಸ್. ನಾರಾಯಣಸ್ವಾಮಿ***




### ದೊಡ್ಡವರ ಒಂದು ಜಗಳ

ಅಕ್ಟೋಬರ್ ಸಂಚಿಕೆಯಲ್ಲಿನ ಈ ಲೇಖನ ಓದುಗರಿಗೆ ಸಖೇದಾಶ್ಚರ್ಯ ಉಂಟುಮಾಡುತ್ತದೆ. ಸ್ವಾತಂತ್ರ್ಯ ಸಂಗ್ರಾಮದ ನಾಯಕರಾಗಿದ್ದ ಲೋಕಮಾನ್ಯ ಬಾಲ ಗಂಗಾಧರ ತಿಲಕರು ಒಬ್ಬ ಹಿಂದೂಧರ್ಮದ ಅಂಧಾಭಿಮಾನಿಯಾಗಿದ್ದರೆಂದು ನಾನು ತಿಳಿದಿರಲಿಲ್ಲ. ದಲಿತರ ಬಗ್ಗೆ ಕಾಳಜಿ ಇಲ್ಲದ, ಅದರಲ್ಲೂ ಅಸ್ಪೃಶ್ಯರ ಬಗ್ಗೆ ಪಕ್ಷಪಾತಿಯಾಗಿದ್ದು ಅಂಬೇಡ್ಕರ್‌ರವರ ಲೇಖನಗಳನ್ನು ತಮ್ಮ "ಕೇಸರಿ" ಪತ್ರಿಕೆಯಲ್ಲಿ ಪ್ರಕಟಿಸದೆ ಅವರ "ಮೂಕ ನಾಯಕ" ಪತ್ರಿಕೆಯ ಜಾಹಿರಾತನ್ನು ಸಹ ಪ್ರಕಟಿಸಲು ನಿರಾಕರಿಸಿದ್ದು ಅವರ ಹೆಸರಿಗೆ ಒಂದು ಕಳಂಕವೆಂದೇ ಹೇಳಬೇಕು. ಅವರಷ್ಟೇ ಖ್ಯಾತರಾಗಿದ್ದ ಅಗರ್‌ಕರ್ ಅವರು ಸಮಾಜಸುಧಾರಣೆಯನ್ನು ಸಮರ್ಥಿಸಿದ್ದಕ್ಕಾಗಿ ತಮ್ಮ ಪತ್ರಿಕೆಯ ಸಂಪಾದಕತ್ವದಿಂದ ಕಿತ್ತುಹಾಕಿದ್ದು ಲೋಕಮಾನ್ಯರಿಗೆ ತರವಲ್ಲದ್ದಾಗಿದೆ. ಈ ಹಿಂದೂ ಅಭಿಮಾನಿಯ ಮೇಲ್ಕಂಡ ವಿಷಯಗಳು ಭಾರತದ ಇತಿಹಾಸದಲ್ಲಿ ಮುಚ್ಚಿಹೋಗಿರುವುದು ವಿಷಾದನೀಯ.

ಊರುಕೆರೆ, ತುಮಕೂರು ತಾಲ್ಲೂಕು — ***- ಟಿ. ಕೆ. ಗೋವಿಂದರಾಜ್***

### ಮಕ್ಕಳಿಗೆ ಹಿಂಸೆ

ಮಕ್ಕಳಿಗೆ ಹೆತ್ತವರು, ಶಿಕ್ಷಕರು ಕೊಡುವ ಕಿರುಕುಳವನ್ನು ಡಾ॥ ಸಿ. ಆರ್. ಚಂದ್ರಶೇಖರ್ ಅರ್ಥಗರ್ಭಿತವಾಗಿ ವಿವರಿಸಿದ್ದಾರೆ. ಐ. ಕ್ಯೂ. ವಿವರಗಳು ನಮಗೆ ವಿವರವಾಗಿ ಗೊತ್ತಿರಲಿಲ್ಲ. ಅವರ ಲೇಖನದಿಂದ ಪ್ರೇರಿತನಾದ ನಾನು ಮಕ್ಕಳು ಪಡುವ ಕಷ್ಟಗಳನ್ನು ವಿವರಿಸುವ ಪ್ರಹಸನ ಅಥವಾ ಕಿರುನಾಟಕ ಬರೆದು, ಆಡಿಸಲು ಯೋಜಿಸಿದ್ದೇನೆ.

*ಹೂವಿನ ಹಡಗಲಿ* — ***- ಸುರೇಶ ಅಂಗಡಿ***

### ಶಾಸಕರ ಸವಲತ್ತುಗಳು

ನಮ್ಮ ರಾಜ್ಯದ ರಸ್ತೆಗಳು, ಬಸ್ ನಿಲ್ದಾಣಗಳು, ನೀರಾವರಿ, ವಿದ್ಯುಚ್ಛಕ್ತಿ ಕುಂದುಕೊರತೆಗಳು, ಎಲ್ಲಾ ಶಿಥಿಲವಾಗಿವೆ. ಸರ್ಕಾರಕ್ಕೆ ಹಲವು ವಿಧಗಳಲ್ಲಿ ಹಣ ಕೊಡುವ ಸಾರ್ವಜನಿಕರಿಗೆ ಯಾವುದೇ ಸೌಲಭ್ಯ ನೀಡದಿರುವುದು ಇತ್ತೀಚಿನ ದಿನಗಳಲ್ಲಿ ಸಾಮಾನ್ಯವಾಗಿ ಹೋಗಿದೆ. 'ಕೊಟ್ಟವನು ಕೋಡಂಗಿ, ತಕೊಂಡವನು ಈರಭದ್ರ' ಎಂಬಂತಾಗಿದೆ, ದುಡ್ಡು ಕೊಡುವವನ ಪಾಡು. ಶಾಸಕರ ಅಧಿವೇಶನಗಳಲ್ಲಿ ಹಾಸ್ಯದ ಮಾತಿಗೆ ಅವಕಾಶವಿದೆಯೇ ಹೊರತು ಅಮೂಲ್ಯವಾದ ವಿಚಾರಗಳ ಬಗ್ಗೆ ತಲೆ ಕೆಡಿಸಿಕೊಳ್ಳುವ ಅವಕಾಶ ದುರ್ಲಭವಾಗಿದೆ.

*ಬೆಂಗಳೂರು* — ***ಹ. ಚ. ಸತ್ಯನಾರಾಯಣ ಉರಾಳ***

### 'ಹೊಸತು'

ಗ್ರಾಮೀಣ ಪ್ರದೇಶದ ಜನಪದ ಆಟ, ನಾಟಿ ವೈದ್ಯ, ಜನಪದ ಹಾಡು-ಕುಣಿತ-ಹಬ್ಬ ಆಚರಣೆ, ಇನ್ನಿತರ ಸಾಂಸ್ಕೃತಿಕ ಹೆಗ್ಗಳಿಕೆ ಸಾರುವ ವಸ್ತುವಿಷಯ ಆದ್ಯತೆ ಪಡೆಯಲಿ. ಪ್ರಾಚೀನ ಐತಿಹಾಸಿಕ ಲೇಖನಗಳಿಗೂ ಪತ್ರಿಕೆಯಲ್ಲಿ ಸ್ಥಳವಿರಲಿ.

*ಗೋಗಿ, ಜಿಲ್ಲೆ : ಕಲಬುರ್ಗಿ* — ***- ಡಿ. ಎನ್. ಅಕ್ಕಿ***

ಪತ್ರಿಕೆ ಪೈಪೋಟಿಗಾಗಿ ಇರದೆ ಸೃಜನಶೀಲತೆಯನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಲಿ. ಸಾಹಿತ್ಯ, ಯಕ್ಷಗಾನ, ಸಂಗೀತ, ಕ್ರೀಡೆ, ವಿಜ್ಞಾನ, ಆಯುರ್ವೇದ, ಹೀಗೆ ವೈವಿಧ್ಯಮಯವಾದ ಲೇಖನಗಳೊಂದಿಗೆ ಪತ್ರಿಕೆಯ ವ್ಯವಸಾಯ ನಿರಂತರ ಸಾಗಲಿ.

ಕೆಂಬೋಡಿ ಮನೆ, ಮಂಗಳೂರು ತಾ. — ***- ಕೇಶವ ಕೆ. ಪೂಜಾರಿ***

# ಯುವ ಶಕ್ತಿ

## ನವೀನ್ ಜೋಸೆಫ್

ಒರಿಸ್ಸಾದಲ್ಲಿ ನಡೆದ ಗ್ರಹಾಂ ಸ್ಟೈನ್ಸ್‌ರ ಬರ್ಬರ ಹತ್ಯೆಯ ಬಗ್ಗೆ ಗೆಳೆಯರೆಲ್ಲರೂ ಕೂಡಿ ಚರ್ಚಿಸುತ್ತಿದ್ದೆವು. ಒಬ್ಬ ಸ್ನೇಹಿತ ಮಾತನಾಡುತ್ತಾ ಅವನ ಹಾಸ್ಟೆಲ್‌ನ ಉದಾಹರಣೆ ಕೊಟ್ಟ. ಅದು ಒಂದು ಜಾತಿ ಸಮುದಾಯಕ್ಕೆ ಸೇರಿದ ವಿದ್ಯಾರ್ಥಿ ನಿಲಯ. ಸುಮಾರು ೨೫ರಿಂದ ೩೦ ಮೆಡಿಕಲ್, ಇಂಜಿನಿಯರಿಂಗ್ ವಿದ್ಯಾರ್ಥಿಗಳಿರುವ ಆ ಹಾಸ್ಟೆಲ್‌ನಲ್ಲಿ ಸ್ಟೈನ್ಸ್‌ರ ಹತ್ಯೆಗೆ ಬಂದ ಪ್ರತಿಕ್ರಿಯೆಯಂತೂ ಒಬ್ಬ 'ಅಪ್ಪಟ ಭಾರತೀಯ' ನಾಚಿಕೆ ಪಡುವಂಥದ್ದು. ಭಾರತ ಮತ್ತು ಪಾಕಿಸ್ತಾನ ತಂಡಗಳ ನಡುವಿನ ಕ್ರಿಕೆಟ್ ಮ್ಯಾಚ್‌ನಲ್ಲಿ ಭಾರತ ವಿಜಯಿಯಾದಾಗ ಉಂಟಾಗುವಷ್ಟು ಸಂತೋಷ ತುಂಬಿತ್ತಂತೆ ! ಇದನ್ನು ಕೇಳಿದ ನನಗಂತೂ ದಿಗಿಲು ಬಡಿದಂತಾಗಿತ್ತು.

ದೇಶದಲ್ಲಿ ಕೋಮುವಾದಿಗಳ ತಾಂಡವ ನೃತ್ಯ ಪರಾಕಾಷ್ಠೆ ತಲುಪಿದೆ; ಧರ್ಮಾಂಧತೆ ಕಾಡ್ಗಿಚ್ಚಿನ ರಭಸ ಪಡೆದು ಆತಂಕಕಾರಿ ವಿಷಯವಾಗಿದೆ. ಆದರೆ ಇದಕ್ಕಿಂತಲೂ ರೌದ್ರಾಯಮಾನವಾದುದು ದೇಶದ ಯುವಜನತೆ ಇದರ ಬಲಿಪಶುಗಳಾಗುತ್ತಿರುವುದು. ಹತ್ತಾರು ಧರ್ಮಗಳು ಹುಟ್ಟಿ ಬೆಳೆದ ಭಾರತಮಾತೆಯ ಮಡಿಲಿನಲ್ಲಿ ತಾವು ವಿಷಜಂತುಗಳಾಗಿದ್ದು ಸಾಲದೆಂಬಂತೆ, ಮುಂದಿನ ಜನಾಂಗಕ್ಕೆ ತಮ್ಮ 'ಕೊಂಡಿ'ಯನ್ನು ಬೆಳೆಸಲೆತ್ನಿಸುತ್ತಿರುವ ಕೆಲವು ಮುದುಕರು ಮತ್ತವರ ಸಂಘಟನೆಗಳು ದೇಶದ ಅತ್ಯಂತ ದೊಡ್ಡ ಶತ್ರುಗಳು. ಕೆಳಗೆ ಬಿದ್ದರೂ ಮೀಸೆ ಮಣ್ಣಾಗದು ಎಂಬಂತೆ ಎಂತಹ ಪರಿಸ್ಥಿತಿಯಲ್ಲೂ ಸದಾ ಮೇಲ್ಪಂಕ್ತಿಯಲ್ಲಿ ಬದುಕಲಿಚ್ಛಿಸುವ ಇವರೇ ಧರ್ಮಯುದ್ಧವನ್ನು ಆರಂಭಿಸಿದ್ದಾರೆ. ಅಗಾಧ ಚೈತನ್ಯದ ಆಗರಗಳಾದ ಬಿಸಿರಕ್ತದ ಯುವಜನತೆಗೆ ತಮ್ಮ ಸಂಕುಚಿತತೆಯ ಪಾಠ ಬೋಧಿಸುತ್ತಾ ಧರ್ಮಾಂಧತೆಯನ್ನು ಸದಾ ಜೀವಂತವಾಗಿರಿಸಲು ಯತ್ನಿಸುತ್ತಿದ್ದಾರೆ.

ಮೇಲೆ ಉದಾಹರಿಸಿದ ವಿದ್ಯಾರ್ಥಿನಿಲಯದ ನಿಕಟವರ್ತಿಯೊಬ್ಬ ನನಗೆ ಸ್ವಲ್ಪದಿನಗಳ ಮೇಲೆ ಕಟುಸತ್ಯವೊಂದನ್ನು ವಿವರಿಸಿದ. ಮತೀಯ ವಿದ್ಯಾರ್ಥಿ ಸಂಘಟನೆಯೊಂದರ ಒಬ್ಬ ಕಾರ್ಯಕರ್ತ ಆ ಹಾಸ್ಟೆಲ್‌ಗೆ ಸದಾ ಭೇಟಿ ಕೊಡುತ್ತಿದ್ದ. ಕೇವಲ ಭೇಟಿ ನೀಡಿದ್ದರೆ ಈ ಲೇಖನ ಬರೆಯುವ ಗೋಜಿಗೆ ಹೋಗುತ್ತಿರಲಿಲ್ಲ. ಬದಲಾಗಿ, ''ಸಂಘ ಪರಿವಾರ'' ದವರ ಮುಖವಾಣಿಗಳನ್ನು ತಂದು, ಅಲ್ಲಿನ ಅಮಾನವೀಯ ದ್ವೇಷಪೂರಿತ ವರದಿ, ಲೇಖನಗಳನ್ನು ಇನ್ನೂ ಲೇಪ ಹಚ್ಚಿ ವರ್ಣಿಸುತ್ತಿದ್ದ. ವಿದ್ಯಾರ್ಥಿಗಳ ಭಾವನೆಗಳನ್ನು ಶೋಷಣೆ ಮಾಡುತ್ತಿದ್ದ! 'ದೇಶಪ್ರೇಮ'ವನ್ನು 'ಕೋಮುಪ್ರೀತಿ'ಯೊಂದಿಗೆ ಹೋಲಿಸುತ್ತಿದ್ದ. ಹೀಗೆ ಇಲ್ಲಿರುವ ಹಲವಾರು ಸಮುದಾಯ ನಿಲಯಗಳ (ಸೋಕಾಲ್ಡ್ ಮೇಲ್ವರ್ಗದವರ) ಸಾವಿರಾರು ಬಿಸಿ ನೆತ್ತರಿನ ತರುಣರ ತಲೆ ತೊಳೆಯುವ ಕೆಲಸದಲ್ಲಿ ಮಿಶನರಿ ಆಗಿದ್ದ.

ದೇಶದಲ್ಲಿ ಹೆಚ್ಚು ಮಾರಾಟವಾಗುವ ವಾರಪತ್ರಿಕೆ 'ಇಂಡಿಯಾ ಟುಡೇ' ಇಂತಹ ಒಂದು ಪ್ರಸಂಗವನ್ನು ನೀಡುತ್ತದೆ. ರಕ್ಷಿತ್ ಪಾಂಡ್ಯನ್ ೨೨ ವರ್ಷದ ಯುವಕ. ತನ್ನ ಹನ್ನೆರಡನೇ ತರಗತಿಯಲ್ಲಿಯೇ ಶಾಲೆ ಬಿಟ್ಟ. ಭಜರಂಗದಳದವರು ಇವನನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡರು. ಹಣೆಯಲ್ಲಿ ವೀರ ತಿಲಕ, ಕೈಯಲ್ಲಿ ತ್ರಿಶೂಲ ಕೊಟ್ಟರು. 'ತಮ್ಮ ದೇಶಪ್ರೇಮದ ನೀತಿ' ಬೋಧಿಸಿದರು. ಇದೇ ರಕ್ಷಿತ್ ಪಾಂಡ್ಯನ್ ತನ್ನ ಇತರ ಸ್ನೇಹಿತರೊಡನೆ ಸೇರಿ ಗುಜರಾತ್‌ನ ಪಾದ್ರಿ ಮತ್ತು ಕನ್ಯಾಸ್ತ್ರೀಯರ ಮೇಲೆ ಹಲ್ಲೆ ಮಾಡಿದ. ಅಷ್ಟೇ ಅಲ್ಲದೆ ಈ ಧೀರ (?) ಕಾರ್ಯವನ್ನು ಮೆಲುಕು ಹಾಕುವಾಗ ಅವನ ಮುಖದಲ್ಲಿ ಮುಗುಳ್ನಗೆ ಹೊರಚೆಲ್ಲುತ್ತದೆ. ೮೦೦ ರೂಪಾಯಿಗಳ ಸಂಭಾವನೆ ಪಡೆಯುವ ಇಂಥವರೇ ಧರ್ಮಾಂಧತೆಯ ಕಾಳಗದಲ್ಲಿ ಹಲ್ಲು ಕಡಿಯುತ್ತಾ ಕಾದಿರುವ ಸೈನಿಕರು! ಇಂತಹ ಎಷ್ಟೋ ಪ್ರಸಂಗಗಳನ್ನು ಪತ್ರಿಕೆ ಕೊಡುತ್ತದೆ. (೧೮.೧.೯೯ರ ಸಂಚಿಕೆ ನೋಡಿ).

ಇಂದು ದೇಶದಲ್ಲಿ ನಡೆಯುವ ಯಾವುದೇ ಕೋಮು ಗಲಭೆಗಳಲ್ಲಿ ಹೀರೋ-ಜೀರೋಗಳಾಗುವುದು ಯುವಕರೇ. ದೇಶದ ರಥ ಎತ್ತ ಸಾಗುತ್ತಿದೆ ಎಂಬುದನ್ನು ಊಹಿಸುವುದೇ ಅಸಾಧ್ಯವಾದಂಥಹ ಈ ಪರಿಸ್ಥಿತಿಯಲ್ಲಿ ಯುವ ಜನತೆ ದಾರಿ ತಪ್ಪುತ್ತಿರುವುದು ದೇಶದ ದುರಂತಗಳಲ್ಲಿ ಒಂದು. ಪ್ರಸ್ತುತ ಭಾರತದ ಎಡಬಿಡಂಗಿ ಸ್ಥಿತಿಯಲ್ಲಿ ಸ್ಥಿರತೆಯನ್ನೊದಗಿಸಿ ಕಳಚಿದ್ದ ರಥದ ಕಡಾಣಿ ಹಾಕಲು ಯುವಶಕ್ತಿಯಿಂದ ಮಾತ್ರವೇ ಸಾಧ್ಯ. ಧರ್ಮ, ಜಾತಿಗಳ ಜಾತಕ ಹಿಡಿದು ದೇಶದ ಭವಿಷ್ಯ ಹೇಳುತ್ತಿದ್ದವರು ನಿರ್ನಾಮವಾಗಿ, ಸಹಸ್ರಮಾನಗಳ ನಾಗರಿಕತೆಯ ಇತಿಹಾಸ ಜ್ಞಾನದೊಂದಿಗೆ, ವಿಶ್ವದ ಕ್ಷಿಪ್ರಗತಿಯ ಚಿಂತನೆ, ವಿಚಾರ, ಅನ್ವೇಷಣೆಗಳಿಗೆ ಸ್ಪಂದಿಸುವ ಹೊಸದೊಂದು ತಲೆಮಾರು ಬೆಳೆಯಬೇಕು. ಬಹುಶಃ ಆಗ ಮಾತ್ರ ದೇಶದ ಪ್ರಗತಿಯ ಕನಸು ಕಾಣಲು ಸಾಧ್ಯ. ಆದರೆ, ಈಗ ಎದುರಿರುವ ಪ್ರಶ್ನೆಯೆಂದರೆ ಅಂತಹ ಹೊಸ ತಲೆಮಾರು ರೂಪುಗೊಳ್ಳಲು ಸಾಧ್ಯವೆ? ಉತ್ಕಟವಾದ ದೇಶಾಭಿಮಾನ, ದೇಶಭಕ್ತಿಯ ಕೊಂಡಿಗಳು ಬೆಳೆಯಬಹುದೆ? ಅಂತಹ ಸ್ಫೂರ್ತಿ, ಚೈತನ್ಯ ನೀಡುವ ಚೇತನಗಳಿವೆಯೇ?

ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿದ್ದಂತಹ ಸ್ಫೂರ್ತಿಯ ಚಿಲುಮೆಯನ್ನು ಸೃಷ್ಟಿಸುವ ಅಗತ್ಯ ಈಗ ಇದೆ. 'ಯುವ ಮನಸ್ಸುಗಳು' ವೈಚಾರಿಕತೆ ಸಂಘರ್ಷಗಳಲ್ಲಿ ತೊಡಗಬೇಕು. ಆದರೆ, ಪ್ರಸ್ತುತ ಯುವಶಕ್ತಿಯ ಅಗಾಧ ಚೈತನ್ಯಕ್ಕೆ ಚಾಲನೆ ನೀಡುವ ಸ್ಫೂರ್ತಿ ನಮ್ಮಲ್ಲಿ ಕಂಡುಬರುತ್ತಿಲ್ಲ. ಸ್ವಾತಂತ್ರ್ಯ ಸಂಗ್ರಾಮದ ಸಮಯದಲ್ಲಿದ್ದಂತಹ ಸಮಾಜವಾದ ಸಮತಾವಾದಗಳ ವಿಚಾರಧಾರೆಗಳ ಹಿನ್ನೆಲೆಯಿಂದ ಬಂದವರು ತಮ್ಮ ಜೀವನ ಭದ್ರಪಡಿಸಿಕೊಂಡು ಮೌನವಾದರು. ಎಪ್ಪತ್ತರ ದಶಕದಲ್ಲಿ ಲೋಹಿಯಾ, ಜೆ. ಪಿ.ಯವರ ಮಾರ್ಗದರ್ಶನದಲ್ಲಿ ಮೇಲೆ ಬಂದವರು ಉನ್ನತ ಸ್ಥಾನಗಳಿಗೇರಿ ತಮ್ಮ ತತ್ವಗಳಿಗೆ ತಿಲಾಂಜಲಿಯಿತ್ತರು. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ, ಕುವೆಂಪು, ಬೇಂದ್ರೆ, ಕಾರಂತರು ಸಾಹಿತ್ಯ, ಸಂಸ್ಕೃತಿ . ಕ್ಷೇತ್ರಗಳಲ್ಲಿ ತಮ್ಮ ನಂತರದ ಯುವಪೀಳಿಗೆಯನ್ನು ಬೆಳೆಸಿದರು. ಆ ಒಂದು ತಲೆಮಾರು ಕೂಡ ಮಿಂಚಿದ್ದೇನೋ ನಿಜ. ಆದರೆ ಈಗ ನಿಸ್ತೇಜರಾಗಿ ನಮ್ಮನ್ನು ಹುರಿದುಂಬಿಸುವ ಗೋಜಿಗೆ ಹೋಗದೆ ತಮ್ಮ ಪಾಡಿಗೆ ತಾವಿದ್ದಾರೆ. ಇದೇ ಕಾರಣದಿಂದ ವಿಚ್ಛಿದ್ರಕಾರಿ ಶಕ್ತಿಗಳು, ಪಟ್ಟಭದ್ರ ಹಿತಾಸಕ್ತಿಗಳ ಹಾಗೂ ಶೋಷಣೆಯ ಕೈಗಳೊಳಗೆ ಯುವಶಕ್ತಿ ನಶಿಸಿಹೋಗುತ್ತಿದೆ. ಅಪಾಯಕಾರಿಯಾಗಿ ರೂಪುಗೊಳ್ಳುತ್ತಿದೆ.

ಎಲ್ಲಾ ಮತಧರ್ಮಗಳ ಮುಖಂಡರಂತೂ ಯುವಶಕ್ತಿಯನ್ನು ತಮ್ಮ ಮತದ ಪ್ರಚಾರಕ್ಕೆ ಬಳಸಿಕೊಳ್ಳುತ್ತಿರುವುದು ಮತ್ತೊಂದು ಶೋಚನೀಯ ಪ್ರಸಂಗ. ಇವರೆಲ್ಲಾ ದೇಶದ ತರುಣ - ತರುಣಿಯರನ್ನು ಕ್ರಿಯಾತ್ಮಕವಾದ ಸಾರ್ವಜನಿಕ ಬದುಕಿಗೆ ಬರಗೊಡದೆ ಇನ್ನೂ ಹಳಸಿರುವ ಮತೀಯ ನಿಯಮಗಳೊಳಗೇ ಬಂಧಿಸಿದ್ದಾರೆ. ಮತಧರ್ಮ ಇಂದು ಯುವಶಕ್ತಿಯನ್ನು ಊನಗೊಳಿಸುತ್ತಿರುವ ಹೋಮವಾಗಿದೆ. ಮತ್ತೆ ಇವು ೧೪ ಮತ್ತು ೧೫ನೆಯ ಶತಮಾನಗಳ ಯೂರೋಪ್ ಇತಿಹಾಸದ ಪುನರಾವರ್ತನೆಗೆ ಕಾಯುತ್ತಿವೆಯೇನೊ?

ಒಟ್ಟಿನಲ್ಲಿ ದೇಶದ ಬಗ್ಗೆ ಕನಸು ಕಾಣಬೇಕಾದರೆ, ಉತ್ತಮ ಯುವಶಕ್ತಿಯ ಸ್ವಪ್ನ - ಅಸ್ತಿತ್ವ ಅತ್ಯಗತ್ಯ. ನಿಂತ ಕೊಚ್ಚೆ, ರಾಡಿಗಳ ಹಳೆ ನೀರು ತೊಲಗಿ, ನಿರಂತರ ಸಾಗುವ ನದಿಗಳ ಜನನವಾಗಲಿ. ಹೊಚ್ಚ ಹೊಸ 'ಕನಸುಗಳ ಹಸಿರು ಮೂಡಲಿ'.

*''ಗಿಡದ ರೆಂಬೆ ಕೊಂಬೆಗಳಲ್ಲಿ ಚಿಗುರು ಕಣ್ಣ ತೆರೆದಿದೆ*
*ಎಲ್ಲಿ ನೋಡಿದಲ್ಲಿ ಚೆಲುವು ಗೆಲ್ಲುಗಂಬ ನಿಲ್ಲಿಸಿದೆ*
*ಹೊಸತು ಆಸೆ ಮೂಡಿದೆ, ಹರುಷ ಲಾಸ್ಯವಾಡಿದೆ*
*ಓ ! ವಸಂತ ನಿನಗನಂತ ಆಲಿಂಗನ ಸಂದಿದೆ*
*ಸೃಷ್ಟಿ ನೋಂತು ನಿಂದಿದೆ.''*

ನವೀನ್ ಜೋಸೆಫ್
ಪತ್ರಿಕೋದ್ಯಮ ವಿಭಾಗದ ವಿದ್ಯಾರ್ಥಿ, ಮಹಾರಾಜಾ ಕಾಲೇಜು, ಮೈಸೂರು-೫೭೦೦೦೬

# ಕೊಡಗಿನ ಕೆಲವು ವಿದ್ಯಮಾನಗಳು

ಐ. ಆರ್. ಪ್ರಮೋದ್

ಕೊಡಗು ಜಿಲ್ಲೆಯಲ್ಲಿರುವ ಜಾತಿಗಳನ್ನು ಭೂಮಾಲಿಕ, ಮಧ್ಯಮ ಕಸುಬುದಾರ ಮತ್ತು ಭೂರಹಿತ ವಿಭಾಗಗಳ ಜನ ಎಂದು ವರ್ಗೀಕರಿಸಬಹುದು. ಕೃಷಿ ಕೂಲಿಗಾರರಾಗಿರುವ ಅಥವಾ ಇನ್ನೂ ಆಹಾರ ಸಂಗ್ರಹಣೆಯ ಹಂತದಲ್ಲಿದ್ದು ಕಾಡುಗಳಲ್ಲಿ ಬದುಕುತ್ತಿರುವ ಬುಡಕಟ್ಟುಗಳು ಜಿಲ್ಲೆಯಲ್ಲಿ ಗಣನೀಯ ಸಂಖ್ಯೆಯಲ್ಲಿವೆ. ಇಡೀ ಕರ್ನಾಟಕದಲ್ಲಿ ಬುಡಕಟ್ಟುಗಳಿಗೆ ಮೀಸಲಿಟ್ಟ ಎರಡು ವಿಧಾನಸಭಾ ಕ್ಷೇತ್ರಗಳ ಪೈಕಿ ಒಂದು, ವೀರಾಜಪೇಟೆ ವಿಧಾನಸಭಾ ಕ್ಷೇತ್ರ, ಕೊಡಗಿನಲ್ಲಿದೆ.

ಕೊಡವರದು ಭೂಮಾಲಿಕ ಜಾತಿ. ಅವರು ಜಾತಿ ಶ್ರೇಣಿಯಲ್ಲಿ ಮೇಲು ತುದಿಯಲ್ಲಿರುವವರು. ಮುಖ್ಯವಾಗಿ ವೀರಾಜಪೇಟೆ ತಾಲ್ಲೂಕಿನಲ್ಲಿ ಹೆಚ್ಚಿರುವ ಈ ಜಾತಿಯಲ್ಲಿ ನಿರಕ್ಷರಸ್ಥರೇ ಇಲ್ಲ. ಆಧುನಿಕ ವಿದ್ಯಾಭ್ಯಾಸ ಮತ್ತು ಐರೋಪ್ಯ ಜೀವನ ಕ್ರಮಕ್ಕೆ ಬಹು ಬೇಗ ಒಗ್ಗಿಕೊಂಡವರು.

ಬ್ರಿಟಿಷ್ ಆಳ್ವಿಕೆಯಲ್ಲಿ ಕೊಡಗು ಪ್ರತ್ಯೇಕವಾದ ರಾಜ್ಯವಾಗಿತ್ತು. ೧೯೫೬ರಲ್ಲಿ ಕರ್ನಾಟಕದೊಡನೆ ವಿಲೀನವಾಯಿತು. ಕೊಡಗಿನಲ್ಲಿ ಏಕೀಕರಣಕ್ಕೆ ವಿರೋಧವಾಗಿ ಚಳುವಳಿ ನಡೆದಿತ್ತು. ಕರ್ನಾಟಕದೊಡನೆ ವಿಲೀನವಾದದ್ದು ದೊಡ್ಡ ದುರಂತ ಎಂಬ ವಿಷಣ್ಣತೆಯ ಭಾವ ಆ ಬಳಿಕ ಒಳಗೊಳಗೆ ಜಿಲ್ಲೆಯಲ್ಲಿ ಹರಿಯುತ್ತಿತ್ತು.

ಕೊಡಗು ಪ್ರತ್ಯೇಕ ರಾಜ್ಯವಾಗಿದ್ದಾಗ ಸುಖೀ ರಾಜ್ಯವಾಗಿತ್ತು, ಏಕೀಕರಣವಾದದ್ದೇ ಅಧಃಪತನದ ಆರಂಭವಾಯಿತು ಎಂಬ ಪ್ರಚಾರ ನಡೆದುಬರುತ್ತಿತ್ತು. ಮೊದಲು ಭಾರತೀಯ ಜನಸಂಘ, ಆಮೇಲೆ ಭಾರತೀಯ ಜನತಾ ಪಕ್ಷಗಳಂತೂ ಈ ಹತಾಶೆಯ ಭಾವನೆಯನ್ನು ಬಹಳ ತಂತ್ರಗಾರಿಕೆಯಿಂದ ದುರುಪಯೋಗಪಡಿಸಿದವು. ಕೊಡಗಿನಲ್ಲಿ ವಾಸಿಸುತ್ತಿರುವ ಮಲೆಯಾಳಂ ಮಾತನಾಡುವ ಮುಸ್ಲಿಮರ ವಿರುದ್ಧ ದ್ವೇಷ ಸಾಧಿಸುವ ಪ್ರಚಾರವನ್ನು ಹಿಂದುತ್ವವಾದಿಗಳು ಸತತವಾಗಿ ನಡೆಸಿದರು; ಕೋಮು ಗಲಭೆಗಳನ್ನು, ದಾಂಧಲೆಗಳನ್ನು ನಡೆಸಿದರು. ಆರ್ಥಿಕ ಬಿಕ್ಕಟ್ಟು, ನಿರುದ್ಯೋಗ ಸಮಸ್ಯೆ ಹಾಗೂ ಎಡಪಂಥೀಯ ಪ್ರಜಾಪ್ರಭುತ್ವವಾದಿ ಚಳುವಳಿಯ ದೌರ್ಬಲ್ಯದಿಂದಾಗಿ ಜನವಿಭಾಗದ ಈ ಅತೃಪ್ತಿಯನ್ನು ಬಳಸಿಕೊಳ್ಳಲು ಕೋಮುವಾದಿಗಳಿಗೆ ಸಾಧ್ಯವಾಯಿತು.

ಕೊಡಗಿನ ಮುಖ್ಯ ಊರುಗಳಲ್ಲಿ ಮತ್ತು ಹೊರ ಜಿಲ್ಲೆಗಳಲ್ಲಿ ಕೂಡ ಕೊಡವ ಸಮಾಜ ಎನ್ನುವ ಸಂಘಟನೆಗಳಿವೆ. ಕೊಡವ ಜಾತಿ ಸಂಘಟನೆಗಳಾದ ಈ ಸಂಸ್ಥೆಗಳು ಕಲ್ಯಾಣ ಮಂಟಪ ಕಟ್ಟಿಸುವುದು, ಹುತ್ತರಿ, ಕೈಲುಪೊಳು ಹಬ್ಬಗಳನ್ನು ನಡೆಸುವುದು, ಆಟೋಟ ಸ್ಪರ್ಧೆಗಳನ್ನು ನಡೆಸಿಕೊಂಡು ಹೋಗುವುದು ಬಿಟ್ಟರೆ ಬೇರೆ ಯಾವ ಗೋಜಿಗೂ ಹೋಗುವುದಿಲ್ಲ.

ಇತ್ತೀಚಿನ ವರ್ಷಗಳಲ್ಲಿ ಅಖಿಲ ಕೊಡವ ಸಮಾಜ ಎನ್ನುವ ಹೆಸರಿನ ಸಂಘಟನೆ ಪ್ರಚಾರಕ್ಕೆ ಬಂದಿದೆ. ಆದರೆ, ಈ ಹೆಸರು ಸೂಚಿಸುವಂತೆ, ಈ ಸಂಘಟನೆ ಸಮಸ್ತ ಕೊಡವರ ಪ್ರಾತಿನಿಧಿಕ ಸಂಸ್ಥೆಯಲ್ಲ. ಪ್ರಾಯಶಃ ಯಾವ ಜಾತಿ ಸಂಘಟನೆಯೂ ಆ ಜಾತಿಯ ಎಲ್ಲ ಸಾಮಾನ್ಯರ ಆಶೋತ್ತರಗಳನ್ನು ಪ್ರತಿನಿಧಿಸಲು ಸಾಧ್ಯವೂ ಇಲ್ಲ.

ಕೊಡಗಿನಲ್ಲಿ ಇತ್ತೀಚಿನ ವರ್ಷಗಳಲ್ಲಿ ಪ್ರತ್ಯೇಕ ರಾಜ್ಯವಾಗಬೇಕೆನ್ನುವ ಚಳುವಳಿ ನಡೆಯುತ್ತಿದೆ. ಕೊಡಗು ರಾಜ್ಯ ಮುಕ್ತಿ ಮೋರ್ಚಾ (ಕೆ.ಆರ್.ಆರ್.ಎಂ.) ಎಂಬ ಸಂಘಟನೆ ಈ ಚಳುವಳಿಯ ಮುಂಚೂಣಿಯಲ್ಲಿದೆ.

*ಕರ್ನಾಟಕದ ಬೇರೆಷ್ಟೋ ಪ್ರದೇಶಗಳಲ್ಲಿರುವಂತೆ ಕೊಡಗಿಗೆ ವಿಶಿಷ್ಟ ಸಾಂಸ್ಕೃತಿಕ ಚಹರೆ ಇದೆ. ರಾಜ್ಯದ ಉಸಿರಾದ ಕಾವೇರಿ ಈ ಜಿಲ್ಲೆಗೆ ಮಹತ್ತರ ಸ್ಥಾನ ಕಲ್ಪಿಸಿಕೊಟ್ಟಿದೆ. ಶ್ರೀಮಂತ ಕಾಫಿ ತೋಟಗಳ ಮಾಲಿಕರಿರುವಂತೆ ಬಡಕುಟುಂಬಗಳಿಗೆ ಸೇರಿದ ಕೂಲಿಗಾರರೂ ಇಲ್ಲಿದ್ದಾರೆ. ಪ್ರಾದೇಶಿಕ ಅಸಮತೋಲನದ ಪ್ರಭಾವವು ಈ ಜಿಲ್ಲೆಯಲ್ಲಿ ಕಂಡುಬರುವಂತಾಗಿದ್ದರೆ ನಮ್ಮ ಸರ್ಕಾರದ ಯೋಜನೆಗಳ ಕಾರ್ಯವೈಫಲ್ಯ ಅದಕ್ಕೆ ಕಾರಣ. ಕೊಡಗು ಒಂದು ಪ್ರತ್ಯೇಕ ರಾಜ್ಯವಾಗಬೇಕೆಂಬ ರಾಜಕೀಯ ಧೋರಣೆಯು ಎಷ್ಟು ಸಮಂಜಸವೆಂಬುದು ಪ್ರಶ್ನಾರ್ಹವಾಗಿದೆ. ಈ ಹಿನ್ನೆಲೆಯಲ್ಲಿ ಒಂದು ವಿಶ್ಲೇಷಣೆ ಇಲ್ಲಿದೆ.*

(ಹೆಸರನ್ನು ಸಹ ಬೇರೆಡೆಯಿಂದ ಪಡೆದುಕೊಂಡಿರುವುದನ್ನು ನಾವಿಲ್ಲಿ ಗಮನಿಸಬಹುದು.)

ಕೊಡಗಿನ ಎಲ್ಲ ಸಮಸ್ಯೆಗಳಿಗೆ ಪ್ರತ್ಯೇಕ ರಾಜ್ಯವೊಂದೇ ಪರಿಹಾರ ಎನ್ನುವ ನೆಲಗಟ್ಟಿನ ಮೇಲೆ ನಡೆಯುತ್ತಿರುವ ಈ ಆಂದೋಲನಕ್ಕೆ ವೀರಾಜಪೇಟೆ ತಾಲ್ಲೂಕಿನಲ್ಲಿ ಬೆಂಬಲ ಜಾಸ್ತಿಯಿದೆ.

೧೯೯೯ರ ಜುಲೈ ತಿಂಗಳಲ್ಲಿ ಅಖಿಲ ಕೊಡವ ಸಮಾಜದ ಅಧ್ಯಕ್ಷರು ಕರ್ನಾಟಕದ ಮುಖ್ಯಮಂತ್ರಿಗಳಿಗೆ ಮತ್ತು ಮುಖ್ಯ ರಾಜಕೀಯ ಪಕ್ಷಗಳಿಗೆ ಮನವಿ ಪತ್ರವನ್ನು ಸಲ್ಲಿಸಿದರು.

**ಮುಖ್ಯ ಬೇಡಿಕೆಗಳು**

೧. ವೀರಾಜಪೇಟೆಯ ವಿಧಾನಸಭಾ ಕ್ಷೇತ್ರದ ಮೀಸಲಾತಿಯನ್ನು ತೆಗೆದುಹಾಕಿ ಸಾಮಾನ್ಯ ಕ್ಷೇತ್ರವೆಂದು ಘೋಷಿಸಬೇಕು; ೨. ಕೊಡಗಿಗೆ ಪ್ರತ್ಯೇಕ ಲೋಕಸಭಾ ಸ್ಥಾನವನ್ನು ಕಲ್ಪಿಸಬೇಕು; ೩. ಕೊಡವರನ್ನು ಜನಾಂಗೀಯ ಅಲ್ಪಸಂಖ್ಯಾತರೆಂದು ಘೋಷಿಸಬೇಕು; ೪. ಸಂಸತ್ತಿನ ಉಭಯ ಸದನಗಳಲ್ಲಿ ಕೊಡವರಿಗೆ ಮೀಸಲಾತಿ ನೀಡಬೇಕು; ೫. ಕೊಡವ ಭಾಷೆಯನ್ನು ಸಂವಿಧಾನದ ಎಂಟನೇ ಪರಿಚ್ಛೇದದಲ್ಲಿ ಸೇರಿಸಬೇಕು; ೬. ಹೈಕಮೀಷನರ್ ಹುದ್ದೆಗೆ ಕೊಡವರನ್ನು ನೇಮಕ ಮಾಡಬೇಕು; ೭. ಕಾಫಿ ಮಂಡಳಿ ಅಧ್ಯಕ್ಷರಾಗಿ ಕೊಡಗಿನವರನ್ನು ಆಯ್ಕೆ ಮಾಡಬೇಕು; ೮. ಕೊಡಗಿನ ಎರಡು ವಿಧಾನಸಭಾ ಕ್ಷೇತ್ರಗಳನ್ನೂ ಕೊಡವರಿಗೆ ಮೀಸಲಿಡಬೇಕು; ೯. ರಾಜ್ಯ ವಿಧಾನ ಪರಿಷತ್ತಿಗೆ ಆರು ವರ್ಷಗಳಿಗೊಮ್ಮೆ ಕೊಡವನೊಬ್ಬನನ್ನು ನೇಮಕ ಮಾಡಬೇಕು; ಮತ್ತು ೧೦. ರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ನಾಗರಿಕ ಸೇವೆಗಳ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಕೊಡವ ಅಭ್ಯರ್ಥಿಗಳಿಗೆ ವಿಶೇಷ ಪರಿಗಣನೆ ನೀಡಬೇಕು. –ರಾಜ್ಯದ ಲೋಕಸೇವಾ ಆಯೋಗದ ಮೂಲಕ ಸ್ಪರ್ಧಿಸುವ ಕೊಡವ ಅಭ್ಯರ್ಥಿಗಳಿಗೆ ವಿಶೇಷ ಮೀಸಲಾತಿ ನೀಡಬೇಕು. –ಈ ಪಟ್ಟಿಯಲ್ಲಿ ಬಹುಸಂಖ್ಯಾತ ಕೊಡವರ ಆರ್ಥಿಕ ಸಮಸ್ಯೆಗಳಾದ ಕೃಷಿ ಉತ್ಪನ್ನಗಳ ಬೆಲೆ, ರಸಗೊಬ್ಬರಗಳ ಬೆಲೆ, ನೀರಾವರಿ, ಮಾರುಕಟ್ಟೆಯ ಸಮಸ್ಯೆಗಳು, ಉದ್ಯೋಗಾವಕಾಶಗಳು, ಉದ್ಯಮಗಳ ಬೆಳವಣಿಗೆ, ಇತ್ಯಾದಿಗಳ ಬಗ್ಗೆ ಪ್ರಸ್ತಾವವೇ ಇಲ್ಲ ಎನ್ನುವುದು ಗಮನಾರ್ಹ.

ಈ ಎಲ್ಲ ಬೇಡಿಕೆಗಳ ಬಗ್ಗೆ ಚುನಾವಣೆಗಳು ನಡೆಯುವ ಮುನ್ನ ನಿರ್ಧಾರ ಕೈಗೊಳ್ಳದಿದ್ದರೆ, ವೀರಾಜಪೇಟೆ ವಿಧಾನಸಭಾ ಕ್ಷೇತ್ರದಿಂದ ತನ್ನ ಅಭ್ಯರ್ಥಿಯನ್ನು ಚುನಾವಣಾ ಕಣಕ್ಕೆ ಇಳಿಸಬೇಕಾಗುತ್ತದೆ ಎಂಬ ಎಚ್ಚರಿಕೆಯನ್ನು ಕೂಡ ಅಖಿಲ ಕೊಡವ ಸಮಾಜ ನೀಡಿತು.

ಜುಲೈ ೨೭ರಂದು ಅಖಿಲ ಕೊಡವ ಸಮಾಜದ ವತಿಯಿಂದ ವೀರಾಜಪೇಟೆಯಲ್ಲಿ ಸಭೆ ನಡೆಸಲಾಯಿತು. ಜಿಲ್ಲೆಯ ಬೇರೆ ಬೇರೆ ಊರುಗಳ ಕೊಡವ ಸಮಾಜಗಳ ಅಧ್ಯಕ್ಷರು, ಕೆ.ಆರ್.ಆರ್.ಎಂ. ಸಂಚಾಲಕರು, ಮತ್ತು ಕಾಂಗ್ರೆ, ಬಿ.ಜೆ.ಪಿ, ಲೋಕಶಕ್ತಿ ಪದಾಧಿಕಾರಿಗಳು ಈ ಸಭೆಯಲ್ಲಿ ಭಾಗವಹಿಸಿದ್ದರು. ಈ ಸಭೆಯಲ್ಲಿ ಕೆಳಗಿನ ಮೂರು ಬೇಡಿಕೆಗಳಿಗಾಗಿ ವೀರಾಜಪೇಟೆ ವಿಧಾನಸಭಾ ಕ್ಷೇತ್ರದಲ್ಲಿ ನಡೆಯುವ ೯೯ರ ವಿಧಾನಸಭಾ ಮತ್ತು ಸಂಸತ್ ಚುನಾವಣೆಗಳನ್ನು ಬಹಿಷ್ಕರಿಸಿ ಅದೇ ದಿನ ಬಂದ್ ನಡೆಸಬೇಕೆಂದು ತೀರ್ಮಾನಿಸಲಾಯಿತು:

೧. ಬುಡಕಟ್ಟುಗಳಿಗೆ ಮೀಸಲಾದ ವೀರಾಜಪೇಟೆ ವಿಧಾನಸಭಾ ಕ್ಷೇತ್ರವನ್ನು ಬದಲಿಸಿ ಕೊಡವರಿಗೇ ಮೀಸಲಿಡಬೇಕು.

೨. ಸ್ಥಳೀಯ ಸಂಸ್ಥೆಗಳಲ್ಲಿ ಹಾಲಿ ಇರುವ ಮೀಸಲಾತಿಯನ್ನು ರದ್ದುಪಡಿಸಬೇಕು.

೩. ಕೊಡಗಿಗೆ ಪ್ರತ್ಯೇಕ ಲೋಕಸಭಾ ಕ್ಷೇತ್ರವನ್ನು ನೀಡಬೇಕು. –ಇವುಗಳು ಅಂದು ಅಂಗೀಕರಿಸಿದ ಬೇಡಿಕೆಗಳು. ಆದರೆ, ಆ ಸಭೆಯಲ್ಲಿ ಭಾಗವಹಿಸಿದ ಕಾಂಗ್ರೆಸ್ ಪಕ್ಷದ ಪದಾಧಿಕಾರಿಯೊಬ್ಬರು ಬಂದ್ ಮತ್ತು ಬಹಿಷ್ಕಾರ ಕಾರ್ಯಕ್ರಮಗಳಿಗೆ ವಿರೋಧ

ಸೂಚಿಸಿ ಹಂತಹಂತವಾಗಿ ಚಳುವಳಿ ನಡೆಸಲು ಸೂಚಿಸಿದರು. ಆದರೆ, ಬಂದ್ ಮತ್ತು ಬಹಿಷ್ಕಾರ ನಡೆಸಬೇಕೆಂದು ಆಗ್ರಹಿಸಿದ ಬಿಜೆಪಿಗೆ ತಾಲ್ಲೂಕು ಅಧ್ಯಕ್ಷರು ''ಪಕ್ಷ ಬಿಟ್ಟೇನು, ಆದರೆ ಜಾತಿ ಬಿಡಲಾರೆ'' ಎಂದು ಅಬ್ಬರಿಸಿದರು.

ತನ್ನ ನಿಲುವನ್ನು ಸಮರ್ಥಿಸಿಕೊಳ್ಳಲು ಅಖಿಲ ಕೊಡವ ಸಮಾಜ ನೀಡಿದ ಪತ್ರಿಕಾ ಪ್ರಕಟಣೆಯಲ್ಲಿ ಈ ರೀತಿ ಹೇಳಿತು:

''ಸರ್ಕಾರದಿಂದ ಸೂಕ್ತ ನೆರವು ದೊರಕದ ಕಾರಣ ಕೊಡಗಿನ ಅಂದಾಜು ಐದು ಲಕ್ಷ ಜನಸಂಖ್ಯೆಯಲ್ಲಿ ಕೊಡವ ಭಾಷೆ ಮಾತನಾಡುವ ಮೂಲನಿವಾಸಿಗಳ ಸಂಖ್ಯೆ ಬಹಳ ಕಡಿಮೆಯಾಗಿ ಅವರು ರಾಜಕೀಯವಾಗಿ ದುರ್ಬಲವಾಗಿದ್ದಾರೆ....

''೧೯೫೬ರ ತನಕ ಪ್ರತ್ಯೇಕ ರಾಜ್ಯವಾಗಿದ್ದ ಕೊಡಗು ಶಿಸ್ತು ನೆಮ್ಮದಿ ನೆಲೆ ನಿಂತಿದ್ದ ರಾಜ್ಯವಾಗಿದ್ದಿತು. ೧೯೫೬ರಲ್ಲಿ ಕರ್ನಾಟಕದೊಡನೆ ಸೇರಿದ ಮೇಲೆ ಹೊರಗಿನಿಂದ ಬಂದ ವಲಸೆಗಾರರ ಹಾವಳಿಯಿಂದಾಗಿ ಕೊಡಗಿನ ಸಾಮಾಜಿಕ ಸಾಂಸ್ಕೃತಿಕ ಆರ್ಥಿಕ ಸ್ಥಿತಿಗತಿ ಹದಗೆಟ್ಟಿದೆ. ಮೀಸಲಾತಿ ನೀತಿಯಿಂದಾಗಿ ವಲಸೆಗಾರರು ತುಂಬಿಹೋಗಿ ಈಗ ಸ್ಥಳೀಯ ಸಂಸ್ಥೆಗಳು ನಾರುತ್ತಿವೆ. ಹೊರಗಿನ ಜನ ಆಳುತ್ತಿರುವ ಪರಿಣಾಮದಿಂದಾಗಿ ಪವಿತ್ರ ಕಾವೇರಿಯ ಪುಣ್ಯಭೂಮಿಯಲ್ಲಿ ಭ್ರಷ್ಟಾಚಾರ ಮತ್ತು ಉದಾಸೀನದಿಂದ ಜನತೆ ನರಳುವಂತಾಗಿದೆ.

''ಪ್ರಾಯಶಃ ಈ ದೇಶದ ಚರಿತ್ರೆಯಲ್ಲಿ ಕೊಡವರಂತೆ ರಾಜಕೀಯ ವಂಚನೆಗೂ ಅನ್ಯಾಯಕ್ಕೂ ಒಳಪಟ್ಟ ಜನಾಂಗ ಇನ್ನೊಂದಿಲ್ಲ.

''ಇಷ್ಟೆಲ್ಲ ಅನ್ಯಾಯವಾದರೂ ನೋಡುತ್ತ ಸುಮ್ಮನೆ ಕುಳಿತಿರಬೇಕೆ? (ಹೀಗೆ ಮುಂದುವರಿದರೆ), ಮುಂದಿನ ಪೀಳಿಗೆಯ ಸ್ಥಿತಿಗತಿ ಎಲ್ಲಿಗೆ ತಲುಪೀತು ? ಕೊಡವರು ರಾಜಕೀಯವಾಗಿ ಮೂಲೆಗುಂಪಾದರೆ, ಕೊಡಗಿನ ಸ್ವರೂಪ ಏನಾಗಬೇಕು? ಭವಿಷ್ಯದಲ್ಲಿ ನಮ್ಮ ಮಕ್ಕಳು ಸ್ವಾಭಿಮಾನದಿಂದಲೂ, ಆತ್ಮಗೌರವದಿಂದಲೂ, ಮರ್ಯಾದೆಯಿಂದಲೂ, ತಲೆಯೆತ್ತಿ ಬದುಕುವುದು ಸಾಧ್ಯವಾದೀತೆ?''

ಆದರೆ, ಅಖಿಲ ಕೊಡವ ಸಮಾಜದ ಈ ತೀರ್ಮಾನದ ಬಗ್ಗೆ ಕೊಡಗಿನಲ್ಲಿ ತೀವ್ರ ಪ್ರತಿರೋಧ ಬಂದಿತು. ಕೊಡವ ಸಮಾಜಗಳ ಮಾಜಿ ಅಧ್ಯಕ್ಷರು, ರಾಜಕೀಯ ಪಕ್ಷಗಳ ಮುಖಂಡರು ಕೊಡವರಿಗೆ ಮಾತ್ರವೇ ವೀರಾಜಪೇಟೆ ವಿಧಾನಸಭಾ ಕ್ಷೇತ್ರವನ್ನು ಮೀಸಲಿಡಬೇಕೆಂಬ ಬೇಡಿಕೆಯನ್ನು ವಿರೋಧಿಸಿದರು. ಹಾಗಾಗಿ ಕೊಡವ ಸಮಾಜ ತನ್ನ ಹಿಂದಿನ ಬೇಡಿಕೆಯನ್ನು ಮಾರ್ಪಡಿಸಿ ವೀರಾಜಪೇಟೆ ವಿಧಾನಸಭಾ ಕ್ಷೇತ್ರವನ್ನು ಸಾಮಾನ್ಯ ಕ್ಷೇತ್ರವನ್ನಾಗಿಸಬೇಕೆಂದು ಆಗ್ರಹಿಸಿತು. ಆದರೆ, ಅಖಿಲ ಕೊಡವ ಸಮಾಜದ ಕರೆಯನ್ನು ಯಾರೂ ಗಣನೆಗೆ ತೆಗೆದುಕೊಳ್ಳಲಿಲ್ಲ. ಎಲ್ಲ ರಾಜಕೀಯ ಪಕ್ಷಗಳೂ ಚುನಾವಣಾ ಪ್ರಕ್ರಿಯೆಯಲ್ಲಿ ತೊಡಗಿದವು. ನಾಮಪತ್ರ ಸಲ್ಲಿಸಲಾಯಿತು. ಚುನಾವಣಾ ಪ್ರಚಾರ ಬಿರುಸಿನಿಂದ ನಡೆಯಿತು.

ಜಿಲ್ಲೆಯಲ್ಲಿ ಇನ್ನೊಂದು ಪ್ರಮುಖ ಬೆಳವಣಿಗೆ ಯಾಯಿತು. ಪ್ರತ್ಯೇಕತೆಯನ್ನು ವಿರೋಧಿಸುವ ನೆಲೆಯಲ್ಲಿ ಹುಟ್ಟಿಕೊಂಡ ಕೊಡಗು ಪ್ರಜಾವೇದಿಕೆ ಎನ್ನುವ ಸಂಘಟನೆ ಕೊಡಗಿನ ಸೋಮವಾರಪೇಟೆ ತಾಲ್ಲೂಕಿನಲ್ಲಿ ಬಲವಾಗಿದೆ. ಈ ಸಂಘಟನೆಯು ವಿಧಾನಸಭಾ ಚುನಾವಣೆಗಳಲ್ಲಿ ಪ್ರತ್ಯೇಕತೆಯ ಪರವಾಗಿದ್ದಾರೆ ಎಂಬ ನೆಲೆಯಲ್ಲಿ ಮಡಿಕೇರಿ ವಿಧಾನಸಭಾ ಕ್ಷೇತ್ರದಲ್ಲಿ ಕಾಂಗ್ರೆ ಅಭ್ಯರ್ಥಿಯನ್ನು, ಸೋಮವಾರಪೇಟೆ ವಿಧಾನಸಭಾ ಕ್ಷೇತ್ರದಲ್ಲಿ ಬಿ.ಜೆ.ಪಿ. ಅಭ್ಯರ್ಥಿಯನ್ನು ಸೋಲಿಸಲು ಕರೆ ನೀಡಿತು.

ಈ ಇಬ್ಬರೂ ಅಭ್ಯರ್ಥಿಗಳು ಕೊಡವರು. ಪ್ರಜಾವೇದಿಕೆ ಈ ಎರಡೂ ಕ್ಷೇತ್ರಗಳಲ್ಲಿ ಬೆಂಬಲಿಸಿದ ಸ್ವತಂತ್ರ ಅಭ್ಯರ್ಥಿಗಳು ಒಕ್ಕಲಿಗರು. ಹಾಗಾಗಿ ತನ್ನಿಂದ ತಾನೇ ಜಾತಿ ರಾಜಕಾರಣ ಹೆಡೆಯೆತ್ತಿತ್ತು.




ತನ್ನ ಕರೆ ನಿರರ್ಥಕ ಎಂದು ಅಖಿಲ ಕೊಡವ ಸಮಾಜಕ್ಕೆ ಮನದಟ್ಟಾಯಿತು. ಹಾಗಾಗಿ ಚುನಾವಣೆಗೆ ಎರಡು ದಿನ ಮೊದಲು 'ಬಂದ್' ಕರೆಯನ್ನು ವಾಪಾಸು ತೆಗೆದುಕೊಂಡು ಸ್ವಯಂಪ್ರೇರಿತ ಬಹಿಷ್ಕಾರ ನಡೆಸಲು ಕೋರಿತು. ತಾನು ಮುಂದಿಟ್ಟಿದ್ದ ಬೇಡಿಕೆಗಳ ಬಗ್ಗೆ ಎಲ್ಲರ ಗಮನ ಸೆಳೆಯಲು ಸಾಧ್ಯವಾದ ಕಾರಣ ತನ್ನ ಕಾರ್ಯಕ್ರಮ ಯಶಸ್ವಿಯಾಯಿತು, ಎಂದು ಅಖಿಲ ಕೊಡವ ಸಮಾಜ ಹೇಳಿಕೊಂಡಿತು.

ದಿನಾಂಕ ೧೫.೯.೧೯೯೯ರಂದು ಪ್ರಕಟವಾದ ಪತ್ರಿಕಾ ಹೇಳಿಕೆಯಲ್ಲಿ ಅಖಿಲ ಕೊಡವ ಸಮಾಜ ಹೀಗೆ ಹೇಳಿತು:

''ಕಳೆದ ಐವತ್ತು ವರ್ಷಗಳಿಂದ ನಮ್ಮವರೇ ಆದ ರಾಜಕಾರಣಿಗಳಿಂದಾಗಲೀ ಅಥವಾ ಬುದ್ಧಿಜೀವಿಗಳಿಂದಾಗಲೀ ಕೊಡವರಿಗೆ ಯಾವುದೇ ಪ್ರಯೋಜನವಾಗಿಲ್ಲ ಎಂಬುವುದು ಗ್ಯಾರಂಟಿ. ಈ ಚುನಾವಣೆ ಬಹಿಷ್ಕಾರದ ವಿಷಯದಲ್ಲಿ ಅದು ಇನ್ನೊಮ್ಮೆ ಸಾಬೀತಾಯಿತು...

''ಅಖಿಲ ಕೊಡವ ಸಮಾಜದ ಹೋರಾಟ ಕೊಡವ ಜನಾಂಗದ ಹಣವಂತರ, ರಾಜಕಾರಣಿಗಳ ಅಥವಾ ಬುದ್ಧಿಜೀವಿಗಳ ಪರ ಅಲ್ಲ. ಜನಾಂಗದ ಅತ್ಯಂತ ಕಡೆಯಲ್ಲಿರುವ ವ್ಯಕ್ತಿಯ (ಅತ್ಯಂತ ಗರೀಬನ) ಒಳಿತನ್ನು ಕಾಪಾಡುವುದು ನಮ್ಮ ಉದ್ದೇಶ.''

ನಾಟಕೀಯ ಬೆಳವಣಿಗೆಯೊಂದರಲ್ಲಿ ಚುನಾವಣೆಯ ದಿನದಂದೇ, ಅಂದರೆ ೧೧.೯.೧೯೯೯ರಂದೇ, ವೀರಾಜಪೇಟೆ ತಾಲ್ಲೂಕು ಬಿ.ಜೆ.ಪಿ. ಅಧ್ಯಕ್ಷರ ಪತ್ರಿಕಾ ಹೇಳಿಕೆ ಪ್ರಕಟವಾಯಿತು. ಅವರು ಅಖಿಲ ಕೊಡವ ಸಮಾಜವೆಂಬ ಸಂಘ ಅಧಿಕೃತವಾಗಿ ಅಸ್ತಿತ್ವದಲ್ಲಿಲ್ಲ, ಅದರ ಅಧ್ಯಕ್ಷರು ಸ್ವಯಂ ಘೋಷಿತ ಅಧ್ಯಕ್ಷ ಎಂದು ಆರೋಪಿಸಿದರು. ಬಂದ್ ಮತ್ತು ಬಹಿಷ್ಕಾರ ರಾಜಕೀಯ ಪಕ್ಷವೊಂದರ (ಕಾಂಗ್ರೆ) ಅನುಕೂಲಕ್ಕಾಗಿ ನೀಡಿದ ಕರೆ ಎಂದರು. ಅವರು ಈ ಆಪಾದನೆಗೆ ನೀಡಿದ ಕಾರಣ ಸ್ವಾರಸ್ಯಕರವಾಗಿತ್ತು. ಬಹುತೇಕ ಕೊಡವರು ಬಿ.ಜೆ.ಪಿ. ಬೆಂಬಲಿಗರು. ಚುನಾವಣಾ ಬಹಿಷ್ಕಾರಕ್ಕೆ ಆಗ್ರಹಿಸಿ ಅವರು ಚುನಾವಣೆಯಲ್ಲಿ ಭಾಗವಹಿಸದಂತೆ ಮಾಡಿದರೆ ಕಾಂಗ್ರೆಗೆ ಲಾಭವಾಗುತ್ತದೆ. ಅಖಿಲ ಕೊಡವ ಸಮಾಜ ಕೊಡವ ಜನಾಂಗದ ನಡುವೆ ಜಾತಿ ವೈಷಮ್ಯದ ಕಿಚ್ಚನ್ನು ಹಬ್ಬಿಸುತ್ತಿದೆ ಎಂದು ಕೂಡ ಅವರು ಆರೋಪಿಸಿದರು.

ಚುನಾವಣೆಗಳು ಶಾಂತಿಯುತವಾಗಿ ನಡೆದುವು. ಕೊಡವರೂ ಸೇರಿದಂತೆ ಚುನಾವಣಾ ಬಹಿಷ್ಕಾರದ ಕರೆಯನ್ನು ಯಾರೂ ಮನ್ನಿಸಿಲ್ಲ.

ಈ ವಿದ್ಯಮಾನಗಳನ್ನು ಒಂದು ಜಿಲ್ಲೆಯಲ್ಲಿ ನಡೆದ ಬಿಡಿ ಘಟನೆಗಳೆಂದು ಅಲಕ್ಷಿಸುವಂತಿಲ್ಲ. ಇಪ್ಪತ್ತೊಂದನೇ ಶತಮಾನದತ್ತ ಹೊರಳುತ್ತಿರುವ ಭಾರತದಲ್ಲಿ ಜಾತೀಯ ಮತೀಯ ಶಕ್ತಿಗಳು ಆಧುನಿಕ ಪ್ರಜಾಪ್ರಭುತ್ವ ಮೌಲ್ಯಗಳ ವಿರುದ್ಧ ಗುಟುರ ಹಾಕುತ್ತ ಎದ್ದುನಿಲ್ಲುತ್ತಿವೆ. ಆದರೆ, ಬಲಿಷ್ಠವಾಗಿ ಬೇರೂರಿರುವ ಸಂಸದೀಯ ಪರಂಪರೆ ಮತ್ತು ಪಕ್ಷ ರಾಜಕಾರಣದಿಂದಾಗಿ ಈ ಸವಾಲನ್ನು ಎದುರಿಸಲು ಈವರೆಗೆ ಸಾಧ್ಯವಾಗಿದೆ. ಆದಾಗ್ಯೂ ಮೀಸಲಾತಿಯನ್ನು ವಿರೋಧಿಸುವ, ಸಮಾನತೆಯನ್ನು ತಾತ್ವಿಕವಾಗಿ ಕೂಡ ಒಪ್ಪಲಾರದ, ಬೇರೆ ಜಿಲ್ಲೆಗಳ, ರಾಜ್ಯಗಳ ಜನರನ್ನೇ ಪರಕೀಯರೆಂದು ದ್ವೇಷಿಸುತ್ತ ಮೇಲು ಜಾತಿಯ ಸಂಘಟನೆಯೊಂದು ಇಡೀ ಜಾತಿಯ ಗುತ್ತೇದಾರನಂತೆ ವರ್ತಿಸುತ್ತ ರಂಗದ ಮೇಲೆ ಬರುತ್ತಿರುವುದು ಕಳವಳಕಾರಿಯಾದ ಬೆಳವಣಿಗೆ. ಜನತೆಯ ಕನಿಷ್ಠ ಸ್ವಾತಂತ್ರ್ಯವಾದ ಮತದಾನದ ಹಕ್ಕನ್ನು ಬಲಾತ್ಕಾರದಿಂದ ಕಿತ್ತುಕೊಳ್ಳುವ ಬೆದರಿಕೆ ಹಾಕಿದೆ. ರಾಜ್ಯದ ರಾಜಧಾನಿಯಲ್ಲಿ ಇತ್ತೀಚೆಗೆ ಸಾಕಷ್ಟು ದೊಡ್ಡ ಪ್ರತಿಭಟನಾ ಮೆರವಣಿಗೆಯನ್ನು ಕೆ.ಆರ್.ಆರ್.ಎಮ್. ಹಮ್ಮಿಕೊಂಡಿತ್ತು. ಅದರ ನಾಯಕರೊಡನೆ ಸಂಧಾನದ ಮಾತೇ ಇಲ್ಲವೆಂದು ರಾಜ್ಯದ ಮುಖ್ಯಮಂತ್ರಿ ಹೇಳಿದ್ದಾರೆಂದು ತಿಳಿದುಬಂದಿದೆ. ಅಂತೂ ಹಿತಕರವಲ್ಲದ ಒಂದು ಚಳವಳಿ ಅಂಕುರಿಸಿರುವ ಹಿನ್ನೆಲೆಯಲ್ಲಿ ಕೊಡಗಿನ ಬೆಳವಣಿಗೆ, ಜನಪ್ರಾತಿನಿಧ್ಯ, ಮುಂತಾದ ವಿಷಯಗಳನ್ನು ಕೂಡಲೆ ಕೈಗೆತ್ತಿಕೊಳ್ಳಬೇಕಾಗಿದೆ ಹಾಗೂ ಪ್ರತ್ಯೇಕತಾ ರಾಜಕಾರಣವನ್ನು ಹತ್ತಿಕ್ಕಬೇಕಾಗಿದೆ. ಇತ್ತೀಚಿನ ಅನುಭವವನ್ನು ಗಮನಿಸಿದರೆ ಹಿಂದುತ್ವವಾದಿ ಶಕ್ತಿಗಳು ಇಂಥ ಸಂದರ್ಭಗಳಲ್ಲಿ ದ್ವಿಮುಖ ಸಂದರ್ಭಸಾಧಕ ಧೋರಣೆಯನ್ನು ತಳೆಯುತ್ತವೆ ಎನ್ನುವುದು ಈ ವಿದ್ಯಮಾನಗಳಿಂದ ಸ್ಪಷ್ಟವಾಯಿತು.

ಐ. ಆರ್. ಪ್ರಮೋದ್
ವಕೀಲರು, ವೀರಾಜಪೇಟೆ - ೫೭೧ ೨೧೮

# ಅಯೋಧ್ಯೆಯ ಮೊದಲ ಕೋಮುಗಲಭೆ

೧೯೯೨ರ ಡಿಸೆಂಬರ್ ೬ರಂದು, ಸಂಘ ಪರಿವಾರದ ನೇತೃತ್ವದಲ್ಲಿ, ಅಯೋಧ್ಯೆಯಲ್ಲಿ ಜಮಾಯಿಸಿದ್ದ ಅಂದಾಜು ೨ ಲಕ್ಷ 'ಕರಸೇವಕರು' ೬ ತಾಸುಗಳಲ್ಲಿ ಬಾಬ್ರಿ ಮಸೀದಿಯನ್ನು ಪೂರ್ಣ ಧ್ವಂಸ ಮಾಡಿದರು. ನಂತರ ೨ ತಿಂಗಳ ಕಾಲ ದೇಶದಾದ್ಯಂತ ಕೋಮುಗಲಭೆಗಳಾದವು. ಇದನ್ನೆಲ್ಲಾ ಪತ್ರಿಕೆಗಳು ವರದಿ ಮಾಡಿವೆ. ಆದರೆ ಬಾಬ್ರಿ ಮಸೀದಿಯನ್ನು ಧ್ವಂಸ ಮಾಡಿದ 'ಕರಸೇವಕರು', ವ್ಯವಸ್ಥಿತವಾಗಿ, ಇಡೀ ಒಂದು ದಿನ ಅಯೋಧ್ಯೆಯ ಮುಸ್ಲಿಮರನ್ನು ಹಿಂಸಿಸಿದ್ದರ ಬಗ್ಗೆ ಯಾವ ಪತ್ರಿಕೆಯೂ ವಿವರಗಳನ್ನು ಪ್ರಕಟಿಸಿಲ್ಲ. ಅಯೋಧ್ಯೆಯ ಇತಿಹಾಸದಲ್ಲೇ ಗಲಭೆಗಳಾದದ್ದು ಎರಡೇ ಸಾರಿ. ಮೊದಲನೆಯದು ನಡೆದದ್ದು ೧೯೧೨ರಲ್ಲಿ; ಭೈರಾಗಿಗಳು ಗೋಹತ್ಯೆಯನ್ನು ವಿರೋಧಿಸುವುದರ ಮೂಲಕ ಪ್ರಾರಂಭವಾದದ್ದು ಆ ನಂತರ ಅಯೋಧ್ಯೆಯಲ್ಲಿ ಗೋಹತ್ಯೆಯನ್ನು ಸಂಪೂರ್ಣ ನಿಲ್ಲಿಸಲಾಯಿತು. ಎರಡನೆಯದು ೧೯೩೪ರಲ್ಲಿ ನಡೆದದ್ದು. ಮಸೀದಿಯಲ್ಲಿ ಮೂರ್ತಿಗಳು ಪ್ರತ್ಯಕ್ಷವಾದ ನಾಟಕೀಯ ಘಟನೆ ನಡೆದ ನಂತರ ಮಸೀದಿಯ ಬಾಗಿಲಿಗೆ ಬೀಗ ಹಾಕಲಾಗಿತ್ತು. ಆ ಬೀಗ ತೆಗೆಯಬೇಕೆಂದು ಅಯೋಧ್ಯೆಗೆ 'ಹೊರಗಿನವರಾದ' ಹಿಂದುಗಳು ಎಬ್ಬಿಸಿದ ಗಲಭೆ ಯಾವ ಇತ್ಯರ್ಥವನ್ನೂ ಕಾಣದೆ ಕೊನೆಗೊಂಡಿತ್ತು. ಈ ಎರಡು ಗಲಭೆಗಳು ಅಯೋಧ್ಯೆಯ ಹಿಂದು ಮತ್ತು ಮುಸ್ಲಿಮರ ನಡುವೆ ಯಾವ ಭೇದವನ್ನೂ ಹುಟ್ಟುಹಾಕಿರಲಿಲ್ಲ. ಎರಡು ಕೋಮಿನವರನ್ನು ಹೆಣೆಯುವ ಅಯೋಧ್ಯೆಯ ಸಮುದಾಯ ಜೀವನದ ಬಂಧ ಒಂದಿಷ್ಟೂ ಜಾಳಾಗಿರಲಿಲ್ಲ. ಸಂಘ ಪರಿವಾರ ರಾಮಜನ್ಮಭೂಮಿ ವಿವಾದವನ್ನು ಎತ್ತಿಕಟ್ಟಿ, ಅಯೋಧ್ಯೆಯನ್ನು ರಣರಂಗ ಮಾಡಿದಾಗಲೂ ಅಲ್ಲಿಯ ಜನರ ಜೀವನದಲ್ಲಿ ಅಂತಹ ವ್ಯತ್ಯಾಸ ವಾಗಿರಲಿಲ್ಲ. ೧೯೯೦ರ ಅಕ್ಟೋಬರ್ ೩೦ರಂದು ನಡೆದ 'ಕರಸೇವೆ'ಯ ಉದ್ರಿಕ್ತ ಘಟನೆಯ ನಂತರವೂ, ಅಯೋಧ್ಯೆಯ ಮುಸ್ಲಿಮರು, 'ಇದೆಲ್ಲಾ ರಾಜಕೀಯ ಮೇಲಾಟ; ಕೆಲವರು ಹಣ ದೋಚಲಿಕ್ಕೆ ಆಡುತ್ತಿರುವ ನಾಟಕ. ಇದರಿಂದ ಅಯೋಧ್ಯೆಯಲ್ಲಿನ ತಮ್ಮ ಜೀವನದಲ್ಲಿ ಯಾವ ಏರುಪೇರು ಆಗುವುದಿಲ್ಲ' ಎಂಬ ನೆಮ್ಮದಿಯಿಂದಲೇ ಬದುಕುತ್ತಿದ್ದರು.

೧೯೯೨ರ ಆರಂಭದಲ್ಲಿ, ಸಂಘ ಪರಿವಾರ, ದೇಶದ ತುಂಬಾ ನಡೆಸಿದ 'ರಾಮ ಪಾದುಕ ಯಾತ್ರೆ'ಗಳಿಗೆ ಮರದ ಪಾದುಕೆಗಳನ್ನು ತಯಾರು ಮಾಡಿಕೊಟ್ಟವರು ಅಯೋಧ್ಯೆಯ ಮುಸ್ಲಿಮರೇ. ಇಂತಹ ಅಯೋಧ್ಯೆಯಲ್ಲಿ, ಡಿಸೆಂಬರ್ ೬ ಮತ್ತು ೭, ೧೯೯೨ರಂದು ನಡೆದದ್ದು, ಆ ಊರಿನ ಚರಿತ್ರೆಯಲ್ಲಿನ 'ಮೊದಲ' ಕೋಮುಗಲಭೆ. ಅಯೋಧ್ಯೆಯ ಘಟನೆಗಳಿಗೆ ಎಂಟು ವರ್ಷಗಳಿಂದ ರಂಗ ಸಜ್ಜು ಮಾಡಲಾಗುತ್ತಿತ್ತು. ಆಗಬಹುದಾದ ಅನಾಹುತದ ಅರಿವು ಕೇಂದ್ರ ಸರ್ಕಾರಕ್ಕೆ ಇತ್ತು. ಉತ್ತರ ಪ್ರದೇಶದಲ್ಲಿ ಅಧಿಕಾರದಲ್ಲಿದ್ದ ಬಿ.ಜೆ.ಪಿ.ಯ ಮುಂದಾಳತ್ವದಲ್ಲೇ ಎಲ್ಲಾ ತಯಾರಿ ನಡೆದಿತ್ತು. ೧೯೯೦ರಲ್ಲೇ ಪೊಲೀಸರು, ಪ್ರಾದೇಶಿಕ ಶಸ್ತ್ರಸಜ್ಜಿತ ಪಡೆ (ಪಿ.ಎ.ಸಿ) ತಾವು ಯಾರ ಕಡೆಗಿದ್ದೇವೆ ಎಂಬುದನ್ನು ಜಾಹೀರು ಮಾಡಿದ್ದರು. ಆದರೆ ಅಯೋಧ್ಯೆಯ ಮುಸ್ಲಿಮರು ಇವರನ್ನೆಲ್ಲ ಯಾವತ್ತೂ ನಂಬಿರಲಿಲ್ಲ. ಅವರಿಗೆ ನಂಬಿಕೆ ಇದ್ದದ್ದು ತಮ್ಮ ಜೊತೆ ದಿನನಿತ್ಯ ಏಗುವ ಅಯೋಧ್ಯೆಯ ಜನರ ಬಗ್ಗೆ ಮಾತ್ರ. ಅಯೋಧ್ಯೆಯ ಚರಿತ್ರೆಯಲ್ಲೇ ಮೊದಲ ಬಾರಿಗೆ ಊರಿನ ಹಿಂದುಗಳು ಗಲಭೆಗಳಲ್ಲಿ ಭಾಗಿಯಾದರು; ಅವತ್ತೇ ಮುಸ್ಲಿಮರು ಸರ್ವಸ್ವವನ್ನೂ ಕಳೆದುಕೊಂಡರು. ಆಶಿಶ್ ನಂದಿ, ಶಿಖಾ ತ್ರಿವೇದಿ, ಶೈಲ್ ಮಾಯರಾಮ್ ಮತ್ತು ಅಚ್ಯುತ್ ಯಾಗ್ನಿಕ್ ಒಟ್ಟಾಗಿ ಬರೆದಿರುವ ''ಕ್ರಿಯೇಟಿಂಗ್ ಎ ನ್ಯಾಷನಾಲಿಟಿ'' (ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ದೆಹಲಿ, ೧೯೯೫) ಎನ್ನುವ ಪುಸ್ತಕದಲ್ಲಿ, ರಕ್ತ ತಣ್ಣಗಾಗಿಸುವ ಈ ಗಲಭೆಯ ಹಿಂಸೆಯನ್ನು ವಿವರಿಸಲಾಗಿದೆ.

*ರಾಮಜನ್ಮಭೂಮಿ ಚಳುವಳಿಗೆ ಅಯೋಧ್ಯೆಯಲ್ಲಿ ಹೇಳಿಕೊಳ್ಳುವಂತಹ ಬೆಂಬಲವಿರಲಿಲ್ಲ. ಚಳುವಳಿಯನ್ನು ಬೆಂಬಲಿಸಿದ್ದ ಬೆರಳೆಣಿಕೆಯಷ್ಟು ಮಹಂತರುಗಳಲ್ಲಿ ಪ್ರಮುಖನಾಗಿದ್ದವನು ಮಹಂತ ರಾಮಚಂದ್ರ ಪರಮಹಂಸ. 'ಸುಂದರ ಭವನ' ಎನ್ನುವ ರಾಮಮಂದಿರದ ಮ್ಯಾನೇಜರ್ ಆಗಿದ್ದ ಮುನ್ನಾ ಮಿಂಯಾ, ರಾಮಚಂದ್ರ ಪರಮಹಂಸನ ಚೆಡ್ಡಿ ದೋಸ್ತ್. 1990ರ ನಂತರವೂ ಮುನ್ನಾ ಮಿಂಯಾ ''ಈ ರಾಮಚಂದ್ರ ಒಳ್ಳೆ ಮನುಷ್ಯ. ಈಗ ಒಂದಿಷ್ಟು ಹಣ, ಅಧಿಕಾರ ದಕ್ಕಿದೆ; ಅನುಭವಿಸುತ್ತಾ ಇದ್ದಾನೆ ಅಷ್ಟೇ. ನಮ್ಮ ಮನೆಯಲ್ಲಿ ನಡೆಯುವ ಶುಭ ಕಾರ್ಯಗಳಿಗೆ ಈಗಲೂ ಬಂದು, ಹರಸಿ ಹೋಗುತ್ತಾನೆ'' ಎನ್ನುತ್ತಿದ್ದರು.*

**ಮಸೀದಿಗಳು, ಮನೆಗಳು, ಮನುಷ್ಯರು ......**

ಪರಿಸ್ಥಿತಿಯ ಸುಳಿವು ಹತ್ತಿದ್ದ ಬಹುಪಾಲು ಮುಸ್ಲಿಮರು ಡಿಸೆಂಬರ್ ೫ಕ್ಕೆ ಮುಂಚೆಯೇ ಊರು ಬಿಟ್ಟಿದ್ದರು. ಮುದುಕರು, ಮಕ್ಕಳು ಮತ್ತು ಕೆಲವು ಮನೆಗಳ ಯುವಕರು ಮಾತ್ರ ಊರಲ್ಲಿ ಉಳಿದುಕೊಂಡಿದ್ದರು. ಡಿಸೆಂಬರ್ ೬ರ ಸಂಜೆ ೬ ಗಂಟೆ ಹೊತ್ತಿಗೆ ಬಾಬ್ರಿ ಮಸೀದಿಯನ್ನು ಸಂಪೂರ್ಣ ನೆಲಸಮ ಮಾಡಲಾಯ್ತು. ಧ್ವಂಸವಾದ ಮಸೀದಿಯ ಹಿನ್ನೆಲೆಯಲ್ಲಿ ಬೆಂಕಿಯ ನಾಲಿಗೆ, ಕಪ್ಪು ಹೊಗೆಯ ಮೋಡಗಳು ಕಂಡದ್ದೇ, ಮಸೀದಿ ನಾಶಕ್ಕೆ 'ಕರಸೇವಕ'ರನ್ನು ಹುರಿದುಂಬಿಸುವ ಕೆಲಸದಲ್ಲಿ ತೊಡಗಿದ್ದ ಸಾಧ್ವಿ ರಿತಾಂಬರ, ಪೊಲೀಸರು ಮತ್ತು ಪಿ.ಎ.ಸಿ. ಪಡೆಗಳನ್ನು ಉದ್ದೇಶಿಸಿ, ಮೈಕ್‌ನಲ್ಲಿ ''ನೋಡಿ, ಮುಸ್ಲಿಮರು ತಮ್ಮ ಮನೆ, ಅಂಗಡಿಗಳಿಗೆ ತಾವೇ ಬೆಂಕಿ ಕೊಟ್ಟುಕೊಳ್ಳುತ್ತಿದ್ದಾರೆ. ತಕ್ಷಣ ಹೋಗಿ ತಡೆಯಿರಿ,'' ಎಂದು ಚೀರತೊಡಗಿದಳು! ಯಾವುದೇ ಕೋಮು ಗಲಭೆಯಲ್ಲೇ ಆಗಲಿ, ಮುಸ್ಲಿಮರ ಆಸ್ತಿಪಾಸ್ತಿ ನಾಶವಾದಾಗ, ಪರಿಹಾರಧನ ಹೊಡೆಯಲಿಕ್ಕೆ ಸ್ವತಃ ಮುಸ್ಲಿಮರೇ ಕೆಲಸಕ್ಕೆ ಬಾರದ ಆಸ್ತಿಗಳಿಗೆ ಬೆಂಕಿಕೊಟ್ಟುಕೊಂಡಿದ್ದಾರೆ ಎಂದು ಪ್ರಚಾರ ಮಾಡುವುದು ಸಂಘ ಪರಿವಾರದ ಪೇಟೆಂಟೆಡ್ ಟೇಪು; ಆ ಹೊತ್ತಿನಲ್ಲೂ ಈ 'ಮಹಾ' ಸಾಧ್ವಿ ಸಂಘಪರಿವಾರದ ಈ ಬದ್ಧಕಾರ್ಯವನ್ನು ಶ್ರದ್ಧೆಯಿಂದ ಪರಿಪಾಲಿಸಿದಳು! ಊರಿನವರು ಮತ್ತು ಪೊಲೀಸರು, ಹೊರಗಿನಿಂದ ಬಂದಿದ್ದ 'ಕರಸೇವಕ'ರಿಗೆ ಮುಸ್ಲಿಮರ ಮನೆ, ಅಂಗಡಿಗಳನ್ನು ವ್ಯವಸ್ಥಿತವಾಗಿ ಗುರುತಿಸಿಕೊಟ್ಟಿದ್ದರು. ಒಂದೇ ದಿನದಲ್ಲಿ 'ಕರಸೇವಕ'ರು ೨೧ ಮಸೀದಿ, ೧೦ ಮಜ಼ಾರ್ (ಸೂಫಿ ಸಂತರು ಬಾಳಿ, ಸಮಾಧಿಯಾದ ಸ್ಥಳ), ೨ ಈದ್ಗಾ, ೨ ಮದ್ರಸಾಗಳನ್ನು ನೆಲಸಮ ಮಾಡಿದರು. ಮುಸ್ಲಿಮರ ಮನೆ ಮತ್ತು ಅಂಗಡಿ ಮುಂಗಟ್ಟುಗಳನ್ನು ಸಮಾ ಲೂಟಿ ಮಾಡಿ ನಂತರ ಬೆಂಕಿಕೊಟ್ಟು ಬೂದಿ ಮಾಡಿದರು. ೧೩ ಮಂದಿ ಮುಸ್ಲಿಮ್ ಗಂಡಸರನ್ನು ಜೀವಂತ ಸುಟ್ಟರು. ಹಿಂಸೆಯ ಘಟನೆಗಳು ನಡೆಯುವಾಗ ಪೊಲೀಸರು ನಿರ್ಲಿಪ್ತವಾಗಿ ಇದ್ದದ್ದು ಮಾತ್ರವಲ್ಲ, ''ಲೂಟಿ ಮಾಡಿ, ಲೂಟಿ ಮಾಡಿ'' ಎಂದು ಗಲಭೆಕೋರರನ್ನು ಹುರಿದುಂಬಿಸುತ್ತಲೂ ಇದ್ದರು. ಮಸೀದಿಯ ಹಿಂಬದಿಗೆ ಇರುವ ರಾಮ್‌ಕೋಟ್ ಪ್ರದೇಶದಲ್ಲಿ ಭಾರಿ ಪೊಲೀಸ್ ಬಂದೋಬಸ್ತ್ ಇತ್ತು. ಇವರ ಸಮ್ಮುಖದಲ್ಲೇ 'ಕರಸೇವಕ'ರು ಲಾಲ್ ಟೇಲರ್ಸ್ ಎನ್ನುವ ಮುಸ್ಲಿಮರ ಅಂಗಡಿಗೆ ಬೆಂಕಿ ಕೊಡುತ್ತಿದ್ದರು. ಈ ಕಾನೂನು ಪಾಲಕರು ಗಲಭೆಕೋರರನ್ನು ತಡೆಯುವುದು ದೂರ ಉಳಿಯಿತು; ಇವರೇ ಸಣ್ಣ ಪುಟ್ಟ ಮರದ ಸಾಮಾನುಗಳನ್ನು ಬೀದಿಗೆ ಎಸೆಯುವಂತೆ 'ಕರಸೇವಕ'ರಿಗೆ ಸಲಹೆ ಮಾಡಿ, ರಸ್ತೆ ಮಧ್ಯೆ ಅವಕ್ಕೆ ಬೆಂಕಿಕೊಟ್ಟು ಚಳಿ ಕಾಯಿಸುತ್ತಾ ಕುಳಿತರು.

**ದೇಹದ ಬೂದಿಗೆ ಏನು ಗ್ಯಾರಂಟಿ ?**

ಕೆಲವು ಘಟನೆಗಳಲ್ಲಂತೂ, ಹಿಂಸೆಗೆ ದಂಗಾಗಬೇಕೋ ಅಥವಾ ನಂತರ ನಡೆಯುವ ತನಿಖೆಯ ನಾಟಕದ ವ್ಯಂಗ್ಯಕ್ಕೆ ದಂಗಾಗಬೇಕೋ, ಅನ್ನಿಸಿಬಿಡುತ್ತದೆ. ಶಿಖ್‌ವಾನ ಪ್ರದೇಶದಲ್ಲಿ, ೭೫ ವಯಸ್ಸಿನ ಜಮೀನುದಾರ ನವಾಬ್ ತಹಿರ್ ಹುಸೇನ್ ಸಾಹಿಬರ ಮನೆ ಇತ್ತು. ಆ ಮನೆಗೆ ೩೦೦ ವರ್ಷಗಳ ಇತಿಹಾಸವಿತ್ತು. ಸ್ಥಳೀಯ ಹಿಂದುಗಳು 'ಕರಸೇವಕ'ರನ್ನು ಕರೆದುಕೊಂಡು ಬಂದು ಮನೆಯನ್ನು ಧ್ವಂಸಮಾಡಿ, ಹುಸೇನ್ ಸಾಹಿಬರನ್ನು ಜೀವಂತ ಸುಟ್ಟರು. ಹತ್ತಾರು ತಲೆಮಾರುಗಳು ವಾಸಿಸಿದ ಮನೆಯ ಮುಂಬಾಗಿಲಲ್ಲಿ ಹುಸೇನ್ ಸಾಹಿಬರ ದೇಹದ ಬೂದಿ ಮತ್ತು ಎಲುಬುಗಳು 'ಸಾಕ್ಷಿ'ಯಾಗಿ

**ಕೆ. ಫಣಿರಾಜ್**

ಬಿದ್ದುಕೊಂಡವು. ನವಾಬರ ಮಕ್ಕಳು, ಸೊಸೆಯಂದಿರು, ಮೊಮ್ಮಕ್ಕಳು ಊರು ಬಿಟ್ಟಿದ್ದರು. ಹೆಂಡತಿ ಅಲಿಯಾಬೇಗಂ ಹೆದರಿ ಮರೆಯಲ್ಲಿ ಅಡಗಿಕೊಂಡಿದ್ದರು. ಅಡಗಿದ ಜಾಗದಿಂದಲೇ ಕರಸೇವಕರು ''ಹೊಡಿ, ಕಡಿ, ದೋಚು, ಅವನನ್ನು ಸುಟ್ಟುಹಾಕು'' ಎಂದು ಬೊಬ್ಬೆ ಹೊಡೆಯುವುದು ಮತ್ತು ಹುಸೇನ್ ಸಾಹೇಬರು ''ನನಗೆ ಹೊಡಿಬೇಡಿ'' ಎಂದು ದಮ್ಮಯ್ಯ ಹಾಕುವುದೂ, ಅಲಿಯಾ ಬೇಗಮ್‌ರಿಗೆ ಕೇಳುತ್ತಿತ್ತು. ತಮಗೆ ಸುದ್ದಿಯೇ ಗೊತ್ತಿಲ್ಲ ಎಂಬ ನೆವ ಮಾಡಿಕೊಂಡು, ಪೊಲೀಸರು ಹತ್ತು ದಿನ ಆ ಕಡೆ ಸುಳಿಯಲಿಲ್ಲ. ಹನ್ನೊಂದನೇ ದಿನ ತನಿಖೆಯ ಕಾಟಾಚಾರ ಪೂರೈಸಲಿಕ್ಕೆ ಬಂದ ಪೊಲೀಸರನ್ನು, ತನ್ನನ್ನು ತನ್ನ ಗಂಡನ ಕೊಲೆಗೆ ಪ್ರತ್ಯಕ್ಷ ಸಾಕ್ಷಿಯಾಗಿ ದಾಖಲು ಮಾಡಿಕೊಳ್ಳಬೇಕೆಂದು ಅಲಿಯಾಬೇಗಂ ಅಂಗಲಾಚತೊಡಗಿದರು. ಪೊಲೀಸರು, ''ಅದೆಲ್ಲಾ ಆಗುವುದಿಲ್ಲ, ನೀನು ಘಟನೆಯನ್ನು ಕಣ್ಣಾರೆ ಕಂಡವಳಲ್ಲ. ನಿಮ್ಮ ಮೊಹಲ್ಲದವರೆಲ್ಲ ಮುಂಬಾಗಿಲ ಹತ್ತಿರ ಬಿದ್ದಿರುವ ಬೂದಿ ಮತ್ತು ಎಲುಬುಗಳು ಹುಸೇನ್ ಸಾಹೇಬರದು ಎಂದೇನೋ ಹೇಳುತ್ತಾರೆ. ಆದರೆ ಗ್ಯಾರಂಟಿ ಏನು? ಕೊಲೆಯಾದವರು ಅವರಿರಲಿಕ್ಕಿಲ್ಲ, ಅವರು ಎಲ್ಲೋ ಓಡಿ ಹೋಗಿರಬೇಕು'' ಎಂದುಬಿಟ್ಟರು! ಆಗಲೇ ಅಲ್ಲಾಡಿ ಹೋಗಿದ್ದ ಮುದುಕಿ ಅಲಿಯಾ, ''ಇಲ್ಲ, ನೀವು ಹೇಳೋದು ಸುಳ್ಳು. ನಾನು ಕುರಾನ್, ರಾಮಾಯಣಗಳ ಮೇಲೆ ಆಣೆ ಇಟ್ಟು ಹೇಳುತ್ತೇನೆ; ನನ್ನ ಗಂಡನನ್ನೇ ಅವರು ಸುಟ್ಟಿರೋದು'' ಎಂದು ಗೋಗರೆಯತೊಡಗಿದಳು. ಪೊಲೀಸರು ಒಂದಿಷ್ಟೂ ಕೇರು ಮಾಡದೆ ತಮ್ಮ ತನಿಖೆ ನಾಟಕ ಮುಂದುವರೆಸತೊಡಗಿದರು. ಎಂತಹ ಸತ್ಯನಿಷ್ಠ ಕಾನೂನು ಪರಿಪಾಲಕರು ! ಎಂತಹ ಧನ್ಯ ಈ ಕಾನೂನು ವ್ಯವಸ್ಥೆ! ಗಂಡನ ದೇಹದ ಬೂದಿ ಎದುರು, ಮಕ್ಕಳು ಬಂದಾರೆಂದು, ಎದೆ ಒಡೆದುಕೊಂಡು ಕಾಯುತ್ತಿರುವ ಮುದುಕಿ ಅಲಿಯಾ ಬೇಗಂರಿಗೆ ಇದೆಲ್ಲಾ ಹೇಗೆ ಅರ್ಥವಾದೀತು ! 'ಹಾಯ್ ರಾಮ್.'

**ಹಂತಕರು? ರಕ್ಷಕರು?**

ಡಿಸೆಂಬರ್ ೭ರಂದು ಬೆಳಗ್ಗೆ, ಮೊಘಲ್‌ಪುರ ಪ್ರದೇಶದಲ್ಲಿ, ಡ್ಯೂಟಿ ಮೇಲಿದ್ದ ಪಿ.ಎ.ಸಿ. ಪಡೆ ಶಿಫ್ಟ್ ಮುಗಿಸಿ ಹೋದ ನಂತರ, 'ಕರಸೇವಕ'ರು ಮನೆಗಳನ್ನು ಲೂಟಿ ಮಾಡಿ, ಬೆಂಕಿ ಹಚ್ಚತೊಡಗಿದರು. ಮನೆಗಳಿಂದ ತಪ್ಪಿಸಿಕೊಂಡು ಸುರಕ್ಷಿತ ಜಾಗದಲ್ಲಿ ಅಡಗಿಕೊಂಡಿದ್ದ ಮಹಮ್ಮದ್ ಅಮೀನ್, ಅಬ್ದುಲ್ ಹಫೀಜ್ ಮತ್ತು ಕೆಲವರಿಗೆ, ಘಟನೆ ನಡೆದ ಎರಡು ಗಂಟೆಗಳ ನಂತರವೂ ಮನೆಗಳ ಕಡೆ ಹೋಗುವ ಧೈರ್ಯವಾಗಲಿಲ್ಲ. ರಕ್ಷಣೆ ಕೋರಿ ಅವರು ಸಮೀಪದ ಕತ್ರ ಪೊಲೀಸ್‌ಠಾಣೆಗೆ ಹೋದರೆ, ಅಲ್ಲಿ ಅವರನ್ನು ಒಳಗೆ ಸೇರಿಸಿಕೊಳ್ಳಲಿಲ್ಲ. ದಿಕ್ಕು ತೋಚದೆ, ಹತ್ತಿರದ ಶಾಲೆಯಲ್ಲಿ ಕ್ಯಾಂಪ್ ಮಾಡಿದ್ದ ಪಿ.ಎ.ಸಿ. ಪಡೆಗಳ ಸಹಾಯ ಕೋರಲು ಹೋದರು. ಅದು ಬಾಣಲೆಯಿಂದ ಬೆಂಕಿಗೆ ಬಿದ್ದಂತೆ ಆಯ್ತು. ಪಿ.ಎ.ಸಿ. ಪೇದೆಗಳು, 'ನೀವೇ ಯಾರನ್ನೋ ಕೊಲೆ ಮಾಡಿ ಬಂದು, ತಪ್ಪಿಸಿಕೊಳ್ಳಲಿಕ್ಕೆ 'ಕರಸೇವಕ'ರ ಕತೆ ಹೇಳುತ್ತಿದ್ದೀರ' ಎಂದು ಇವರನ್ನೇ ಕೊಚ್ಚಲಿಕ್ಕೆ ಸಿದ್ಧರಾದರು. ಸಮಯಕ್ಕೆ ಸರಿಯಾಗಿ ಪಿ.ಎ.ಸಿ.ಯ ಅಧಿಕಾರಿಯೊಬ್ಬ ಬಂದು ತಡೆಯದಿದ್ದರೆ, ಕಾನೂನು ರಕ್ಷಕರು ಈ ''ಹಂತಕರಿಗೆ'' ಸರಿಯಾದ ಶಿಕ್ಷೆ ಕೊಟ್ಟುಬಿಡುತ್ತಿದ್ದರು !

**ಸುಡುವುದಕ್ಕೆ ಮುಸ್ಲಿಮರಾದರೆ ಸಾಕು**

ಒಬ್ಬ ಮುಸ್ಲಿಮ್ ಸತ್ತರೆ, ಒಬ್ಬ ಶತ್ರು ಕಮ್ಮಿಯಾದಂತೆ ಎನ್ನುವುದು ಸಂಘಪರಿವಾರದ ಲೆಕ್ಕಾಚಾರ; ಅದರಲ್ಲೂ ಮುಸ್ಲಿಮರ ಮಕ್ಕಳನ್ನು ಕೊಂದರೆ, ಭಾವಿ ಶತ್ರುವನ್ನು ಚಿಗುರಿನಲ್ಲೇ ಚಿವುಟಿ ಹಾಕಿದ ಖುಷಿಯಾಗುತ್ತದೊ ಏನೋ! ತೆಹ್ದಿ ಬಾಜಾರ್‌ನಲ್ಲಿ ಶೌಖತ್ ಮತ್ತು ಅವರ ೧೩ ವರ್ಷದ ಮಗ ಟೋನಿಯನ್ನು, ಅವರ ಮನೆ ಅಂಗಳದಲ್ಲೇ ಬೆಂಕಿ ಹಚ್ಚಿ ಸುಟ್ಟರು. ಶಿಖ್ವಾನ ಪ್ರದೇಶದ ಅಲಿರಮ್‌ಜಾನ್‌ರ ಮಗ, ಆರು ವರ್ಷದ ಜುಬೇರ್‌ನ ನಶೀಬು ಒಳ್ಳೇದಿತ್ತು. ಮನೆಯ ಮೇಲೆ ಧಾಳಿ ನಡೆದಾಗ ಈ ಹುಡುಗ ಹಿಂಬಾಗಿಲಿನಿಂದ ತಪ್ಪಿಸಿಕೊಳ್ಳಲು ಹೋಗಿ 'ಕರಸೇವಕ'ರ ಕೈಗೆ ಸಿಕ್ಕಿಬಿದ್ದ. ಈ 'ಕರಸೇವಕ'ರು ಯಥಾಪ್ರಕಾರ ಮನೆಯ ಸಾಮಾನುಗಳನ್ನೆಲ್ಲಾ ಅಂಗಳದಲ್ಲಿ ಒಟ್ಟಿ ಬೆಂಕಿ ಹಚ್ಚಿದ್ದರು. ಮನೆಯ ಕುಡಿ ಜುಬೇರ್‌ನನ್ನು ಅನಾಮತ್ತಾಗಿ ಅದೇ ಬೆಂಕಿಯಲ್ಲಿ ಸುಡಲು ಕೊಂಡೊಯ್ದರು. ಆದರೆ ರಮ್‌ಜಾನರ ಹಿಂದು ಸ್ನೇಹಿತರೊಬ್ಬರು ಮಧ್ಯಪ್ರವೇಶಿಸಿ, ಹುಡುಗ ತಮ್ಮ ಮಗ ಎಂದು ಹೇಳಿ ಜುಬೇರ್‌ನ ಜೀವ ಉಳಿಸಿದರು. ತೆಹ್ದಿ ಬಾಜಾರ್‌ನಲ್ಲಿ ಕೊಲೆಯಾದವರಲ್ಲಿ ಇಬ್ಬರು ಬಾಬರಿ ಮಸೀದಿಯ ಕೊನೆಯ ಇಮಾಮ್‌ರ ಮಕ್ಕಳು; ಇಮಾಮ್‌ರ ಮೂರನೇಯ ಮಗ 'ಕರಸೇವಕ'ರ ಕಣ್ಣಿಗೆ ಹುಚ್ಚನಂತೆ ಕಂಡದ್ದರಿಂದ ಅವನನ್ನು ಕೊಲ್ಲಲಿಲ್ಲ. ಎಂತಹ ದಯಾಳುಗಳು!

**''ನಾವು ಪ್ಯಾಲಸ್ಟೈನಿಯರ ಹಾಗೆ.....''**

ಈ ಗಲಭೆಯ ನಂತರ, ಅಯೋಧ್ಯೆಯ ಮುಸ್ಲಿಮರಿಗೆ ತಮ್ಮ ಊರಿನ ಹಿಂದುಗಳ ಬಗ್ಗೆ ನಂಬಿಕೆಯೇ ಇಲ್ಲ. ಅಳಿದುಳಿದ ಮುಸ್ಲಿಮರು ಈಗ ಪ್ರತ್ಯೇಕ ಸಮುದಾಯವಾಗಿ ಬಿಟ್ಟಿದ್ದಾರೆ. ಅಕ್ಷರಮಟ್ಟಿಗೆ 'ಹಿಂದು ರಾಷ್ಟ್ರದ ಸೈನಿಕರ' ಕನಸು ನನಸಾಗಿಬಿಟ್ಟಿದೆ ! ಇವತ್ತು ಅಯೋಧ್ಯೆಯ ೮-೧೦ ವರ್ಷ ವಯಸ್ಸಿನ ಮುಸ್ಲಿಮ್ ಹುಡುಗರು ಹೇಳುತ್ತವೆ : ''ನಾವು ಪ್ಯಾಲಿಸ್ಟೈನಿಯರ ಹಾಗೆ ಬಂದೂಕು ಉಪಯೋಗಿಸಲು ಕಲಿಯುತ್ತೇವೆ. ದೊಡ್ಡ ದೊಡ್ಡ ಮಂದಿ ಪ್ಯಾಲಿಸ್ಟೈನಿಯರನ್ನು ಹೊಸಕಿ ಹಾಕಲು ನೋಡಿದರು; ಆದರೆ ಪ್ಯಾಲಿಸ್ಟೈನಿಯರು ನಾಶವಾಗಲಿಲ್ಲ. ಯಾಕೆಂದರೆ ಅವರು ಬಂದೂಕಿನಿಂದ ಉತ್ತರ ಕೊಟ್ಟರು. ನಾವೂ ಹಾಗೇ ಮಾಡುತ್ತೇವೆ.''

**ಲುಚ್ಚಾ ಚರಿತ್ರೆಯ ಝಲಕ್**

೧೫೨೮ರಲ್ಲಿ ಅಯೋಧ್ಯೆಯಲ್ಲಿ ಬಾಬ್ರಿ ಮಸೀದಿ ಕಟ್ಟಿಸಿದವನು ಮೀರ್ ಬಖಿ. ಈತ ಬಾಬರನ ಸೇನಾದಂಡನಾಯಕನಾಗಿದ್ದ. ಮೀರ್ ಬಖಿ ತನ್ನ ಜೀವನದ ಕೊನೆಯ ದಿನಗಳನ್ನು ಎಲ್ಲಿ ಕಳೆದ, ಎಲ್ಲಿ ತೀರಿಕೊಂಡ ಎಂಬುದಕ್ಕೆ ಸ್ಪಷ್ಟ ದಾಖಲೆಗಳಿಲ್ಲ. ಸಂಘ ಪರಿವಾರಕ್ಕೆ ಇಷ್ಟೇ ಸಾಕು. ಮೀರ್ ಬಖಿ ತನ್ನ ಕೊನೆಯ ದಿನಗಳನ್ನು ಅಯೋಧ್ಯೆಯ ಹತ್ತಿರ ಇರುವ ಸೆಹನಾವ ಎಂಬ ಹಳ್ಳಿಯಲ್ಲಿ ಕಳೆದು, ಅಲ್ಲೇ ಸತ್ತ; ಅವನ ವಂಶಸ್ಥರು ಈಗಲೂ ಆ ಹಳ್ಳಿಯಲ್ಲಿ ಬದುಕಿದ್ದಾರೆ ಎಂಬ ಲುಚ್ಚಾ ಚರಿತ್ರೆಯನ್ನು ಸಂಘಪರಿವಾರದವರು ಪ್ರಚಾರಕ್ಕೆ ತಂದರು. ವಿಶ್ವ ಹಿಂದು ಪರಿಷತ್‌ನ ನೃತ್ಯ ಗೋಪಾಲ್‌ದಾಸ್ ಎನ್ನುವವ 'ಬಾಬರಿ ಮಸೀದಿಯನ್ನು ಸೆಹನಾವಕ್ಕೆ ಸ್ಥಳಾಂತರಿಸಲು(!) ಮುಸ್ಲಿಮರು ಒಪ್ಪಿಕೊಂಡಿದ್ದಾರೆ' ಎಂಬ ಹೇಳಿಕೆಯನ್ನೂ ಕೊಟ್ಟಿದ್ದ. ಸೆಹನಾವ, ಫಯ್ಜಾಬಾದ್-ಸುಲ್ತಾನ್‌ಪುರ್ ರಸ್ತೆಯಲ್ಲಿರುವ ಸಣ್ಣ ಹಳ್ಳಿ. ಈ ಹಳ್ಳಿಯಲ್ಲಿ ಮುಸ್ಲಿಮರು ಮತ್ತು ಹಿಂದುಗಳು ಸಮ ಸಂಖ್ಯೆಯಲ್ಲಿದ್ದಾರೆ. ಮೀರ್ ಬಖಿಯ ಬಗೆಗಿನ ಈ ಲುಚ್ಚಾ ಚರಿತ್ರೆಯ ಬೆನ್ನು ಹತ್ತಿ ಪತ್ರಿಕೆಗಳವರು, ಟಿ.ವಿ ಮಂದಿ ಸೆಹನಾವವನ್ನು ಪ್ರಚಾರದ ಕೇಂದ್ರ ಮಾಡಿಕೊಂಡರು. ಈ ಪ್ರಚಾರಗಳ ಮೋಡಿಗೆ ಸಿಕ್ಕಿದ ಹಳ್ಳಿಯ ಕೆಲವು ಯುವಕರು, ತಮ್ಮ ಕೊಂಪೆಗೂ ಒಂದಿಷ್ಟು ಖ್ಯಾತಿ ಬಂದೀತೆಂಬ ಆಸೆಯಿಂದ, ಮೀರ್ ಬಖಿ ವಂಶಸ್ಥರ ಕತೆಗೆ ಒಗ್ಗರಣೆ ಹಾಕಿಬಿಟ್ಟರು. ಸೆಹನಾವದ ಜನ ಈ ಪ್ರಚಾರದಿಂದ ಹೆದರಿ ಕಂಗಾಲಾದರು. 'ಕರಸೇವೆ'ಗೆ ಅಯೋಧ್ಯೆಗೆ ಹೋಗುವವರೆಲ್ಲ ಸೆಹನಾವ ಮೂಲಕವೇ ಹೋಗುತ್ತಿದ್ದರು; ದಾರಿಯಲ್ಲಿ ಸಿಕ್ಕುವ ಕೆಲವು ಹಳ್ಳಿಗಳಲ್ಲಿ 'ಕರಸೇವಕರು' ತಾವು ಅಯೋಧ್ಯೆಯಲ್ಲಿ ನಡೆಸಲಿರುವ ಕೃತ್ಯಗಳ ಝಲಕ್‌ಗಳನ್ನು ತೋರಿಸಿದ್ದರು. 'ಮೀರ್ ಬಖಿಯ ವಂಶಸ್ಥರಿರುವ ಊರನ್ನು' ಗತಿ ಕಾಣಿಸದೇ ಬಿಡಲಿಕ್ಕಿಲ್ಲ ಎಂಬ ಹೆದರಿಕೆಯಲ್ಲಿ ಊರವರು, ಪಹರೆ ತಂಡಗಳನ್ನು ರಚಿಸಿಕೊಂಡು, ಹಗಲು ರಾತ್ರಿ ಕಾದರು. ಸೆಹನಾವದ ಅದೃಷ್ಟ ಚೆನ್ನಾಗಿತ್ತು. ಏನೂ ಆಗಲಿಲ್ಲ. ಹೊರಗಿನ ಮಂದಿ ಊರಿಗೆ ಹೋದ ತಕ್ಷಣ, ಊರವರು ''ಮೀರ್ ಬಖಿಗೂ ಈ ಊರಿಗೂ ಏನೂ ಸಂಬಂಧ ಇಲ್ಲ. ಅವನ ವಂಶಸ್ಥರು ಯಾರೂ ಈ ಊರಲ್ಲಿ ಇಲ್ಲ'' ಎಂದು ಹೇಳಿ ಸಾಗಹಾಕುತ್ತಿದ್ದರಂತೆ.

ಕೆ. ಫಣಿರಾಜ್
ಸಿ-೧(ಎ), ಕೈಲಾಸ ಮನೆಗಳು, ಮಣಿಪಾಲ-೫೭೬ ೧೧೯. ಉಡುಪಿ ಜಿಲ್ಲೆ

# ಕೋಮುವಾದ : ಗ್ರಾಮೀಣರ ಪ್ರತಿಕ್ರಿಯೆ

## ತಿಮ್ಮನಹಳ್ಳಿ ವೇಣುಗೋಪಾಲ್

ಭಾರತ ವಿಶ್ವದ ಅತಿ ದೊಡ್ಡ ಪ್ರಜಾಪ್ರಭುತ್ವ ದೇಶ. ಆದರೆ ಅದು ಇತ್ತೀಚಿನ ವರ್ಷಗಳಲ್ಲಿ ಸುಸ್ಥಿರತೆಯ ಕೊರತೆಯಿಂದ ನರಳುತ್ತಿದೆ. ಅದಕ್ಕೆ ನಮ್ಮ ಸಂವಿಧಾನದ ನಾಗರಿಕಬದ್ಧ ಆಶಯಗಳನ್ನು ನಾವು ಗೌರವಿಸದ ಉದ್ಧಟ ಪ್ರವೃತ್ತಿಯೂ ಕಾರಣವಾಗಿದೆ. ಜಾತ್ಯಾತೀತತೆ ಅಂತಹ ಆಶಯಗಳಲ್ಲಿ ಒಂದು. ಪಾಶ್ಚಾತ್ಯ ಪರಿಸರದಲ್ಲಿ ಧರ್ಮ ನಿರಪೇಕ್ಷತೆ ಅಥವಾ ಲೌಕಿಕತೆಯೊಂದಿಗೆ ಅರ್ಥೈಸಿಕೊಳ್ಳುವ ಜಾತ್ಯತೀತತೆ ನಮ್ಮ ಸಂದರ್ಭದಲ್ಲಿ ಅನ್ಯ ಧರ್ಮಗಳನ್ನು ಸಹಿಸುವುದರೊಂದಿಗೆ ಧರ್ಮ ಸಹಿಷ್ಣುತೆಯ ಪರಿಪಾಲನೆಯೇ ಆಗಿದೆ. ಜನತೆಯು ಅದರಲ್ಲೂ ಮುಖ್ಯವಾಗಿ ಗ್ರಾಮೀಣರ ಜಾತ್ಯತೀತ ಮುಖಿ ನಿಲುವು ಪ್ರಜಾತಂತ್ರ ವ್ಯವಸ್ಥೆಯ ಸ್ವಾಸ್ಥ್ಯ ಕಾಪಾಡುವ ತನ್ನ ಹೊಣೆಗಾರಿಕೆಯನ್ನು ಸಮರ್ಥವಾಗಿ ನಿರ್ವಹಿಸಿದೆ. ಆದರೆ ಈಗಿನ ಆತಂಕ ಬಹು ಜನಾಂಗಗಳ ಬಹುಧರ್ಮಗಳ ಬಹುಸಂಸ್ಕೃತಿಗಳ ಅನೇಕತೆಯಲ್ಲಿ ಏಕತೆಯನ್ನು ಸಾಧಿಸಿ ಹೊಂದಿರುವ ಗ್ರಾಮೀಣ ಭಾರತದ ಬಹುರೂಪಿ ಸೌಂದರ್ಯಕ್ಕೆ ತೀವ್ರ ಬಿದರಿಕೆ ಎದುರಾಗಿರುವುದು.

ವ್ಯಕ್ತಿಯೊಬ್ಬನ ಖಾಸಗಿ ವಿಷಯವಾಗಿರಬೇಕಾದ ಧರ್ಮದ ನಂಬಿಕೆಗೆ ರಾಜಕಾರಣದ ವೇಷ ತೊಡಿಸಿ ಭಾವನೆಗಳನ್ನು ಉದ್ರೇಕಿಸುತ್ತಿರುವ ಮೂಲಭೂತವಾದಿ ಶಕ್ತಿಗಳು ಕೋಮುವಾದದ ಮಾದಕವನ್ನು ತುರುಕುತ್ತಿವೆ. ಸಮಕಾಲೀನ ವಿದ್ಯಮಾನಗಳು ರಾಜಕೀಯವನ್ನು ಎಷ್ಟೊಂದು ತೀವ್ರಗತಿಯಲ್ಲಿ ಕೋಮುವಾದೀಕರಣಗೊಳಿಸುತ್ತಿವೆಯೆಂದರೆ ಅಲ್ಪಸಂಖ್ಯಾತ ಜನವರ್ಗದ ಆತಂಕಕ್ಕೆ ಸಂವೇದಿಸುವುದನ್ನೂ ದೇಶದ್ರೋಹ ಎಂದು ಬಗೆಯುತ್ತಿರುವ ಅಪಾಯಕಾರಿ ವಾತಾವರಣ ದಟ್ಟವಾಗುತ್ತಿದೆ. ಗ್ರಾಮೀಣರು ಪೋಷಿಸಿಕೊಂಡು ಬಂದ ''ಬದುಕು, ಬದುಕಲು ಬಿಡು'' ಎಂಬ ಮೌಲ್ಯವನ್ನು ವಿರೂಪಗೊಳಿಸುತ್ತಾ 'ಬದುಕುವ ಹಕ್ಕಿ'ನ ಅನುಮತಿ ಚೀಟಿಯನ್ನು ವಿತರಿಸುವ ಗುತ್ತಿಗೆಯನ್ನು ಪಡೆದ ಕೆಲ ಮೂಲಭೂತವಾದಿ ಸಂಘಟನೆಗಳು ಹಬ್ಬಿಸುತ್ತಿರುವ ದಾಂಧಲೆ ನಮ್ಮ ನೆಮ್ಮದಿಯ ನಾಳೆಗಳನ್ನು ಕಿತ್ತುಕೊಳ್ಳುತ್ತಿವೆ.

ಅಲ್ಪಸಂಖ್ಯಾತ-ಬಹುಸಂಖ್ಯಾತ ಎಂಬ ವಿಭಜನೆಯ ಪರಿಭಾಷೆಯನ್ನು ತಿಳಿಯದ ಅಸಂಖ್ಯಾತ ಗ್ರಾಮೀಣ ಜನಕೋಟಿ ನಮ್ಮ ನಡುವೆ ಇನ್ನೂ ಉಸಿರಾಡುತ್ತಿದೆ. ಬಹುಸಂಖ್ಯಾತರೊಳಗಿನ ಕುಖ್ಯಾತ ಅಲ್ಪಸಂಖ್ಯಾತ ಗುಂಪು ಬಹಿರಂಗಗೊಂಡಿರುವ ತಮ್ಮ ಹುಟ್ಟಿನ ಮೂಲದ ಸತ್ಯವನ್ನು ನಿರಾಕರಿಸುತ್ತಾ ಈಗಾಗಲೇ ಅಲ್ಪ ಸಂಖ್ಯಾತರೆಂದೇ ಗುರುತಿಸಿರುವ ಮುಸ್ಲಿಂರು, ಕ್ರಿಶ್ಚಿಯನ್ನರಿಗೆ ಮ್ಲೇಚ್ಛ ಹಣೆಪಟ್ಟಿ ತಗುಲಿಸಿ ಪ್ರಚಾರ ಮಾಡುತ್ತಿರುವುದರ ಹಿಂದೆ ಕುತರ್ಕವಿದೆಯೆಂಬುದು ಸರ್ವವೇದ್ಯ. ತಾವು ಬದುಕುತ್ತಿರುವ ನೆಲದೊಂದಿಗೆ ತಮ್ಮನ್ನು ಸಾಕ್ಷಾತ್ಕರಿಸಿಕೊಳ್ಳುವಂತೆ ವಸ್ತುಸ್ಥಿತಿಯ ತಿಳುವಳಿಕೆಯೊಂದಿಗೆ ಸಜ್ಜುಗೊಳಿಸುವುದು ನಿಸರ್ಗ ಕ್ರಿಯೆಗಳಲ್ಲಿ ಒಂದು. ಹಾಗಿರುವಾಗ ಈ ಕುಖ್ಯಾತ



ಅಲ್ಪಸಂಖ್ಯಾತ ಗುಂಪು ದೇಶಭಕ್ತಿಯನ್ನು ಸಾಬೀತು ಪಡಿಸುವಂತೆ ಮಾಡುತ್ತಿರುವ ಒತ್ತಾಯದ ವಿಧಾನ ಮತ್ತು ಅದರ ಹಿಂದೆ ಉತ್ಪನ್ನವಾದ ಉದ್ದೇಶ ಅತಿರೇಕದ್ದು ಮಾತ್ರವಲ್ಲ ಅಪ್ರಜಾಪ್ರಭುತ್ವೀಯವಾದುದು. ಅಭದ್ರತೆಯ ಆತಂಕವನ್ನು ಹುಟ್ಟಿಸುವ ಇದು ಮಾನಸಿಕ ದೂರವನ್ನು ಮತ್ತಷ್ಟೂ ಹೆಚ್ಚಿಸಿ ಹಿಂಸೆಯ ಪರಿಹಾರವನ್ನು ಆಶ್ರಯಿಸುವಲ್ಲಿ ಪರ್ಯವಸಾನಗೊಳ್ಳುವುದೇ ಹೆಚ್ಚು. ಕಾರ್ಗಿಲ್ ಘಟನೆಯಂತಹ ಸಂದರ್ಭದಲ್ಲಿ ಭಾರತೀಯ ಸೈನಿಕರ ಸಾಹಸಕ್ಕೆ ತೋರಿದ ಬೆಂಬಲಸೂಚಕ ಸಭೆ ಮತ್ತು ಪ್ರದರ್ಶನಗಳಲ್ಲಿ ಮುಸ್ಲಿಂ ಸಮುದಾಯದ ಅಭೂತಪೂರ್ವ ಉತ್ಸಾಹ ಮತ್ತು ಪಾಲ್ಗೊಳ್ಳುವಿಕೆಯ ಸಾಚಾತನ ಮತ್ತು ಪ್ರಾಮಾಣಿಕತೆಯನ್ನು ಇನ್ನೂ ಸಂದೇಹದಿಂದಲೇ ನೋಡುತ್ತಿರುವ ಪುನರುತ್ಥಾನವಾದಿಗಳ ಧೋರಣೆ ಅತಾರ್ಕಿಕವಾದುದು.

> **ಹಾರೈಕೆ**
>
> *ಗಡಿ ಇದ್ದರೆ ತಾನೇ*
> *''ಹಿಡಿ ! ಬಡಿ ! ಸುಡಿ !''*
> *''ಗಡಿಗಾಗಿ ಮಡಿ''*
> *ಈ ಬಗೆಯ ಛಲದ ನುಡಿ ?*
> *ಗಡಿಯೇ ಇಲ್ಲದಂತೆ*
> *ಯಾವ ಗಡಿಬಿಡಿಯೂ ಇಲ್ಲದಂತೆ*
> *ಗಗನ ಸುಖವಾಗಿರುವುದಾದರೆ*
> *ಧರೆಯಲ್ಲಿ ಯಾಕಾಗಬಾರದು ?*
>
> *- ಹಾಲಾಡಿ ಮಾರುತಿರಾವ್*

ಪ್ರಪಂಚದ ಬೇರೆ ಭಾಗಗಳಲ್ಲಿ ಕಾಣದ ವಿಭಿನ್ನ ಆಯಾಮಗಳು ನಮ್ಮ ಭಾರತದ ಧಾರ್ಮಿಕ ಮೂಲಭೂತವಾದಕ್ಕೆ ಇದೆ. ಸುವರ್ಣ ಸ್ವಾತಂತ್ರ್ಯದ ಸಂಭ್ರಮದಲ್ಲಿ ಬೀಗುತ್ತಿರುವ ನಾವು ಒಂದಿಷ್ಟು ನೆಲದ ಮೇಲೆ ನಿಂತು ಹಳ್ಳಿಗಳ ಕಡೆ ಬೀಸುನೋಟ ಚೆಲ್ಲಿದರೂ ಸ್ಪಷ್ಟವಾಗುತ್ತದೆ. ಅವುಗಳ ದಿಕ್ಕೆಟ್ಟ ಸ್ಥಿತಿ ಸ್ವಾತಂತ್ರ್ಯನಂತರ ಇತ್ತೀಚಿನ ವರ್ಷಗಳವರೆಗೂ ನಗರ ಕೇಂದ್ರಿತವಾದ ಸಾಕಷ್ಟು ಅವಾಂತರಗಳನ್ನು ಸೃಷ್ಟಿಸುವತ್ತ ಗಮನ ಹರಿಸಿದ್ದ ಮೂಲಭೂತವಾದಿ ಶಕ್ತಿಗಳು ಈಗ ಆಧುನಿಕ ಅರ್ಥದ ಕೋಮುವಾದಿ ಜಾಲವನ್ನು ರಾಜಕಾರಣದ ಮುಖೇನ ಗ್ರಾಮೀಣರ ಬದುಕಿನ ಮೇಲೆ ಬೀಸಿವೆ. ಸಹಕಾರ, ಸೌಹಾರ್ದ, ಭಾವೈಕ್ಯತೆಯಂತಹ ಬದುಕಿನ ಮೌಲ್ಯಗಳನ್ನು ವ್ಯವಸ್ಥಿತವಾಗಿ ಛಿದ್ರಗೊಳಿಸುತ್ತಿದೆ. ಗ್ರಾಮೀಣ ಸಮಸ್ಯೆಗಳು ದ್ವಿತೀಯ ಆದ್ಯತೆಗೆ ಒತ್ತಲ್ಪಟ್ಟು ಹಿಂದೂ ಸಾಂಸ್ಕೃತಿಕ ಪುನರುತ್ಥಾನದ ಬೀಜಗಳ ಬಿತ್ತುವಿಕೆ ಹದವಿಲ್ಲದ ಆಧುನಿಕ ಸ್ಪರ್ಶಕ್ಕೆ ಒಳಗಾದ ಗ್ರಾಮೀಣರ ಮನಸ್ಸುಗಳಲ್ಲಿ ನಡೆಯುತ್ತಿದೆ. ಒಂದು ವೇಳೆ ಗ್ರಾಮೀಣರ ಎದೆಗೂಡು ಸಾಮಾಜಿಕ-ಆರ್ಥಿಕ ನ್ಯಾಯಕ್ಕಾಗಿ ತಿದ್ದಿಕೊಂಡರೆ ಅಶಿಸ್ತನ್ನೂ, ರಾಷ್ಟ್ರೀಯತೆಗೆ ಧಕ್ಕೆಯನ್ನೂ, ಐಕ್ಯಭಂಗವನ್ನೂ, ಪ್ರತಿಭಾವಂಚನೆಯನ್ನೂ ಕಾಣುತ್ತಾರೆ. ಗ್ರಾಮೀಣರಲ್ಲಿ ವಸಾಹತು ಪುನರಾಗಮನದ ಭೀತಿ ತಂದು ಗಡಿಭಾಗದ ಸಂಚಿಗೆ ಹರಕೆಯ ಕುರಿಗಳಾಗಿ ಸಾಕುವ ಕೆಲಸ ಸದ್ದಿಲ್ಲದೆ ಸಾಗುತ್ತದೆ. ಇವು ಓಲೆಗರಿ ಕಟ್ಟನಲ್ಲಿರುವ ಗುಪ್ತ ಕಾರ್ಯಸೂಚಿಯ ಒಂದೆರಡು ಸ್ಯಾಂಪಲ್‌ಗಳಷ್ಟೆ.

ಹೀಗೆ ಆಧುನಿಕ ಮಾರುವೇಷದಲ್ಲಿ ಕೋಮುವಾದದೊಂದಿಗೆ ಅವತರಿಸಿರುವ ಮೂಲಭೂತವಾದಿ ಶಕ್ತಿಗಳು ರಾಜಕಾರಣ ಮತ್ತು ಧರ್ಮದ ಸಂಕರಕ್ಕೆ ಪ್ರಶಸ್ತವೆಂದೆಣಿಸಿ ವಿಸ್ತಾರ ಗ್ರಾಮೀಣ ಪ್ರದೇಶವನ್ನು ಹೊಸದಾಗಿ ಆಯ್ದುಕೊಂಡು ನಡೆಸುತ್ತಿರುವ ಭಾರಿ ಕುಟಿಲ ಯೋಜನೆಯೊಂದನ್ನು ವಿಫಲಗೊಳಿಸಬೇಕಾಗಿದೆ. ಹಾಗಾದರೆ ಇದಕ್ಕೆ ಉತ್ತರ ಎಲ್ಲಿದೆ? ಇದಕ್ಕೆ ರೈತಾಪಿ ಮತ್ತದರ ಪೂರಕ ಹಿನ್ನೆಲೆಯಿಂದ ಬಂದ ಜಾತ್ಯತೀತ ಪ್ರಜಾಪ್ರಭುತ್ವೀಯ ಚಿಂತನೆಯ ವಿದ್ಯಾವಂತ ವರ್ಗದ ಎಚ್ಚರ ಮಾತ್ರ ಸಮರ್ಥ ಉತ್ತರ ನೀಡಬಲ್ಲದು.

ತಿಮ್ಮನಹಳ್ಳಿ ವೇಣುಗೋಪಾಲ್
ಇತಿಹಾಸ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು,
ಹೊಸದುರ್ಗ - ೫೭೭ ೫೨೭. ಚಿತ್ರದುರ್ಗ ಜಿಲ್ಲೆ

# ಜೈ ಸಂಖ್ಯಾ ಜ್ಞಾನ್

ಮಂದಮತಿ

ದಿಲ್ಲಿ ರಾಜಕಾರಣದಲ್ಲಿ ಇಂದಿನ ದಿನಗಳಲ್ಲಿ ಅತ್ಯಂತ ಪ್ರಭಾವಶಾಲಿಗಳು ಯಾರು? ಆರ್.ಎಸ್.ಎಸ್? ವಿ.ಎಚ್.ಪಿ.? ಮೌಲ್ಯಾಧಾರಿತ ರಾಜಕೀಯ, ಲೋಹಿಯಾ ಸೋಶಿಯಲಿಸಂನೆಲ್ಲ ರಕ್ತಗತ ಮಾಡಿಕೊಂಡಿರುವ ಗಡ್ಡಧಾರಿಗಳು? ಜುಬ್ಬಾಧಾರಿಗಳು? ಹತ್ತಿಪ್ಪತ್ತು ಎಂ.ಪಿ.ಗಳನ್ನು ದಿಲ್ಲಿಗೆ ಕಳುಹಿಸಲು ಶಕ್ತರಾಗಿರುವ ಪೂರ್ವ, ಪಶ್ಚಿಮ, ದಕ್ಷಿಣದ ಸಂಸ್ಥಾನಗಳ ತುಂಡರಸರು? ಲ್ಯಾಪ್‌ಟಾಪ್ ಕಂಪ್ಯೂಟರಿನಿಂದಲೇ ದೇಶದ ಬಡತನವನ್ನು ನಿರ್ಮೂಲನಗೊಳಿಸಲು ಪಣ ತೊಟ್ಟಿರುವ ದಕ್ಷಿಣ ದೇಶದ, ಅತೀ ಚಟುವಟಿಕೆಗೆ ಹೆಸರುವಾಸಿಯಾದ, ವಿಶ್ವ ಬ್ಯಾಂಕ್‌ನ ಕಣ್ಮಣಿ, ರಾಜಕೀಯ ಧುರೀಣ?

ಮೇಲಿನ ಪ್ರಶ್ನೆಗಳನ್ನು ದಿಲ್ಲಿ ರಾಜಕಾರಣದ ಒಳಗುಟ್ಟನ್ನೆಲ್ಲಾ ತಿಳಿದಿರುವ ಜರ್ನಲಿಸ್ಟ್, ಕೌಟಿಲ್ಯನನ್ನು ಕೇಳಿದೆ. ನಾನೂ ಕೌಟಿಲ್ಯನೂ ಬಾಲ್ಯ ಸ್ನೇಹಿತರು. ನಮ್ಮ ಮಧ್ಯೆ ಮುಚ್ಚುಮರೆಗಳಿಲ್ಲ. ಲೋಕಕ್ಕೇ ಅರ್ಥವಾಗುವ ಸಂಗತಿಗಳೂ ನನಗೆ ಸಂಕೀರ್ಣವೆನಿಸುತ್ತಿದ್ದರಿಂದ, ಇವನೊಬ್ಬ ಮಂದಮತಿ ಎಂದು ನನ್ನ ಬಗ್ಗೆ ಕೌಟಿಲ್ಯನ ಅಭಿಪ್ರಾಯ. ಅದರಿಂದ ನಮ್ಮ ಸ್ನೇಹಕ್ಕೇನೂ ಚ್ಯುತಿಯಿಲ್ಲ. ಮೇಲಿನ ನನ್ನ ಪ್ರಶ್ನೆಗಳಿಗುತ್ತರಿಸುತ್ತಾ, 'ನೀನು ಹೆಸರಿಸಿದ ಎಲ್ಲ ಶಕ್ತಿಗಳೂ, ವ್ಯಕ್ತಿಗಳೂ ಪ್ರಭಾವಶಾಲಿಗಳಾಗಿರಬಹುದು. ಆದರೆ ನ್ಯೂಮರಾಲಜಿಯಲ್ಲಿ ವಿಶೇಷ ಪಾಂಡಿತ್ಯವನ್ನು ಹೊಂದಿರುವ ಹದಿಮೂರು ಮಂದಿಯ ಕೂಟವೊಂದು ಪ್ರಧಾನಿಯವರ ಆಪ್ತ ಕೂಟದಲ್ಲಿದ್ದು ನಮ್ಮ ರಾಜಕೀಯ ಭವಿಷ್ಯವನ್ನು ನಿರ್ಧರಿಸುವಂತೆ ಕಾಣುತ್ತದೆ', ಎಂದ.

ಕೌಟಿಲ್ಯ ಸ್ವಲ್ಪ 'ಕ್ರ್ಯಾಕ್' ಎಂದು ನನ್ನ ನಂಬಿಕೆ. ಮೇಲಿನ ಅವನ ಬಡಬಡಿಕೆ, ಅವನನ್ನು ಇನ್ನೂ ಸಂಕೀರ್ಣವಾದ 'ಸೀ ಬೈಟು' ಗುಂಪಿಗೆ ಸೇರಿಸಬೇಕೆ? ಎನುವಂತಾಯಿತು.

'ಯಾರಯ್ಯ ಆ ಹದಿಮೂರು ಮಂದಿ?' ಎಂದೆ.

'ಅದನ್ನು ಹೇಳಿದರೆ ನನ್ನ ಸುದ್ದಿಮೂಲವನ್ನು ಬಹಿರಂಗಪಡಿಸಿದಂತಾಗುತ್ತದೆ. ಆದ್ದರಿಂದ ನಾನು ಹೇಳಲಾರೆ.'

'ನೀನು ನಿಜ ಹೇಳುತ್ತಿದ್ದೀಯ ಎನ್ನುವುದಕ್ಕೆ ಆಧಾರವೇನು?'

'ಹೊಗೆ ಇದ್ದಲ್ಲಿ ಬೆಂಕಿ ಅಲ್ಲವೆ?' ಎಂದು ಕೌಟಿಲ್ಯ ನಿಗೂಢವಾಗಿ ನಕ್ಕ. ನಾನು ಬೆಪ್ಪನಂತೆ ಅವನನ್ನೇ ದಿಟ್ಟಿಸುತ್ತಿರಲು,

'ಸಂಖ್ಯೆ ಹದಿಮೂರು ನಮ್ಮ ನಾಯಕರ ಜೀವನದಲ್ಲಿ ಎಷ್ಟು ಪ್ರಧಾನ ಪಾತ್ರ ವಹಿಸುತ್ತದೆ ಎನ್ನುವುದನ್ನು ನೀನು ಗಮನಿಸಿದ್ದೀಯೋ?' ಎಂದ.

'ಹೌದು! ಮೊದಲನೆ ಬಾರಿ ಹದಿಮೂರು ದಿನಗಳ ಕಾಲ ಪ್ರಧಾನಿಯಾಗಿದ್ದು, ಎರಡನೆ ಬಾರಿ ಹದಿಮೂರು ತಿಂಗಳ ಕಾಲ ಅಧಿಕಾರವಹಿಸಿದ್ದು, ಈಗ ಮತ್ತೆ ಹದಿಮೂರನೇ ಲೋಕಸಭೆಯಲ್ಲಿ ಹದಿಮೂರನೇ ತಾರೀಖು ಬೆಳಿಗ್ಗೆ ೧೦.೩೦ ಗಂಟೆಗೆ ಪ್ರಧಾನಿಯಾಗಿ ಪ್ರಮಾಣವಚನ ಸ್ವೀಕರಿಸಿದ್ದು.....' ಎಂದು ಹೇಳಿ ನನ್ನ ರಾಜಕೀಯ ಜ್ಞಾನವನ್ನು ಪ್ರದರ್ಶಿಸಿದೆ.

'ಇದನ್ನೇ ನಾನು ಹೊಗೆ ಎಂದಿದ್ದು! ಈ ಹೊಗೆಯ ಹಿಂದೆ ರಾಜತಾಂತ್ರಿಕ ಸಲಹೆ ನೀಡುವ ಒಂದು ಆಪ್ತರ ಗುಂಪಿದ್ದರೆ (ಇದನ್ನೇ ಬೆಂಕಿ ಎಂದುಕೋ), ಅದರಲ್ಲಿ ಹದಿಮೂರು ಸದಸ್ಯರಿರಬೇಕೆಂದು ನಿಶ್ಚಿತ ತಾನೆ ?' ಎಂದು




ನನ್ನ ಅಜ್ಞಾನವನ್ನು ಅಣಕಿಸುವವನಂತೆ ಕಣ್ಣು ಮಿಟುಕಿಸಿದ.

'ಆದರೂ......' ಎಂದು ರಾಗವೆಳೆಯುತ್ತಿದ್ದಂತೆಯೇ ನನ್ನನ್ನು ತಡೆದು ತನ್ನ ಸರ್ಕಾರ ವಿಶ್ವಾಸ ಮತ ಪಡೆದುಕೊಳ್ಳುವುದು ಅಸಾಧ್ಯವೆಂದು ಸ್ಪಷ್ಟವಾಗಿ ತಿಳಿದಿದ್ದರೂ ಸಹ, ವಿಧಿವತ್ತಾಗಿ ಮಂತ್ರಿಗಳನ್ನು ನೇಮಿಸಿ ಮೊದಲ ಬಾರಿ ಸರ್ಕಾರ ರಚಿಸಿದ್ದೇಕೆ? ಹದಿಮೂರು ದಿನಗಳ ನಂತರ ಪ್ರಧಾನಮಂತ್ರಿ ಪದವನ್ನು ಕಳೆದುಕೊಳ್ಳುವ ಪೂರ್ವಯೋಜನೆಯಿಂದಲೇ! ಅದೃಷ್ಟ ಸಂಖ್ಯೆ ಹದಿಮೂರರೊಡನೆ ಸಲ್ಲಾಪಿಸುವ ಒಂದು ಸಣ್ಣ ಅವಕಾಶವಾದರೂ ಸರಿ, ತಪ್ಪಿಸಿಕೊಳ್ಳಬಾರದು ಎಂದು ಹದಿಮೂರು ಆಪ್ತರೂ ಒಮ್ಮತದಿಂದ ಪ್ರಧಾನಿಗಳಿಗೆ ಸಲಹೆ ಕೊಟ್ಟಿದ್ದರು ಎಂದು ನನ್ನ ಅಜ್ಞಾತ ಸುದ್ದಿ ಮೂಲಗಳಿಂದ ನನಗೆ ತಿಳಿಯಿತು', ಎಂದ.

ನಾನು ಏನೂ ಹೇಳದೆ ಕೌಟಿಲ್ಯನ ಮಾತುಗಳನ್ನೆ ಮೆಲುಕು ಹಾಕುತ್ತಿರಲು, ಅಲ್ಲಯ್ಯಾ ಟ್ಯೂಬ್ ಲೈಟ್! ಅಂದು ಮೊದಲ ಬಾರಿ ಹದಿಮೂರರೊಡನೆ ಮಾಡಿದ ಒಂದು ಸಣ್ಣ 'Tryst'ನ ಫಲಶ್ರುತಿಯಾಗಿ, ಎರಡನೇ ಬಾರಿ ರಚಿಸಿದ ಸರ್ಕಾರಕ್ಕೆ ಹದಿಮೂರು ಮತಗಳ ಅಂತರದಿಂದ ವಿಶ್ವಾಸ ಮತ ದಕ್ಕಿದ್ದು, ಹಾಗೂ ಮತ್ತೆ ಹದಿಮೂರು ತಿಂಗಳ ಕಾಲ ಪ್ರಧಾನ ಮಂತ್ರಿಯಾಗಿ ಮುಂದುವರಿದದ್ದು, ಇವೆಲ್ಲ ಸತ್ಯ ತಾನೆ?'

'ಅದೇನೋ ಸತ್ಯ..... ಈ ಬಾರಿ ಫಲಶ್ರುತಿಯೇನು ?'

'ಆಪ್ತ ಮಂಡಲಿಯ ಹದಿಮೂರು ಸದಸ್ಯರು ಒಮ್ಮತದಿಂದ ೧೦ನೇ ತಿಂಗಳ ಹದಿಮೂರನೇ ದಿನದಂದು ಮಾತ್ರ ೩ನೆಯ ಬಾರಿ ಪ್ರಮಾಣವಚನ ಸ್ವೀಕರಿಸಲು ಶುಭದಿನವೆಂದು ಪ್ರಧಾನಮಂತ್ರಿಗಳಿಗೆ ಆಗ್ರಹಪೂರ್ವಕವಾಗಿ ಹೇಳಿದರು. ದೇಶಕ್ಕೆ 'ಅಣುಬಾಂಬ್' ಕೊಟ್ಟು 'ಜೈ ವಿಜ್ಞಾನ್' ಎಂಬ ಹೊಸ ಸ್ಲೋಗನ್ ಕೊಟ್ಟ ಪ್ರಧಾನಿ, ಮೂಢನಂಬಿಕೆಗೆ ಸೊಪ್ಪುಹಾಕಲು ಮೊದಮೊದಲು ಒಪ್ಪಲಿಲ್ಲ. ಆದರೆ, ಮೇಲೆ ಹೇಳಿದ ಶುಭದಿನದಂದು ಪಟ್ಟಕ್ಕೇರಿದರೆ ಮತ್ತೆ ಹದಿಮೂರು ವರ್ಷ ದೇಶದ ಪ್ರಧಾನಿಯಾಗಿ ಮುಂದುವರೆದು ಸುಸ್ಥಿರ ಸರ್ಕಾರವನ್ನು ಕೊಡುವ ಸಾಧ್ಯತೆಯ ಸ್ಪಷ್ಟ ಸೂಚನೆಯನ್ನು ಅದೃಷ್ಟ ಸಂಖ್ಯೆ ತೋರಿಸುತ್ತಿದೆ ಎಂಬುದನ್ನು ಅರಿತಾಗ ಮತ್ತೆ ಒಪ್ಪಿಕೊಂಡರು!'

ಕೌಟಿಲ್ಯನ ಈ ಹೇಳಿಕೆಗಳನ್ನೆಲ್ಲಾ ನಂಬಲು ನಾನು ಸರ್ವಥಾ ಸಿದ್ಧನಿರಲಿಲ್ಲ. ನನ್ನ ವದನದಲ್ಲಿ ಉದಿಸಿದ ಸಂಶಯದ ಛಾಯೆಯನ್ನು ಗುರುತಿಸಿ, ಕೌಟಿಲ್ಯ ಮುಂದುವರಿದು, 'ಹದಿಮೂರರ ಮಹತ್ವ ಯಾವುದೇ ಸಂದರ್ಭದಲ್ಲಿ ದುರ್ಬಲಗೊಳ್ಳದಂತೆ ಮಾಡಲು, ಕೆಲವು ರಾಜತಾಂತ್ರಿಕ ಮಾರ್ಗಗಳನ್ನು ಕೈಗೊಳ್ಳುವಂತೆ ಆಪ್ತರು ತಮ್ಮ ನಾಯಕರಿಗೆ ಉಪದೇಶಿಸಿದ್ದಾರೆ', ಎಂದ. ಅದೇನೆಂದು ನಾನು ಕೇಳುವ ಮೊದಲೇ ಅವನು 'ರಾಜಕೀಯ ಸ್ಥಿರತೆಯ ದೃಷ್ಟಿಯಿಂದ ಸಂಸತ್‌ನ ಜೀವಿತ ಕಾಲವನ್ನು ಹದಿಮೂರು ವರ್ಷಕ್ಕೇರಿಸುವ ಸಂವಿಧಾನ ತಿದ್ದುಪಡಿ ಮಾಡುವುದು ಮೊದಲನೆ ಹೆಜ್ಜೆ.'

'ಅದರಿಂದೇನು ಲಾಭ? ಸಂಸತ್‌ನ ಕಾಲಾವಧಿ ಹದಿಮೂರು ವರ್ಷ ಆದರೆ ಪ್ರಧಾನಿ ಪಟ್ಟವೂ ಹದಿಮೂರು ವರ್ಷ ಏಕಾಗಬೇಕು?'

'ಅದಕ್ಕೆಂದೇ ಸಂವಿಧಾನದ ಇನ್ನೊಂದು ತಿದ್ದುಪಡಿಯನ್ನು ತರಲಾಗುತ್ತದೆ. ವಿದೇಶೀ ಮೂಲದವರಿಗೆ, ಹಿಂದಿ ಮಾತೃಭಾಷೆ ಅಲ್ಲದವರಿಗೆ, ರಾಷ್ಟ್ರದ ಅತ್ಯುನ್ನತ ಸ್ಥಾನಗಳೆರಡಕ್ಕೂ ಅವಕಾಶವಿಲ್ಲ, ಎಂದು ವಿಧಿಸಲಾಗುತ್ತದೆ.'

'ಅಷ್ಟಾದರೂ ಹದಿಮೂರು ವರ್ಷಗಳವರೆಗೆ ಪ್ರಧಾನಿ ಪದವಿಯನ್ನು ಕಿತ್ತುಕೊಳ್ಳುವವರು ಯಾರೂ ಇರುವುದಿಲ್ಲ ಎನ್ನುವುದು ಹೇಗೆ ?'

'ಕೇಳಯ್ಯ, ಮಂದಮತಿ! [illegible] ಸರ್ಕಾರ ಉರುಳಬೇಕಾದರೆ [illegible]




ಬೆಂಬಲ ಹಿಂತೆಗೆದುಕೊಂಡಾಗ ಮಾತ್ರ ಸಾಧ್ಯ. ಸಂಸತ್ತಿನಲ್ಲಿ ಹೆಚ್ಚು ಶಕ್ತವಾಗಿರುವ ಪ್ರಾದೇಶಿಕ ಪಕ್ಷಗಳ ಕಡೆ ನಿನ್ನ ಧ್ಯಾನವನ್ನು ತೊಡಗಿಸಿಕೋ!'

'ಆಹಾ! ಎಂತಹ ತಂತ್ರ!' ಎಂದು ನಾನು ಉದ್ಗಾರ ಮಾಡಲೇಬೇಕಾಯ್ತು.

'ಪ್ರಧಾನಿಗಳು ಒಂದು ಸಣ್ಣ ತಪ್ಪು ಮಾಡಿದ್ದಾರೆ,' ಎಂದ ಕೌಟಿಲ್ಯ.

'ಏನು?' ಎಂದೆ.

'ಸರ್ಕಾರದ ಸ್ಥಿರತೆಯ ದೃಷ್ಟಿಯಿಂದ, ಅದೃಷ್ಟ ಸಂಖ್ಯೆಯ ಶಕ್ತಿಯನ್ನು, ಮಂತ್ರಿಗಳನ್ನು ನೇಮಿಸುವಾಗ, ಸರಿಯಾಗಿ ಉಪಯೋಗಿಸಿಕೊಂಡಿಲ್ಲ.'

'ಅದು ಹೇಗೆ?'

'೨೪ಕ್ಕಿಂತ ಹೆಚ್ಚು ಸಹಯೋಗ ಪಕ್ಷಗಳ ಸಹಕಾರದಿಂದ ಸರ್ಕಾರ ರಚಿಸಿರುವಾಗ, ಮಂತ್ರಿಗಳ ಸಂಖ್ಯೆಯನ್ನು ಹದಿಮೂರರೊಡನೆ ಜೋಡಿಸಬೇಕಾಗಿತ್ತು. ನನ್ನನ್ನು ಕೇಳಿದರೆ, ಕಡೆಯ ಪಕ್ಷ ೧೩x೧೩ ಅಂದರೆ ೧೬೯ ಮಂತ್ರಿಗಳನ್ನಾದರೂ ನೇಮಿಸಬೇಕಿತ್ತು!'

ಕೌಟಿಲ್ಯನ ತರ್ಕಗಳ ಮುಂದೆ ಹದಿಮೂರರ ಮಹತ್ವದ ಬಗ್ಗೆ ನನಗಿದ್ದ ಸಂಶಯಗಳೆಲ್ಲ ನಿವಾರಣೆಯಾದವು. ಪ್ರಧಾನ ಮಂತ್ರಿಗಳಿಗೆ ಆ ಸಂಖ್ಯೆಯ ಬಗ್ಗೆ ಏನು ನಂಬಿಕೆಯೋ, ಅದೇ ಮಟ್ಟಕ್ಕೆ ನನ್ನ ನಂಬಿಕೆಯೂ ಏರಿತೆಂದರೆ ತಪ್ಪಲ್ಲ. ನನ್ನ ಕುತೂಹಲ ಇನ್ನೂ ಹೆಚ್ಚು ಪ್ರಚೋದನೆಗೊಂಡಿತು.

'ಮಿತ್ರನೇ, ಆಳುವ ಕೂಟದಲ್ಲಿರುವ ಅತಿ ದೊಡ್ಡ ಪಕ್ಷದ ಎಂ.ಪಿ.ಗಳ ಸಂಖ್ಯೆ ೧೮೨. ಇದಕ್ಕೂ ಅದೃಷ್ಟ ಸಂಖ್ಯೆಗೂ ಏನೋ ಸಂಬಂಧವಿರಬೇಕಲ್ಲವೆ? ಎಂ.ಪಿ.ಗಳ ಸಂಖ್ಯೆ ೧೩ x ೧೩ ಆಗಿಲ್ಲದಿರುವುದು, ಆ ಪಕ್ಷದ ಭವಿಷ್ಯವು ಎಷ್ಟು ಬೆಳಗಬಹುದಿತ್ತೋ ಅಷ್ಟು ಬೆಳಗದಿರುವುದಕ್ಕೆ ಸೂಚನೆಯೋ?' ಎಂದೆ.

'ಪಕ್ಷದ ಬುದ್ಧಿಜೀವಿಗಳು ಈ ದಿಶೆಯಲ್ಲಿ ಆಲೋಚಿಸಿದ ಸುದ್ದಿ, ನಂಬಲರ್ಹವಾದ ಮೂಲದಿಂದ ನನಗೆ ತಿಳಿದುಬಂದಿದೆ. ೧೮೨ ಎಂ.ಪಿ.ಗಳಲ್ಲಿ ಗುಪ್ತ ಕಾರ್ಯ ಸೂಚಿಯಲ್ಲಿ ನಂಬಿಕೆ ಇಲ್ಲದವರನ್ನು ಬಿಟ್ಟು ಉಳಿದವರನ್ನು ಲೆಕ್ಕ ಹಾಕಿದರೆ, ಆಶ್ಚರ್ಯಜನಕ ರೀತಿಯಲ್ಲಿ ಅದು ೧೬೯ ಆಗಿತ್ತು! ಈ ಗುಂಪನ್ನು ಮಾತ್ರ ಅನೌಪಚಾರಿಕವಾಗಿ ಪಾರ್ಲಿಮೆಂಟರಿ ಗ್ರೂಪ್ ಎಂದು ಹೆಸರಿಸಿ, ಅದೃಷ್ಟ ದೇವತೆಯನ್ನು ಸ್ವಲ್ಪ ಗೊಂದಲಕ್ಕೀಡುಮಾಡಿ ಅದೃಷ್ಟದ ಬಾಗಿಲನ್ನು ತೆರೆಯಿಸಿಕೊಳ್ಳುವ ಯೋಜನೆಯನ್ನು ಆ ಪಕ್ಷದ ಗುಂಪೊಂದು ಸಜ್ಜುಮಾಡಿತ್ತು. ಅಷ್ಟರಲ್ಲಿ ಅವರಲ್ಲಿದ್ದ ಕಂಪ್ಯೂಟರ್ ತಜ್ಞ ಒಂದು ಸಮೀಕರಣವನ್ನು ತೋರಿಸಿಕೊಟ್ಟು ಎಲ್ಲರನ್ನೂ ಸಂತಸಗೊಳಿಸಿದ !'

'ಅದ್ಯಾವುದಪ್ಪಾ ಅಂತಹ ಸಮೀಕರಣ ?'

'೧೮೨ = (೧೩ x ೧೩) + ೧೩'

ಕಣ್ಣನ್ನಗಲಿಸಿ ನಾನು ಆಶ್ಚರ್ಯ ಸೂಚಿಸಿದೆ.

'ಅಷ್ಟೇ ಅಲ್ಲ! ಹದಿಮೂರು ಮತ್ತು ಹದಿನಾಲ್ಕನ್ನು ಗುಣಿಸಿದರೆಷ್ಟು ?'

ನಾನು ನನ್ನ ಕಣ್ಣನ್ನು ಇನ್ನಷ್ಟು ಅಗಲಿಸಿದೆ.

'ಹದಿನಾಲ್ಕು ಏನನ್ನು ಸೂಚಿಸುತ್ತದೆ? ಅದು ಹದಿನಾಲ್ಕನೆಯ ಲೋಕಸಭೆಯ ಅದೃಷ್ಟ ಸಂಖ್ಯೆ. ಮುಂದಿನ ಲೋಕಸಭೆ ನೇತೃತ್ವವೂ ಅದೇ ಪಕ್ಷಕ್ಕೇ. ಇನ್ನೂ ಹೇಳುತ್ತೇನೆ ಕೇಳು. ರಾಮನಿಗೂ ರಾಮಜನ್ಮ ಭೂಮಿಗೂ ಇರುವ ಸಾಮೀಪ್ಯದಷ್ಟೇ ಪ್ರಧಾನ ಮಂತ್ರಿಗಳಿಗೂ ಅವರ ಗೃಹಮಂತ್ರಿಗಳಿಗೂ ಇರುವುದು ಸಾಧ್ಯ ತಾನೆ? ಹಾಗಾಗಿ '೧೪' ಗೃಹಮಂತ್ರಿಗಳ ಅದೃಷ್ಟ ಸಂಖ್ಯೆ. ಅವರು ಮುಂದೆ ಪ್ರಧಾನಿಗಳಾಗುವ ಲಕ್ಷಣ.'

ನಾನು ನನ್ನ ಕಣ್ಣನ್ನು ಇನ್ನಷ್ಟು ಅಗಲಿಸಲಾಗಲಿಲ್ಲ. ಆದರೆ ನನ್ನ ಆ ಪ್ರಯತ್ನವೇ ನನ್ನ ಭಾವನೆಗಳನ್ನು ನನ್ನ ಮುಖದಲ್ಲಿ ಪ್ರಕಟಿಸಿತು. ಕೌಟಿಲ್ಯ ಮುಂದುವರಿದು ಮತ್ತೊಂದು ಆಶ್ಚರ್ಯಕರ ಭಾಷ್ಯವನ್ನು ನನ್ನ ಮುಂದಿಟ್ಟ :

'ಹದಿನಾಲ್ಕು ಹದಿಮೂರಕ್ಕಿಂತ ಒಂದು ಹೆಚ್ಚು. ಇದರ ಅರ್ಥ ಏನಿರಬಹುದು?'

'ಏನಿರಬಹುದು!?'

'ಹದಿಮೂರು NDA ಅಜೆಂಡಾ. Hidden ಅಜೆಂಡಾನೂ ಒಟ್ಟುಗೂಡಿದರೆ ಹದಿನಾಲ್ಕು. Hidden ಅಜೆಂಡಾ ಹದಿಮೂರನೇ ಲೋಕಸಭೆಯಲ್ಲಿ ಸ್ವಲ್ಪ ಪ್ರಕಟವಾದರೆ ಹದಿನಾಲ್ಕನೆಯ ಲೋಕಸಭೆಯಲ್ಲಿ ಪೂರ್ಣ ಪ್ರಮಾಣದಲ್ಲಿ ಪ್ರಕಟಗೊಳ್ಳುವ ಸೂಚನೆಗಳನ್ನು ಈ ಸಂಖ್ಯೆಗಳಲ್ಲಿ ನೋಡಬಹುದು.'

ನಾನು ಅರಿತಂತೆ ಕೌಟಿಲ್ಯ ಒಬ್ಬ ನಿಷ್ಪಕ್ಷಪಾತಿ ಪತ್ರಕರ್ತ. ಆದರೆ ಮೇಲಿನ ಅವನ ಭಾಷ್ಯಗಳನ್ನು ಅವಲೋಕಿಸುವವರು ತಪ್ಪು ಅಭಿಪ್ರಾಯದಿಂದ ಅವನೊಬ್ಬ ವಾಮಪಕ್ಷದವನೆಂದು ಆರೋಪಿಸುವ ಅಪಾಯ ಇತ್ತು. ಇಷ್ಟೆಲ್ಲ ತಿಳಿದಿರಬೇಕಾದರೆ, ಆಪ್ತಕೂಟದ ಹದಿಮೂರು ಮಂದಿಗಳಲ್ಲಿ ಕೆಲವರಾದರೂ ಕೌಟಿಲ್ಯನ ಆಪ್ತರಿರಬೇಕೆಂದು ನನ್ನ ಶಂಕೆ. ಅವನ ಅಜ್ಞಾತ ಮೂಲಗಳೂ ಅವರೇ ಇರಬಹುದೇ ?

'ಈ ದೇಶದ ಪ್ರಧಾನಮಂತ್ರಿ, ರಕ್ಷಣಾಮಂತ್ರಿ ಮುಂತಾದ ಕೆಲವೇ ಮುಖ್ಯರಿಗೆ ಮಾತ್ರ ಗೊತ್ತಿರಬಹುದಾದ ಒಂದು ಗುಟ್ಟನ್ನು ನಿನಗೆ ಹೇಳುತ್ತೇನೆ ಕೇಳು' ಎಂದು ಕೌಟಿಲ್ಯ ಆರಂಭಿಸಿದಾಗ, ದೇಶದ ರಕ್ಷಣಾ ರಹಸ್ಯಗಳನ್ನೆಲ್ಲ ಹೊರಗೆಡವಿ ಎಲ್ಲಿ ಆಭಾಸ ಮಾಡುತ್ತಾನೋ ಎಂದು ಒಂದು ಕ್ಷಣ ನನಗೆ ಆತಂಕವಾಯಿತು.

'ಕಾರ್ಗಿಲ್‌ನಲ್ಲಿ ಪಾಕಿಸ್ತಾನಿಗಳು ನುಸುಳಿ, ಭಾರತದ ನೆಲವನ್ನು ಆಕ್ರಮಿಸಿಕೊಳ್ಳಲು ತೊಡಗಿದ ಸುದ್ದಿ, ಅತ್ಯಂತ ಮೇಲ್ಮಟ್ಟದ ಆಡಳಿತ ವರ್ಗಕ್ಕೆ ತಿಳಿದಿದ್ದರೂ, ಪ್ರತಿದಾಳಿ ನಡೆಸಲು ತಡ ಮಾಡಿದ್ದೇಕೆ ?...

'ಪ್ರತಿದಾಳಿ ಮಾಡಲು ಶುಭ ದಿನವನ್ನು ನಿರ್ಧರಿಸಬೇಕಿತ್ತು. ಅದನ್ನು ಆಪ್ತ ಸಮಿತಿಯು ನಿಶ್ಚಯ ಮಾಡಬೇಕಿತ್ತು. ಪಾಕಿಸ್ತಾನಿಗಳು ಒಳನುಗ್ಗಿ ಹದಿಮೂರಕ್ಕಿಂತ ಹೆಚ್ಚಿನ ದಿನಗಳು ಆಗಾಗಲೇ ಸಂದುಹೋಗಿದ್ದವು. ಹಾಗಾಗಿ ಮುಂದಿನ ಶುಭದಿನ ಪಾಕಿಸ್ತಾನೀಯರು ಒಳನುಗ್ಗಿದ ೧೬೯ನೇ ದಿನ ಎಂದು ನಿರ್ಧರಿಸಲಾಯಿತು. ಸಮಿತಿಯ ಒಂದು ಸಣ್ಣ ಗುಂಪು ಮಾತ್ರ ಹದಿಮೂರು ತಿಂಗಳ ನಂತರವೇ ಪ್ರಶಸ್ತವೆಂದು ಅಭಿಪ್ರಾಯಪಟ್ಟಿತು. ಆದರೆ ಪಾಕಿಸ್ತಾನದ ಸೈನ್ಯಕ್ಕಾಗಲಿ, ಐಎಸ್‌ಐಗಾಗಲೀ, ಹದಿಮೂರರ ಮಹತ್ವದ ಅರಿವಿರಲಿಲ್ಲ. ವೈರಿಗಳು ಒಳನುಗ್ಗಿರುವುದು ಇಡೀ ಲೋಕಕ್ಕೇ ತಿಳಿದುಹೋಯಿತು. ಹಾಗಾಗಿ ಹದಿಮೂರರ ಮಹತ್ವ ಕಾರ್ಗಿಲ್ ಯುದ್ಧದಲ್ಲಿ ಪ್ರಕಟವಾಗಲಿಲ್ಲ. ಒಂದು ವೇಳೆ ಹದಿಮೂರು ತಿಂಗಳ ನಂತರ ಪ್ರತಿದಾಳಿ ಮಾಡಿದ್ದರೆ, ಕಳೆದ ಕಾರ್ಗಿಲ್ ಯುದ್ಧದಲ್ಲಿ ವಿಮೋಚನೆಗೊಳಿಸಿದ್ದಕ್ಕಿಂತ ನೂರಾರು ಪಟ್ಟು ಹೆಚ್ಚಿನಷ್ಟು ಭಾರತದ ಪವಿತ್ರ ನೆಲವನ್ನು ವಿದೇಶಿ ಆಕ್ರಮಣದಿಂದ ಮುಕ್ತಿಗೊಳಿಸಿದ ಕೀರ್ತಿ ನಾಯಕರುಗಳಿಗೆ ಲಭಿಸುತ್ತಿತ್ತು. ನಮ್ಮ ಸೈನ್ಯದ ಇನ್ನೂ ಸಹಸ್ರಾರು ಮಂದಿಗೆ ಶೌರ್ಯ ಸಾಹಸ ಪ್ರದರ್ಶಿಸಲು ಅವಕಾಶ ಸಿಗುತ್ತಿತ್ತು. ಆದರೆ ಪಾಕಿಗಳ ಅಜಾಗರೂಕತೆಯಿಂದ ವಿರೋಧ ಪಕ್ಷಗಳ 'ದೇಶದ್ರೋಹ'ದಿಂದ, ಅದು ಸಾಧ್ಯವಾಗಲಿಲ್ಲ.' ವಿಷಯಾಂತರ ಮಾಡುವ ಉದ್ದೇಶದಿಂದ ನಾನು ಬೇರೆಯೇ ಪ್ರಶ್ನೆಯೊಂದನ್ನು ಕೇಳಿದೆ.

'ಈ ನಮ್ಮ ದೇಶದ ರಾಜಕೀಯ ಇತಿಹಾಸವನ್ನು ಬರಲಿರುವ ಮಿಲೆನ್ನಿಯಂನಲ್ಲಿ

(೧೭ನೇ ಪುಟ ನೋಡಿ)

# ಖಾಸಗೀಕರಣವೇ ಮದ್ದು

'ಅಕವ ಮತ್ತು ಬೋರ್ಲಿ ಇಂಟರ್‌ನ್ಯಾಷನಲ್' ಸಂಸ್ಥೆಯ ಅಧ್ಯಕ್ಷ ನನ್ನ ಮಿತ್ರ ಬೋರ್ಲಿ ಉರುಫ್ ಮೊದ್ದನ ಕುರಿತು ನಿಮಗೆ ಹಿಂದೊಮ್ಮೆ ಹೇಳಿದ ನೆನಪು. ಅದರ ಪುರಾಣ ಮತ್ತೆ ಬೇಡ. ಆತನಿಂದ ನನಗೆ ಫೋನ್ ಕರೆ ಬಂತೆಂದರೆ, ಮತ್ತೇನೋ ಹೊಸ ಆಪತ್ತು ಕಾದಿದೆ ಎಂಬ ಹೆದರಿಕೆ ಶುರುವಾಗುತ್ತದೆ. ಬೋರ್ಲಿಯನ್ನು ಸಹಿಸಿಕೊಳ್ಳಬೇಕಾದ ಇಕ್ಕಟ್ಟಿನ ಪರಿಸ್ಥಿತಿ. ಕಾರಣ, ನಾವಿಬ್ಬರೂ ಗೊಂದಲಪುರದಲ್ಲಿ ಶಾಲೆಗೆ ಮಣ್ಣು ಹೊತ್ತವರು. ಈಗ ಗುಲ್ಲೂರು ನಿವಾಸಿಗಳು. ನಾನು ಸ್ವಲ್ಪ ಹಿಂದುಳಿದಿರುವ ಬಗ್ಗೆ ನನ್ನ ಮೇಲೆ ಜೋರುಮಾಡುವಷ್ಟು ಸಲುಗೆ-ಬೋರ್ಲಿಗೆ. ಒಮ್ಮೊಮ್ಮೆ ಅನಿವಾರ್ಯವಾಗಿ ಆತನ ಬೋರಿಗೆ ಕಿವಿಗೊಡಬೇಕು.

'ಅಕವ ಮತ್ತು ಬೋರ್ಲಿ'-ಮಾಡದ ಕೆಲಸವಿಲ್ಲ. ಇದೀಗ ಮುಗಿದ ಚುನಾವಣೆಯ ಫಲಿತಾಂಶವನ್ನು, ಚುನಾವಣೆ ಪ್ರಾರಂಭದಲ್ಲೇ ಪ್ರಕಟಿಸಿದ ಹೆಮ್ಮೆ ಅದರದು. ಹಾಗೆ ಮಾಡಬಹುದೆ? ಅದೆಷ್ಟು ಕರಾರುವಾಕ್ಕಾಗಿತ್ತು- ಎಂದೆಲ್ಲ ಕೇಳಬೇಡಿ. ನಮ್ಮ ಬೋರ್ಲಿ ಸರಕಾರಕ್ಕೆ ಸಲಹೆಗಾರನೂ ಆಗಿದ್ದಾನೆ. ಕಾವೇರಿ ವಿವಾದದಿಂದ, ರಾಜಧಾನಿಯ ವಾಸ್ತುವಿನವರೆಗೆ ಸರಕಾರ ಆತನನ್ನು ಕೇಳದೇ ಏನೂ ಮಾಡುವುದಿಲ್ಲವಂತೆ. ಒಮ್ಮೆ ಗುಲ್ಲೂರು ಸರಕಾರಿ ಕಚೇರಿಗಳಲ್ಲಿ ಹಬ್ಬಿದ್ದ ಎ.ಡಿ.ಎಕ್ಸ್. ವೈರಸ್ ಪತ್ತೆ ಹಚ್ಚಿದವನೇ ನಮ್ಮ ಬೋರ್ಲಿ.

ಬೋರ್ಲಿಯ ಭೇಟಿಯಿಂದ ನನಗೆ ದೊರಕುವ ಅಲ್ಪ ತೃಪ್ತಿಯೆಂದರೆ, ನನ್ನ ಹಿಂದುಳಿಕೆಯ ಬಗ್ಗೆ ಆತ ನನ್ನನ್ನು ಹಂಗಿಸುತ್ತಾನೆ, ನಾನು ಆತನನ್ನು 'ಮೊದ್ದ' ಎಂದು ಬಾಲ್ಯದ ಹೆಸರಿನಿಂದ ಕರೆಯುತ್ತೇನೆ! ಆಗ ಅದನ್ನು ಆತ ಕೇರ್ ಮಾಡುವುದಿಲ್ಲ. ಮನಸ್ಸು ಬಿಚ್ಚಿ ಲೋಕಾಭಿರಾಮ ಮಾಡುತ್ತೇವೆ. ಬಿಟ್ಟಿ 'ಬೀರನ ರಗಳೆ', ಪ್ರಸಾದಕ್ಕೆಲ್ಲ ಅವಕಾಶವುಂಟು! ನಮ್ಮ ಮಾತಿನಲ್ಲಿ ಧಾರಾಳ ಮಣ್ಣಿನ ವಾಸನೆಯ ಘಾಟು.

ಎಂದಿನಂತೆ, ತನ್ನ ಮಾತಿನ ಬಾಣಬಿಟ್ಟ. ''ಅಲ್ಲ ಕಣ್ಲಾ ಗುರು. ನೀನಿನ್ನೂ ಯಾವ್ ಯುಗ್ದಲ್ಲಿದ್ದಿ? ಈಗ್ಲಾರಾ ಒಂದು ಮೊಬೈಲ್ ಫೋನ್ ತಗೊಳ್ಳಕ್ಕೆ ನಿಂಗೇನ್ ಧಾಡಿ?''

ಬೋರ್ಲಿ ಸ್ಯಾಟಲೈಟ್ ಫೋನಿಟ್ಟುಕೊಂಡಿದ್ದಾನೆ. ನಾವೆಲ್ಲರೂ ತಲೆಗೊಂದು ಫೋನಿಟ್ಟುಕೊಂಡು ಯಾವ ಬೆಟ್ಟ ಕಡಿಯಬೇಕಾಗಿದೆ? ಎನ್ನುವವ ನಾನು.

ಇಡೀ ಭಾರತವನ್ನು ಖಾಸಗೀಕರಿಸಬೇಕು. ಹಾಗಾದರೇ ನಮ್ಮ ಉದ್ಧಾರ ಎಂದು ಕನಸುವವ ಬೋರ್ಲಿ. ನಮ್ಮ ಎಲ್ಲ ಸಮಸ್ಯೆಗೂ ಇದೇ ಪರಿಹಾರ ಎಂದು ವಾದಿಸುವ ಕೆಟ್ಟ ಚಾಳಿಯವ.

''ಇನ್ನು ಒಂದೇ ತಿಂಗ್ಳಲ್ಲಿ ನಾವು ಹೊಸ




ಶತಮಾನ್ದಲ್ಲಿರ್ತೀವಿ. ಹೆಂಗಂತಿ? ಬೇರೆ ಕಂಟ್ರಿಯವರು ಜೆಟ್ ಪ್ಲೇನ್ನಲ್ಹೋಗ್ತಾರೆ, ನಾವು ಸೈಕಲ್ ಮೇಲ್ಹೋಗ್ತೀವಿ ಅಷ್ಟೆ. ನಿಂಗೆ ನಾಚ್ಕೆ ಆಗ್ಬೇಕು. ಲೋ ಗುರು, ನನ್ ಮಾತ್ನ ಬೇಕಂದ್ರೆ ಬರ್ದಿಟ್ಕೊ. ನಮ್ ಸ್ಕೂಲ್‌ಗಳು, ಆಸ್ಪತ್ರೆ, ರಸ್ತೆ, ರೈಲು ವಿಮಾನ ಸಾರಿಗೆ ಯಾವುದ್ರಲ್ಲೂ ಸರಕಾರಿ ಸ್ವಾಮ್ಯ ಅಂತ ಇರ್ಲೇಬಾರ್ದು. ಎಲ್ಲ ಖಾಸಗೀಕರಣ ಆಗ್ಬೇಕು. ಆಗ ಎಲ್ಲ ಎಂಗೆ ಠಾಕ್‌ಠೀಕಾಗಿ ನಡೀತ್ತೆ ಅಂತ ನೋಡು. ಕಾಂಪಿಟಿಷನ್ ಇಲ್ದೆ ಇದ್ರೆ ನಿನ್ ಎಫಿಷಿಯನ್ಸಿ ಎಲ್ಲಿಂದ ಬರುತ್ತೆ ನಿಂಗೆ? ನಮ್ ದೇಶ ಯಾಕೆ ಮುಂದಕ್ಕೋಗ್ತಾ ಇಲ್ಲ ಅಂತ ಯೋಚ್ನೆ ಮಾಡ್ಬೇಕು. ತಲೆ ಬೇಕು ಕಣ್ಲಾ ತಲೆ!" -ಎಂದು ಗ್ಲಾಸು ಕುಟಿಗಿರಿಸಿದ.

''ಎಲ್ಲಕ್ಕೂ ಖಾಸಗೀಕರಣಾನೆ ಮದ್ದು ಅಂತ ಎಂಗೇಳ್ತಿ?''

''ಆಗ ಸರಕಾರಕ್ಕೆ ಕೆಲ್ಸಾನೆ ಇರೊಲ್ಲ. ನಿನ್ ಶಿಕ್ಷಣ ತಗೋ, ಪೊಲೀಸ್ ಇಲಾಖೆ ತಗೋ. ಟೆಂಡರ್ ಕರಿ. ಯಾರು ಜಾಸ್ತಿ ಬಿಡ್ ಮಾಡ್ತಾರೆ ಒಪ್ಸು ಅವರ್ಗೆ. ತಲೆ ನೋವೇ ಇರಲ್ಲ!''

''ಲೋ ಮೊದ್ದ ನಿನ್ ಸಲಹೆ ಸ್ವಲ್ಪ ಮನೆಮುರುಕತನದ್ದು ಅನ್ಸೊಲ್ವ?''

''ಈ ಶೋಂಭೇರಿಗಳು, ಅದಕ್ಕರಿಗಿಂತ ಅದೇನ್ ಕಳಪೆ? ಎಂಗೆ ಅಂತ ಹೇಳ್ತೀನಿ ಕೇಳ್ಕೋ. ಪೊಲೀಸ್ ಇಲಾಖೆನೇ ತಗೋ. ಬೇಕಾದವ್ರು ಟೆಂಡರ್ ಹಾಕ್ತಾರೆ. ಇಂತಿಂಥಾ ಹುದ್ದೆಗೆ ಇಷ್ಟು ಅಂತ ನಿಗ್ದಿಮಾಡು. ನಾಲ್ಕೈದು ಕಂಪೆನಿಗಳಿಗೆ ಕಾಂಟ್ರಾಕ್ಟ್ ಕೊಟ್ರೆ ಕಾಂಪಿಟಿಷನ್ ಚೆನ್ನಾಗಿರುತ್ತೆ. ನಿನ್ನ ಎಫಿಷಿಯನ್ಸಿ ತಾನಾಗೇ ಬರುತ್ತೆ. ಕಳ್ಳನ ಹೆಜ್ಜೆ ಕಳ್ಳನಿಗೇ ಗೊತ್ತು ಅನ್ನೋಹಂಗೆ, ಅನುಭವಿ ಕಳ್ಳರಿಗೆ ಹುದ್ದೆ ಕೊಡಬಹುದು. ರಾತ್ರಿ ಚಟುವಟಿಕೆಗಾರರ, ಜೂಜುಕೋರರ, ಕಾಳಸಂತೆಯವರ, ಸ್ಥಳೀಯ ರೌಡಿಪಡೆಯ ಸಹಕಾರ ಪಡೆದು ಇಲಾಖೆ ದಕ್ಷತೇನ್ನ ಹೆಚ್ಚಿಸ್ಕೋಬಹುದು. ಇದ್ರಿಂದಾಗು ಲಾಭ ಏನಪ್ಪಾಂದ್ರೆ, ರೌಡಿ ದಳಗಳ ಮಧ್ಯೆ ಒಪ್ಪಂದ ಆಗುತ್ತೆ. ಅವರ ಉಪದ್ರವಾನು ನಿಲ್ಲುತ್ತೆ. ಯಾಕೆಂತೀಯಾ? ಅವ್ರೆಲ್ಲ ರೆಸ್ಪಾನ್ಸಿಬಲ್ ನಾಗರಿಕರಾಗಿರುತ್ತಾರೆ....''

ಬೋರ್ಲಿಯ ಬತ್ತಳಿಕೆಯಲ್ಲಿ ಇಷ್ಟು ಸರಳವಾದ, ಅಷ್ಟೇ ಅಪಾಯಕಾರಿಯಾದ ಅಸ್ತ್ರಗಳಿರುವ ಬಗ್ಗೆ ನನಗೆ ಸುಳಿವೇ ಸಿಕ್ಕಿರಲಿಲ್ಲ. ಇನ್ನು ನಮ್ಮ ನ್ಯಾಯಾಂಗ, ಆಡಳಿತಾಂಗಗಳನ್ನು ಖಾಸಗೀಕರಿಸುವ ಬಗ್ಗೆ ಈತನ ಸಲಹೆ ಇನ್ನೆಷ್ಟು ಭಯಂಕರವಾಗಿರುತ್ತದೋ ಎನ್ನಿಸತೊಡಗಿತು. ವಿಧಾನಸೌಧ ಖಾಸಗೀಕರಿಸುವಂತೆ ಈತ ಸಲಹೆ ಮಾಡಿದರೂ ಆಶ್ಚರ್ಯವಿಲ್ಲ.

''ಲೋ ಮೊದ್ದ, ನಿಂದು ಭಾರೀ ಡೇಂಜರಸ್ ಸಲಹೆ. ಮುಂದೆ ಯಾವುದಾದರೂ ಕೆಟ್ಟ ಸರ್ಕಾರ ಬಂದು, ನಿನ್ನ ಸಲಹೇನ ಅಂಗೀಕರಿಸಿ ಕಾರ್ಯರೂಪಕ್ಕೆ ತರಲು ಪ್ರಯತ್ನಿಸುತ್ತೆ ಅಂತ ಇಟ್ಕೋ, ಅಂದೇ ನಮ್ಮೆಲ್ಲರ ದುರದೃಷ್ಟ ದಿನಗಳು ಪ್ರಾರಂಭ.....''

ಬೋರ್ಲಿ ಕೆಂಗಣ್ಣಿನಿಂದ ನನ್ನನ್ನು ಸುಟ್ಟುಹಾಕುವಂತೆ ನೋಡಿದ.

''ಇನ್ನೊಂದಿನ ನನ್ನನ್ನ ಇಂಥಾ ರಗಳೆಗೆ ಕರೀಬೇಡ'' ಎನ್ನುತ್ತ ಮೇಲೆದ್ದೆ. ಆತ ಮತ್ತೆಂದಾದರೂ ಇನ್ನೆಂದಾದರೂ ವಿಧಾಯಕ ಸಲಹೆ ನೀಡಲು ನನಗೆ ಫೋನಾಯಿಸುತ್ತಾನೆ. ಕೆಲವೊಮ್ಮೆ ತಲೆ ಸರಿಯಿಲ್ಲದಾಗ ಆತ ಹೀಗೆಲ್ಲ ಸಲಹೆ ಮಾಡುತ್ತಾನೆಂದು ಕ್ಷಮಿಸಬಹುದಷ್ಟೆ.

- ಗುರು

**ಕ್ರಾಂತಿಯ ಕಿಡಿ**

*ಬೆಂಕಿಗೆ ಹುಲ್ಲುಕಡ್ಡಿ*
*ಈಡಲ್ಲ!*
*ಆದರೆ, ಕ್ರಾಂತಿಯ ಕಿಡಿ*
*ಹೊತ್ತುವುದು*
*ಹುಲ್ಲುಕಡ್ಡಿಯಲಿ!*

*- ಜಿ. ಎಸ್. ವಡಗಾಂವಿ, ರಬಕವಿ - 587 314*

# ಯೇಸು ಕ್ರಿಸ್ತ-ಕ್ರಾಂತಿಕಾರಕ ಪುರುಷ

*ರೋಮಿನಿಂದ ಪೋಪ್ ಭಾರತಕ್ಕೆ ಭೇಟಿಕೊಟ್ಟ ಸಂದರ್ಭದಲ್ಲಿ ಮತಧರ್ಮದ ಕಟ್ಟಾ ಪೂರ್ವಗ್ರಹಗಳು ಪ್ರಕಟಗೊಂಡವು. ಭಗವಂತನ ಅನುಗ್ರಹ-ಕ್ಷಮೆ ಪಡೆಯಲು ಪೋಪ್ ಒಂದು ರೀತಿಯಲ್ಲಿ ದೂರವಾಣಿ ಕೇಂದ್ರವಿದ್ದಂತೆ. ಆತನ ಮುಖಾಂತರವೇ ಸಂಪರ್ಕ ಸಾಧಿಸಬೇಕು. ಯೇಸುವಿನ ಪ್ರತಿಕೃತಿ ಆತ ಎಂಬಂತೆ ವ್ಯವಹರಿಸುವುದುಂಟು. ನಿಜಕ್ಕೂ ಯೇಸು ಎಂಥವನು? ಅವನ ವಿಶಿಷ್ಟ ಹೆಗ್ಗಳಿಕೆ ಯಾವುದು? ಅದಕ್ಕೆಲ್ಲಾ ಪುರಾವೆಯೇನಾದರೂ ಉಂಟೆ? ಅದರ ಜಿಜ್ಞಾಸೆ ಇಲ್ಲಿ ನಡೆದಿದೆ.*

**ಜಿ. ರಾಮಕೃಷ್ಣ**

ಹುಟ್ಟಿನಿಂದಲೇ ಸ್ಥಾನಮಾನಗಳು ತೀರ್ಮಾನವಾಗುತ್ತದೆಂಬ ನೆಲೆಯಿಂದ ಸರ್ವಸ್ವವನ್ನೂ ನೋಡುವುದು ಹಿಂದು ಧರ್ಮದ ಅನುಯಾಯಿಗಳಲ್ಲಿ ಆಗಿಬಂದಿರುವ ಪದ್ಧತಿ. ಅವರ ಪ್ರಕಾರ ಯಾವುದೂ ಆಕಸ್ಮಿಕವಲ್ಲ. ಎಲ್ಲ ದೈವನಿಯಾಮಕ. ಆದ್ದರಿಂದ ಯಾವ ಶ್ರೇಷ್ಠ ಅಥವಾ ಕನಿಷ್ಠ ಸ್ಥಾನಕ್ಕೂ ಮನುಷ್ಯ ಮತ್ತು ಸಮಾಜ ಕಾರಣವಲ್ಲ. ದೇವರ ಕಲ್ಪನೆಗೆ ಎದುರಾಗಿ ಹುಲುಮಾನವ ಏತರವನು ! ಪ್ರಜ್ಞಾಪೂರ್ವಕ ಆಯ್ಕೆಗಿಂತ ಹುಟ್ಟು ಹೆಚ್ಚಿನ ಪ್ರಭಾವ ಬೀರುವುದು ಅಸಹಜವೆನಿಸಿದರೂ ಅದನ್ನು ಪ್ರಮುಖವಾಗಿಸುವ ಪ್ರವೃತ್ತಿ ನಮ್ಮಲ್ಲಿ ಬಹಳ ಕಾಲದಿಂದ ನಡೆದುಬಂದಿದೆ. ಹಿಂದು ಧರ್ಮ ಅತಿ ಶ್ರೇಷ್ಠವಾದುದು, ಅನಾದಿಯಾದುದು, ಅದನ್ನು ಯಾರೂ ಅಳಿಸಿಹಾಕಲಾರರು, ಎಂದು ಹೇಳುತ್ತಲೇ ಆ ಧರ್ಮಕ್ಕೆ ಎಲ್ಲಿಂದಲೋ ಆಘಾತ ಉಂಟಾಗುತ್ತದೆಂಬ ಭಯ ಕೆಲವರನ್ನು ಪೀಡಿಸುತ್ತದೆ. ಅವರಿಗೆ ಮತಾಂತರ ಒಂದು ದೊಡ್ಡ ಪಿಡುಗಾಗಿ ಕಾಣುವುದು ಈ ಕಾರಣದಿಂದ. 'ಯಥೇಚ್ಛಸಿ ತಥಾ ಕುರು' (ನಿನಗೆ ಯಾವುದು ಸರಿಕಾಣುತ್ತದೋ ಅದನ್ನು ಮಾಡು) ಎಂಬ ಗೀತಾವಾಕ್ಯವನ್ನು ಹೆಮ್ಮೆಯಿಂದ ಉದ್ಧರಿಸುವ ಜನರೇ ಸ್ವತಂತ್ರ ಆಯ್ಕೆಯನ್ನು ದೂಷಿಸುತ್ತಾರೆ, ಅದು ಅನಾಹುತಕ್ಕೆ ದಾರಿಯಾಗುತ್ತದೆಂದು ಕಂಪಿಸುತ್ತಾರೆ. ಅಲ್ಲದೆ, ಬೇರೆ ಮತಕ್ಕೆ ಹೋಗುವ ವ್ಯಕ್ತಿಗೆ ಪ್ರೇರಣೆಗಳು ಎಂಥವು ಎಂಬ ಪ್ರಶ್ನೆ ಅವರಿಗೆ ರುಚಿಸುವುದಿಲ್ಲ.

ಇವರ ಕತೆ ಹೀಗಾದರೆ ಪೋಪನ ಕತೆ ಇದಕ್ಕಿಂತ ಹೆಚ್ಚು ಶ್ರೇಯಸ್ಕರವಾಗೇನೂ ಇಲ್ಲ. ಇತಿಹಾಸದಲ್ಲಿ ಪೋಪುಗಳ ಮೂಗಿನಡಿ ಘಟಿಸಿರುವ ದಾರುಣ ಘಟನೆಗಳ ಪಟ್ಟಿ ಮಾಡಿದರೆ ಅವರ ಪಾಪಕೂಪಗಳು ಎಷ್ಟು ತುಂಬಿವೆ ಮತ್ತು ಎಷ್ಟು ಕಪ್ಪಾಗಿವೆ ಎಂಬುದು ತಿಳಿಯುತ್ತದೆ. ಹದಿನೇಳರ ಹರೆಯದ ಜೋನಳನ್ನು ಹಾಗೂ ಪಾದ್ರಿಯಾಗಿದ್ದುಕೊಂಡೇ ಮತಧರ್ಮದ ಮೌಢ್ಯವನ್ನು ಪ್ರಶ್ನಿಸಿದ ಬ್ರೂನೋನನ್ನು ಜೀವಂತ ಸುಟ್ಟುಹಾಕಿದ ಅಪಕೀರ್ತಿ ಪೋಪನ ಸಾಮ್ರಾಜ್ಯಕ್ಕೆ ಯಾವಾಗಲೂ ಅಂಟಿಕೊಂಡಿರುತ್ತದೆ. ರೈತರ ಪರವಾಗಿ ಹೋರಾಡಿದ ಪಾದ್ರಿ ಥಾಮಸ್ ಮುನ್ಜರ್‌ನನ್ನು ಕೊಂದ ರಣಕೈಗಳು ಚರ್ಚಿನವು.

ಆ ಮಾರ್ಗವನ್ನು ಚಾಚೂ ತಪ್ಪದೆ ಪಾಲಿಸುತ್ತಿರುವ ಪೋಪ್ ಇಂದಿನ ಪೋಪ್ ಪಾಲ್. ಚಿಲಿಯಲ್ಲಿ ಪಿನೋಶೆಯು ಪೈಶಾಚಿಕ ಹತ್ಯೆಗಳನ್ನು ಎಸಗಿದಾಗ ಈತನ ಗಂಟಲು ಮುಚ್ಚಿಹೋಗಿತ್ತು; ಈಗ ಸ್ಪೇನಿನ ಸರ್ಕಾರ ಆ ದುರುಳನನ್ನು ವಿಚಾರಣೆಗೆ ಗುರಿಮಾಡಬೇಕೆಂದು ಆಗ್ರಹಪಡಿಸಿದರೆ ಪೋಪನ ಅಂತಃಕರಣ ಕರಗುತ್ತದೆ. ಮಾನವೀಯ ದೃಷ್ಟಿಯಿಂದ ಪಿನೋಶೆಯನ್ನು ಬಿಟ್ಟುಬಿಡಿ, ಎಂದು ಉಪದೇಶಿಸುತ್ತಾರೆ ಈ ದೈವೀಪುರುಷರು. ಇಂತಹ ಹತ್ತಾರು ಬೇರೆ ಉದಾಹರಣೆಗಳನ್ನು ನೀಡಬಹುದು, ಆದರೆ ಅಗತ್ಯವಿಲ್ಲ. ಮನುಷ್ಯರಲ್ಲಿ ಕೆಲವರನ್ನು ಅಸ್ಪೃಶ್ಯರು, ಕೆಳಜಾತಿಯವರು, ಎಂದು ವರ್ಗೀಕರಿಸಿದ ಹಿಂದು ಧರ್ಮದ ಕ್ರೌರ್ಯ ಮತ್ತು ಪೋಪ್ ಸಾಮ್ರಾಜ್ಯದ ದೌರ್ಜನ್ಯ, ಒಂದನ್ನೊಂದು ಮೀರಿಸುವಂತಿವೆ. ಚರ್ಚಿನ ದುರ್ನಡತೆಗಳನ್ನು ಖಂಡಿಸಿದ ಮಿಲ್ಟನ್ ಆಗಲಿ, ಟಾಲ್‌ಸ್ಟಾಯ್ ಆಗಲಿ ಕ್ರೈಸ್ತಧರ್ಮದ ಅಧಿಕೃತ ವಕ್ತಾರರಿಗೆ ಹಿಡಿಸಲಿಲ್ಲ. ಬೊಜ್ಜು ಬೆಳೆಸಿಕೊಂಡು ಸುಖಲೋಲುಪರಾಗಿ ಉನ್ಮತ್ತರಾಗಿರುವ ಈ ಪಾದ್ರಿಗಳು ಜನರಿಗೆ ಹಾದಿ ತೋರಿಸುವ ಸಾಮರ್ಥ್ಯ ಎಲ್ಲಿ ಹೊಂದಿದ್ದಾರೆ, ಎಂದು ಮಿಲ್ಟನ್ ಉಗ್ರವಾಗಿ ನುಡಿದಿದ್ದ. ಹಿಂದು ಧರ್ಮದ ಜಗದ್ಗುರುಗಳಿಗೂ ಅನ್ವಯವಾಗುವ ಮಾತು ಇದು.

> **ಕಲೆಯ ಬಗ್ಗೆ ನಿಮ್ಮ ತಿಳುವಳಿಕೆ ಪರೀಕ್ಷಿಸಿರಿ**
>
> ೧ ಭಾರತೀಯ ದೇವಾಧಿದೇವತೆಗಳ, ಪೌರಾಣಿಕ ಚಿತ್ರಗಳನ್ನು ನಿರ್ಮಿಸಿದ ರವಿವರ್ಮ ಅನುಸರಿಸಿದ ಶೈಲಿ.
> ಅ) ಭಾರತೀಯ ಆ) ಕೇರಳ ಪ್ರಾಂತೀಯ ಇ) ಪಾಶ್ಚಿಮಾತ್ಯ
>
> ೨ ರವಿವರ್ಮನ ಶೈಲಿ ಮತ್ತು ಧಾಟಿಯನ್ನು ಮುಂದೆ ಕಾಣಿಸಿರುವ ಮೂವರು ಕಲಾವಿದರಲ್ಲಿ ಯಾರಿಬ್ಬರು ಅನುಸರಿಸಿದ್ದಾರೆ
> ಅ) ಹೆಬ್ಬಾರ್ ಆ) ಎಸ್. ಎನ್. ಪಂಡಿತ್ ಇ) ಎಂ. ಟಿ. ವಿ. ಆಚಾರ್ಯ
>
> ೩ ರೇಖಾ ಚಿತ್ರಗಳ ರಚನೆಯಲ್ಲಿ ಎತ್ತಿದ ಕೈ ಎಂದು ಹೆಸರು ಪಡೆದು, ಅವರ ಕೃತಿಗಳಿಗೆ ''ಸಿಂಗಿಂಗ್ ಲೈನ್ಸ್'' ಎಂಬ ಅನ್ವರ್ಥ ನಾಮ ಪಡೆದ ಕಲಾವಿದ
> ಅ) ಕೆ. ಕೆ. ಹೆಬ್ಬಾರ್ ಆ) ಪೀಟರ್ ಲೂಯಿಸ್ ಇ ) ಸಂತೋಷ್
>
> ೪ ಪ್ರಕೃತಿ ದೃಶ್ಯಗಳ ರಚನೆಯಲ್ಲಿ ಖ್ಯಾತಿಗಳಿಸಿ ಕರ್ನಾಟಕ ಲಲಿತ ಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದು ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿಗಳಿಸಿದ ಕಲಾವಿದ
> ಅ) ಪಿ. ಆರ್. ತಿಪ್ಪೇಸ್ವಾಮಿ ಆ) ಸಿ. ಚಂದ್ರಶೇಖರ ಇ) ಸೋಮಶೇಖರ ಸಾಲಿ
>
> ೫ ಬೆಂಗಳೂರಿನಲ್ಲಿ ಬಹಳ ಹಳೆಯದಾದ ಕಲಾ ಶಿಕ್ಷಣ ಶಾಲೆ ಕಲಾಮಂದಿರವನ್ನು ಸ್ಥಾಪಿಸಿದವರು
> ಅ) ಅ. ನ. ಕೃಷ್ಣರಾಯರು ಆ) ಹೆಚ್. ಎಸ್. ಇನಾಮತಿಯವರು ಇ) ಅ. ನ. ಸುಬ್ಬರಾಯರು
>
> ಉತ್ತರಗಳು: ೧) ಇ ೨)ಆ,ಇ ೩) ಅ ೪) ಅ ೫) ಇ
>
> -ಯು. ಎಸ್. ವೆಂಕಟರಾಮನ್

### ಐತಿಹಾಸಿಕ ಯೇಸು

ಪೋಪನ ಸಾಮ್ರಾಜ್ಯವನ್ನು 'ಪುಣ್ಯ ರಾಜ್ಯ' (ಹೋಲಿ ಸೀ) ಎಂದು ಕರೆಯುವ ರೂಢಿಯಿದೆ. ಯೇಸುವಿನ ಪ್ರಾತಿನಿಧಿಕ ಸಂಸ್ಥೆಯೆಂಬ ಕಾರಣಕ್ಕೆ ಆ ಹೆಸರು ಬಂದಿದೆ. ಚರಿತ್ರೆಯ ಪುಟಗಳಲ್ಲಿ ಶೋಭಿಸುವ ಯೇಸುವಿಗೂ ಪೋಪನ ಸಾಮ್ರಾಜ್ಯದಲ್ಲಿ ಪೂಜಿಸಲಾಗುವ ಯೇಸುವಿಗೂ ವ್ಯತ್ಯಾಸವಿದೆ. ಚರಿತ್ರೆಯಲ್ಲಿ ಅವನು ದೀನದಲಿತರ ಹೋರಾಟಗಳ ಮುಂಚೂಣಿಯಲ್ಲಿದ್ದವನೆಂದು ದೈವತ್ವಕ್ಕೆ ಏರಿಸಲ್ಪಟ್ಟವನು; ಪೋಪನ ಸಾಮ್ರಾಜ್ಯದಲ್ಲಿ ಅವನು ಭಗವಂತನ ಸಂದೇಶ ತಂದವನೆಂದು ಹಿರಿಯ ಪಟ್ಟಕ್ಕೇರಿಸಲ್ಪಟ್ಟಿರುವವನು. (ಅವನು ಕೆಲಕಾಲ ಕಾಶ್ಮೀರಕ್ಕೆ ಬಂದು ತಂಗಿದ್ದುದರಿಂದ ಶ್ರೇಷ್ಠ ಧಾರ್ಮಿಕ ಗುರುವಾಗಲು ಸಾಧ್ಯವಾಯಿತೆಂದು ಹೇಳುವ ಕೆಲವು ಹಿಂದು ಧರ್ಮದ ರಂಜಕ ಇತಿಹಾಸಕಾರರಿಗೇನೂ ಕಡಿಮೆಯಿಲ್ಲ. ಆದರೆ ಅದನ್ನು ಅವರು ಸಹ ಗಂಭೀರವಾಗಿ ತೆಗೆದುಕೊಳ್ಳುವಷ್ಟು ಮೂರ್ಖರಾಗಿರುವುದಿಲ್ಲವೆನಿಸುತ್ತದೆ). ಯೇಸುವು ತಾನೇನಾಗಬೇಕೆಂದು ಬಯಸಿದ್ದುದಕ್ಕಿಂತಲೂ ಮಾನವ ಸಮಾಜ ಏನಾಗಬೇಕೆಂದು ತೀವ್ರವಾಗಿ ಭಾವಿಸಿದ್ದು ಹೆಚ್ಚು ಮುಖ್ಯ. ಅವನು ಶಿಲುಬೆಗೇರಿ ಹುತಾತ್ಮನಾದ್ದು ಅದಕ್ಕಾಗಿ.

ಯೇಸುವಿನ ಕನಸನ್ನು ತಮ್ಮದಾಗಿಸಿಕೊಂಡ ಮಹಾತ್ಮರು ಅನೇಕ ಕಾಲಘಟ್ಟಗಳಲ್ಲಿ ಪೋಪನ ಸಾಮ್ರಾಜ್ಯದ ಕೆಂಗಣ್ಣಿಗೆ ಬಿದ್ದು ಭಸ್ಮವಾಗಿದ್ದಾರೆ. ಅವರು ಪರಿಭಾವಿಸಿದ ಸಾಮಾಜಿಕ ಆದರ್ಶಗಳು ಭಗವಂತನ ಸಾಮ್ರಾಜ್ಯವೆಂಬುದರ ಸ್ತುತಿ ಮಾಡುವ ಚರ್ಚ್ ಎಂಬ ಮಹಾಸಂಸ್ಥೆಗೆ ಎಷ್ಟೋ ಬಾರಿ ನಡುಕ ಹುಟ್ಟಿಸಿವೆ. ಸಾಮಾನ್ಯವಾಗಿ ಎಲ್ಲ ದೇವದೂತರೂ ಭಗವಂತನ ಸಾಮ್ರಾಜ್ಯವು ಭವಿಷ್ಯದಲ್ಲಿ ನಿರ್ಮಾಣವಾಗಬೇಕಾದ್ದೆಂದು

ಬಗೆಯುವವರೇ ಹೊರತು ಈಗಾಗಲೆ ಪೋಪನ ನೇತೃತ್ವದಲ್ಲಿ ಅಸ್ತಿತ್ವಕ್ಕೆ ಬಂದಿದೆಯೆಂದು ಭ್ರಮಿಸುವುದಿಲ್ಲ. ಮೊದಲಿಗೆ 'ಭಗವಂತನ ಸಾಮ್ರಾಜ್ಯ'ದ ಮಾತನ್ನಾಡಿದವರಿಗೆ ಅದರ ಭೌಗೋಳಿಕ ವ್ಯಾಪ್ತಿ ಸ್ಪಷ್ಟವಾಗಿತ್ತು. ಅದು ಪ್ಯಾಲಿಸ್ಟೈನ್. ಜನರು ಯಾರೆಂದು ಅವರಿಗೆ ತಿಳಿದಿತ್ತು. ಅಲ್ಲಿನ ಯೆಹೂದ್ಯರೇ ಅವರು. ನಿರೀಕ್ಷಿಸಲಾಗಿದ್ದ ಸಾಮ್ರಾಜ್ಯವು ನೈತಿಕ ತಳಹದಿ ಉಳ್ಳದ್ದು; ಪರಸ್ಪರರನ್ನು ಪ್ರಾಮಾಣಿಕವಾಗಿ, ಸಮಾನತೆಯಿಂದ ಕಾಣುವಂತಹ ಜನಸಮೂಹದ್ದು.

**ಜೂಡಿಯಾ ಪರಂಪರೆ**

ಒಂದು ಕುತೂಹಲದ ಸಂಗತಿಯೆಂದರೆ ಜೂಡಿಯಾ ಪರಂಪರೆಯಲ್ಲಿ ದೇವದೂತರು ಕ್ರಾಂತಿಕಾರಿಗಳು ಮತ್ತು ಪಾದ್ರಿಗಳು ಪ್ರತಿಗಾಮಿಗಳು ದೇವದೂತರು ಅತಿ ಕೆಳವರ್ಗದ, ವಿಶೇಷತಃ ರೈತಾಪಿ ಕುಟುಂಬಗಳ ಜನ. ಯೂರೋಪಿನ ಸಾಂಸ್ಕೃತಿಕ ಇತಿಹಾಸದಲ್ಲಿ ಪ್ರತಿಭಟನೆಯ ಕಾಣಿಕೆ ಇವರದು. ಮನುಷ್ಯರನ್ನು ಆಹುತಿ ಕೊಡುವ ಸಂಪ್ರದಾಯವನ್ನು ನಿಲ್ಲಿಸಿದವರು ಅವರು. ಜಿಹೋವಾ ದೇವತೆಯ ಬಾಯಲ್ಲೇ ಅಮೋಸ್ ಎಂಬ ದೇವದೂತನು ಶೋಷಕರ ಪಾತಕಗಳನ್ನು ಖಂಡಿಸುವ ಮಾತುಗಳನ್ನಾಡಿಸಿದ್ದಾನೆ. ತಮ್ಮ ಗಂಡಂದಿರೊಡನೆ ಮದ್ಯಪಾನ ಮಾಡುತ್ತಾ ಕಾಲ ನೂಕುವ ಸಿರಿವಂತ ಹೆಂಗಸರನ್ನು ದನಗಳೆಂದು ಸಹ ಅವನು ಜರಿದಿದ್ದಾನೆ. ದೇವತೆಗೆಂದು ತಂದ ಹುರಿದ ಮಾಂಸವನ್ನು ತಾವೇ ಬೊಕ್ಕಿಬಿಡುತ್ತಾರೆಂದು ಪೂಜಾರಿಗಳನ್ನು ದೂಷಿಸಿದ್ದಾನೆ. ಈ ಪದ್ಧತಿ ಮುಂದುವರಿಯುತ್ತಿದ್ದಂತೆ, ಯೆಹೂದ್ಯ ಪ್ರಭುತ್ವವು ನುಚ್ಚುನೂರಾಗಿ ರೋಮಿನ ಆಡಳಿತ ಜಾರಿಗೆ ಬಂತು. ಅದೂ ಬೇಗನೆ ಭಗ್ನವಾದೀತೆಂಬ ಆಶಯವನ್ನು ಯೆಹೂದ್ಯರು ಹೊಂದಿದ್ದರು. ಅವರನ್ನು ಅಧೀನದಲ್ಲಿಟ್ಟು ಕೊಳ್ಳುವುದು ರೋಮಿನ ಆಧಿಪತ್ಯಕ್ಕೆ ಸುಲಭವಾಗೇನೂ ಇರಲಿಲ್ಲ. ರೋಮನ್ನರನ್ನು ಬಗ್ಗುಬಡಿಯಲು ಒಬ್ಬ ನೇತಾರನನ್ನು ಕಳಿಸಿಕೊಡಲು ದೇವರು ವಿಳಂಬ ಮಾಡುವುದಿಲ್ಲವೆಂಬ ಆಸೆಯನ್ನವರು ಹೊತ್ತಿದ್ದರು. ಟೈಬೇರಿಯಸ್ ಎಂಬುವನ ಪ್ರಭುತ್ವ ರೋಮಿನಲ್ಲಿ ಜಾರಿಯಲ್ಲಿದ್ದಾಗ ಒಬ್ಬ ಬಡಗಿಯ ಮನೆಯಲ್ಲಿ ಆ ರಕ್ಷಕ ಹುಟ್ಟಬಂದು ತನ್ನ ಜನರನ್ನು ಉದ್ಧಾರ ಮಾಡಲು ಶ್ರಮಿಸಿದ್ದರಿಂದ ಅವನಿಗೆ ಮಾನವ ಕೋಟಿಯ ಉದ್ಧಾರಕನೆಂಬ ಬಿರುದು ಅಂಟಿಕೊಂಡಿತು.

ಈ ಮಗುವಿನ ಕತೆ ಮೋಹಕವಾದ್ದು. ಜನರ ಸಂಕಷ್ಟದ ಸಮಯದಲ್ಲಿ ಅವರಲ್ಲಿದ್ದ ಆಕಾಂಕ್ಷೆಗಳನ್ನೆಲ್ಲಾ ಈ ಮಗುವಿನ ಮೂಲಕ ಭಾವುಕತೆಯಿಂದ ಪೂರೈಸಿಕೊಂಡರು. ಮಗು ಹುಟ್ಟಿದಾಗ ಏನೆಲ್ಲಾ ಸಿರಿ ತೋರಿಬಂತು! ರಾಜರು ಸಹ ಬಂದು ಮಗುವಿಗೆ ತಲೆಬಾಗಿದರು!! ಅವರೂ ತಲೆಬಾಗುವಂತಾಗಲಿ ಎಂಬ ಜನರ ಆಸೆಯು ಕತೆಯಲ್ಲಿ ನಡೆದೇಹೋಯಿತು. ಈ ಮಗುವು ಮುಂದೆ ಪ್ರಭುತ್ವದ ವಿರೋಧಿಯಾಗಿ ಬೆಳೆದದ್ದರಿಂದ ನಂತರದ ಕಾಲದಲ್ಲಿ ಮಗುವಿನ ವೈಭವವನ್ನು ಹುಮ್ಮಸ್ಸಿನಿಂದ ಆಲಂಕಾರಿಕವಾಗಿ ಚಿತ್ರಿಸಲಾಯಿತು. ಅವನ ಜನರನ್ನು ಬಂಧನದಿಂದ ಮುಕ್ತರನ್ನಾಗಿಸಲು ಪಣತೊಟ್ಟು ಹೋರಾಡಿದ ಈ ವೀರ ಮುಂದೆ ದೈವದ ಪಟ್ಟಕ್ಕೇರಿದ.

ರೋಮ್ ಚಕ್ರಾಧಿಪತ್ಯದ ಪ್ರತಿನಿಧಿಯಾಗಿ ಪೋಂಟಿಯಸ್ ಪೈಲೇಟ್ ಪ್ಯಾಲಿಸ್ಟೈನಿನಲ್ಲಿದ್ದ. ಅವನನ್ನು ಕ್ರಿ.ಶ. ೩೬ರಲ್ಲಿ ಹಿಂದಕ್ಕೆ ಕರೆಸಿಕೊಳ್ಳಲಾಯಿತು. ಯೇಸುವಿನ ನೇತೃತ್ವದಲ್ಲಿ ಅವನ ವಿರುದ್ಧ ಬೃಹತ್ತಾದ ಬಂಡಾಯ ನಡೆದದ್ದು ಅದಕ್ಕೆ ಆರು ವರ್ಷ ಮುಂಚೆ. ಇಂತಹ ಒಂದು ಬಂಡಾಯದ ನಾಯಕನನ್ನಾಗಿ ಯೇಸುವನ್ನು ಚಿತ್ರಿಸಿಕೊಳ್ಳುವುದು ಬಹಳ ಜನಕ್ಕೆ ಕಷ್ಟ. ಆದರೆ ಕ್ರೈಸ್ತ ಧರ್ಮದ ಒಡಂಬಡಿಕೆಯಲ್ಲಿ ಇದಕ್ಕೆ ಸಾಕಷ್ಟು ಪುರಾವೆಗಳು ಲಭ್ಯವಿವೆ. ಸಾಕ್ರೆಟೀಸಿನಂತಹ ಐತಿಹಾಸಿಕ ಪುರುಷನ ಬಗ್ಗೆ ಖಚಿತವಾದ ಮಾಹಿತಿ ದೊರಕುವಷ್ಟು ಯೇಸುವಿನ ಬಗ್ಗೆ ದೊರೆಯದು. ಏಕೆಂದರೆ ಅವನ ಬಗ್ಗೆ ಬರೆದ ನಾಲ್ವರು ಶಿಷ್ಯರು ಆಗಲೇ ಒಂದು ಪರಂಪರೆಯನ್ನು ದಾಖಲಿಸುವವರಾಗಿದ್ದರು; ಯೇಸುವಿನ ಮರಣದ ಸುಮಾರು ಎಪ್ಪತ್ತು ವರ್ಷಗಳ ನಂತರ ಬರೆದವರು ಅವರು. ಆ ವೇಳೆಗಾಗಲೆ ಜೆರೂಸಲೆಂನ್ನು ಧ್ವಂಸಮಾಡಲಾಗಿತ್ತು. ಟೈಟಸ್ ಎಂಬುವನ ನಾಯಕತ್ವದಲ್ಲಿ ರೋಮಿನ ಸೈನ್ಯ ಎಸಗಿದ ದುಷ್ಕೃತ್ಯ ಅದು. ಮುಂದೆ ಹಾಗಾಗುತ್ತದೆಂದು ಯೇಸುವಿನ ಬಾಯಲ್ಲಿ ಅವನ ಶಿಷ್ಯವರ್ಗ ಹೇಳಿಸಿರುವುದು ಆಶ್ಚರ್ಯದ ವಿಷಯವಲ್ಲ. ಅವರ ಸಮಕಾಲೀನ ರಾಜಕೀಯದ ಅಗತ್ಯವನ್ನು ಪೂರೈಸಲು ಎಪ್ಪತ್ತು ವರ್ಷಗಳ ಹಿಂದಿನ ಯೇಸುವಿನ ಬಾಯಿಂದ ಅದನ್ನು ಹೊರಡಿಸಿದ್ದಾರೆ.



*ಬೆಟ್ಟದ ಮೇಲೆ ಕ್ರಿಸ್ತನಿಗೆ ಪ್ರಲೋಭನೆ -ದುಚ್ಚಿಯೋ ದಿ ಬೋನಿನ್ ಸೇನ್ಯ (೧೨೫೫- ೧೩೧೯) (ಫ್ರಿಕ್ ಸಂಗ್ರಹ, ನ್ಯೂಯಾರ್ಕ್)*

**ರೋಮ್ ಚಕ್ರಾಧಿಪತ್ಯದ ಪರವಾಗಿ ಸುವಾರ್ತೆಗಳು**

ಸೋಜಿಗದ ಅಂಶವೆಂದರೆ ಸುವಾರ್ತೆಗಳಲ್ಲಿ ಯೆಹೂದಿ ವಿರೋಧವಾದ, ಆದರೆ ರೋಮ್ ಪರವಾದ, ಅನೇಕ ಸಂಗತಿಗಳು ಕಂಡುಬರುತ್ತವೆ. ಉದಾಹರಣೆಗೆ, ಪೀಟರ್ ತನಗೆ ಯೇಸು ಯಾರೆಂಬುದು ತಿಳಿದಿಲ್ಲವೆಂದು ಹೇಳುತ್ತಾನೆ (ಮ್ಯಾತ್ಯೂ ೨೬. ೬೯-೭೫, ಮಾರ್ಕ್ ೧೪. ೬೬-೭೨ ಇತ್ಯಾದಿ). ಯೇಸುವನ್ನು ದಸ್ತಗಿರಿ ಮಾಡುವಾಗಿನ ಸಂದರ್ಭ ಅದು. ಅಲ್ಲದೆ ದುರಹಂಕಾರಿ ಪೈಲೇಟನನ್ನು ಮೃದುಸ್ವಭಾವದವನೆಂದು ಚಿತ್ರಿಸಲಾಗಿದೆ. ಜೀಸಸ್‌ಗೆ ಮರಣದಂಡನೆ ಆಗುವ ಮೊದಲು ಯೆಹೂದ್ಯರ ಆಗ್ರಹದಂತೆ ಬರಬ್ಬಸ್‌ನನ್ನು ಬಿಡುಗಡೆ ಮಾಡಲು ಅವನು ಒಪ್ಪಿದ್ದುದಾಗಿ ಹೇಳಲಾಗಿದೆ (ಮ್ಯಾತ್ಯೂ: ೨೭.೧೫-೨೬ ಇತ್ಯಾದಿ). ಹಾಗೆ ನೋಡಿದರೆ ರೋಮಿನ ವಿರುದ್ಧದ ಕಾರ್ಯಾಚರಣೆಯಲ್ಲಿ ಬರಬ್ಬಸನ ಪಾತ್ರ ಹಿರಿದು. ಜಾನ್ ಮತ್ತು ಜೂಡಾಸ್ ಸಹ ರೋಮನ್ನರನ್ನು ಉಚ್ಚಾಟಿಸಲು ಶ್ರಮಿಸಿದ್ದರು. ಜಾನ್ ಬಂದ ಮೇಲೆ ಎಲ್ಲೆಲ್ಲೂ ಗಲಾಟೆ ಆರಂಭವಾಗಿ ಭಗವಂತನ ಸಾಮ್ರಾಜ್ಯ ಹತ್ತಿರವಾಗಿರುವಂತೆ ಕಾಣುತ್ತಿದೆ (ಲೂಕ್ ೧೬, ೧೬. ಇತ್ಯಾದಿ), ಎಂಬ ಮಾತು ಆತನ ನಾಯಕತ್ವಕ್ಕೆ ಕುರುಹಾಗಿದೆ. ಇದು ಪರಲೋಕಕ್ಕೆ ಸಂಬಂಧಿಸಿದ ಮಾತಲ್ಲ, ಇಹಲೋಕದ ಗುಲಾಮಗಿರಿಯಿಂದ ಮುಕ್ತವಾಗಬೇಕೆಂಬ ತವಕದ ಸೂಚನೆ. ಲೂಕನ ಸುವಾರ್ತೆಯ ೨೨ನೆಯ ಅಧ್ಯಾಯದಲ್ಲಿ ಒಂದು ಕ್ರಾಂತಿಕಾರಿ ಪಡೆಯ ರಚನೆ, ಅವರ ಬಂಡಾಯದ ಮೊದಲು ಸಾಮೂಹಿಕವಾಗಿ ಉಂಡದ್ದು, ಮುಂತಾದ ವಿವರಗಳು ದೊರೆಯುತ್ತವೆ. ಅಲ್ಲಿ ಸೇರಿದ್ದವರಲ್ಲಿ ಒಬ್ಬ ರೋಮಿನ ಪರವಾಗಿ ಪಿತೂರಿ ನಡೆಸುವವನಿದ್ದನೆಂದು ಬಂಡಾಯದ ನಾಯಕ ಹೇಳುತ್ತಾನೆ. ಬಂಡಾಯಗಾರರು ಮೂಕವಿಸ್ಮಿತರಾಗುತ್ತಾರೆ. ವೈಯಕ್ತಿಕ ಆಸೆಗಳನ್ನು ಬದಿಗಿಟ್ಟು ಸಮುದಾಯದ ಒಳಿತಿಗಾಗಿ ಕೆಲಸ ಮಾಡುವುದೇ ಕ್ರಾಂತಿಕಾರಿಯ ಕರ್ತವ್ಯವೆಂಬ ಮಾತೂ ಇಲ್ಲಿ ಬರುತ್ತದೆ (೧೬. ೨೬-೨೭). ಮೇಲಾಗಿ, ಯೇಸುವಿನ ಒಡನಾಡಿ ಗಳು ಬಂಡಾಯಕ್ಕೆ ಸಜ್ಜಾಗಿಲ್ಲದಿದ್ದ ಪಕ್ಷದಲ್ಲಿ ಜೂಡಾಸನು ಏನನ್ನು ಬಹಿರಂಗಗೊಳಿಸಿ ವಿಶ್ವಾಸಘಾತುಕತನವನ್ನು ಪ್ರದರ್ಶಿಸಲು ಸಾಧ್ಯವಿತ್ತು? ಯೇಸುವನ್ನು ಹಿಡಿಯ ಬಂದವರಿಗೆ ಅವನನ್ನು ಬೊಟ್ಟುಮಾಡಿ ತೋರಿಸಿದ್ದು ಜೂಡಾಸನ ವಿಶ್ವಾಸಘಾತುಕತೆ ಎಂಬ ರೀತಿಯಲ್ಲಿ ಸುವಾರ್ತೆಗಳ ಕೆಲವು ವಾಕ್ಯಗಳಿವೆ. ಅವನ್ನು ಪದಶಃ ತೆಗೆದುಕೊಳ್ಳುವುದು ಅಪಾರ್ಥವಾಗುತ್ತದೆ. ಏಕೆಂದರೆ ರೋಮಿನ ಗುಪ್ತದಳಗಳಿಗೆಲ್ಲಾ ಯೇಸು ಚೆನ್ನಾಗಿ ಗೊತ್ತಿದ್ದವನು. ಅವನು ಊರೊಳಕ್ಕೆ ಬಂದಾಗ ಜನರು ಎಲ್ಲೆಲ್ಲೂ ನಿಂತು ಸಂಭ್ರಮದಿಂದ ಅವನನ್ನು ಬರಮಾಡಿ ಕೊಂಡಿದ್ದರು. ''ನನಗೆ ಮುಕ್ತಿ ದೊರಕಿಸಿಕೊಡು'' (ಹೊಸಾನ್ನಾ) ಎಂದು



*ಗುಡ್ಡದ ಮೇಲಿಂದ ಉಪದೇಶ - ಕ್ಲಾದ್ ಲೊರೇನ್ (೧೬೦೦-೧೬೮೨) (ಫ್ರಿಕ್ ಸಂಗ್ರಹ, ನ್ಯೂಯಾರ್ಕ್)*

ಜಯಘೋಷ ಮಾಡಿದ್ದರು. ಅಂತಹವನ ಗುರುತಿಲ್ಲದ ಗುಪ್ತದಳ ಎಂತಹ ಗುಪ್ತದಳವಾದೀತು! ಜೂಡಾಸನು ಬಂಡಾಯದ ಸಮಾಚಾರವನ್ನು ರೋಮಿನ ದಳಗಳಿಗೆ ತಿಳಿಸಿದ್ದೇ ಅವನ ನಿಜವಾದ ವಿಶ್ವಾಸಘಾತುಕತನ. ಬರಬ್ಬಸನ ಸಂದರ್ಭದಲ್ಲಿ ಬರುವ ಮಾತುಗಳು ಬಂಡಾಯದ ಸ್ಪಷ್ಟಚಿತ್ರವನ್ನು ಕೊಡುತ್ತವೆ. ''ಬಂಡೆದ್ದು ಕೆಲವರನ್ನು ಕೊಂದಿದ್ದುದರಿಂದ ಇತರ ಕೆಲವರೊಡನೆ ಬರಬ್ಬಸ್ ದಸ್ತಗಿರಿಯಾಗಿದ್ದ'' ಎನ್ನುತ್ತದೆ ಮಾರ್ಕನ ಸುವಾರ್ತೆ (೧೫.೭). ಅದನ್ನೇ ಲೂಕನ ಸುವಾರ್ತೆಯೂ ಹೇಳುತ್ತದೆ (೨೩.೧೯). ನಗರದ ಶ್ರೀಮಂತರನ್ನುಳಿದು ಇತರರೆಲ್ಲಾ ರೋಮಿನ ವಿರೋಧಿಗಳೇ ಆಗಿದ್ದರು.

**ಸುವಾರ್ತೆಗಳ ತೀವ್ರಗಾಮಿತನ**

ಶೋಷಣೆಯನ್ನು ಉಗ್ರವಾಗಿ ಖಂಡಿಸುವುದಲ್ಲದೆ ಇಡೀ ಸಾಮಾಜಿಕ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಬದಲಾಯಿಸಬೇಕೆಂಬ ಆಶಯವನ್ನು ಸುವಾರ್ತೆಗಳು ವ್ಯಾಪಕವಾಗಿ ಪ್ರಕಟಿಸುತ್ತವೆ.''ಕಡೆಯವರು ಮೊದಲಿಗರಾಗುತ್ತಾರೆ; ಭೂಮಾತೆಯ ಸಂಪತ್ತಿನ ಉತ್ತರಾಧಿಕಾರಿಗಳು ಅವರು.'' ಜೊತೆಗೆ, ''ಪೂಜಾಸ್ಥಾನದಿಂದ ಬಡ್ಡಿಗೆ ಸಾಲ ಕೊಡುವವರನ್ನು ಹೊರದೂಡಲಾಯಿತು,'' ಎಂಬ ಮಾತನ್ನು ಗಮನಿಸಿ. ರೋಮಿನ ಆಡಳಿತದೊಡನೆ ಕೈಗೂಡಿಸಿದವರು ''ಸತ್ತವರ ಮೂಳೆಗಳನ್ನು ತುಂಬಿಕೊಂಡಿರುವ ಪೇಲವ ಗೋರಿಗಳು.'' ಕಾನೂನಿನ ಮಾತನ್ನೇ ಆಡುತ್ತಾ ವಿಜೃಂಭಿಸುವವರು (ಅಂದರೆ, ರೋಮಿನ ಹಿಡಿತವನ್ನು ಸಮರ್ಥಿಸುವವರು) ''ಸೊಣವನ್ನು ಹಿಸುಕಿಹಾಕುತ್ತಾರೆ, ಆದರೆ ಒಂಟೆಯನ್ನು ನುಂಗುತ್ತಾರೆ.'' (ಇದು ನಮ್ಮ ಸಮಕಾಲೀನ ಕಾನೂನು ವ್ಯವಸ್ಥೆಗೆ ಹಿಡಿದ ಕನ್ನಡಿಯೇ ಎಂಬಂತಿದೆ. ಬಹುರಾಷ್ಟ್ರೀಯ ಕಂಪನಿಗಳ ಸಮರ್ಥನೆ, ಬೀಡಿ ಅಂಗಡಿಯುವನ ಉಚ್ಚಾಟನೆ!!)

ಇನ್ನೊಂದು ಪ್ರಸಂಗ ಹೀಗಿದೆ : ರೋಮನ್ನರಿಗೆ ತೆರಿಗೆ ಕೊಡಬೇಕೋ, ಎಂಬ ಪ್ರಶ್ನೆಯನ್ನು ಜೀಸಸ್‌ಗೆ ಹಾಕಲಾಗಿದೆ. ''ಅದಾವ ನಾಣ್ಯವನ್ನು ಕೊಡಲಾಗುತ್ತದೆಯೋ ಅದನ್ನು ತೋರಿಸಿ,'' ಎನ್ನುತ್ತಾನೆ ಅವನು. ತಕ್ಷಣ ಪ್ರಶ್ನೆ ಹಾಕಿದವನು ಒಂದು ರೋಮನ್ ನಾಣ್ಯವನ್ನು (ದೆನಾರಿಯಸ್) ತೋರಿಸುತ್ತಾನೆ ! ಯೆಹೂದಿ ನಾಣ್ಯ ಅವನಲ್ಲಿಲ್ಲ. ರೋಮನ್ನರ ಬಾಲಬಡುಕನಲ್ಲದವನಾಗಿದ್ದರೆ ಅವನ ಬಳಿ 'ದೆನಾರಿಯಸ್' ಎಲ್ಲಿರುತ್ತಿತ್ತು! ''ಸೀಸರನಿಗೆ ಸಲ್ಲಬೇಕಾದ್ದನ್ನು ಅವನಿಗೆ ಕೊಡಿ, ಆದರೆ ನಮ್ಮ ದೇಶಕ್ಕೆ ಸೇರಬೇಕಾದ ಸ್ವಾತಂತ್ರ್ಯವನ್ನು ಅದಕ್ಕೆ ಕೊಡಿ,'' ಎನ್ನುತ್ತಾನೆ ಯೇಸು.

ಇನ್ನೊಂದು ಪ್ರಸಂಗದಲ್ಲಿ ಶ್ರೀಮಂತ ಯುವಕನೊಬ್ಬ ನಿದ್ದಾನೆ. ಅವನನ್ನು ಕಂಡೊಡನೆ ಯೇಸುವಿಗೆ ಅಭಿಮಾನ ಉಕ್ಕುತ್ತದೆ. ಅವನು ಸನ್ನಡತೆಗೆ ಹೆಸರಾಗಿದ್ದ ಯುವಕ. ''ಅಮರ ಜೀವನಕ್ಕಾಗಿ ನಾನಿನ್ನೇನು ಮಾಡಬೇಕು?'' ಎನ್ನುತ್ತಾನವನು. ಜೀಸಸ್ ಹೇಳಿದ : ''ನಿನ್ನ ಆಸ್ತಿಯನ್ನೆಲ್ಲಾ ಮಾರಿಕೊಂಡು ನಮ್ಮ ಚಳುವಳಿಯಲ್ಲಿ ಸೇರಿಕೊ.'' ಆ ಯುವಕನಿಗೆ ಅದು ಸಾಧ್ಯವಲ್ಲ. ಅವನ ವರ್ಗದಿಂದ ಹೊರಬರಲು ಅವನಲ್ಲಿ ಮಾನಸಿಕ ಸಿದ್ಧತೆ ಇಲ್ಲ. ಸಾಮಾಜಿಕ ಸುಧಾರಣೆಯ ಕ್ರಿಯೆಯಲ್ಲಿ ಅವನು ಭಾಗವಹಿಸಲಾರ. ಸಪ್ಪೆ ಮೋರೆ ಮಾಡಿಕೊಂಡು ಅವನು ಹೊರಟು ಹೋಗುತ್ತಾನೆ. ಆಗಲೇ ಯೇಸು ಹೇಳಿದ್ದು : ''ಒಂಟೆಯು ಸೂಜಿಯ ಕಂಡಿಯಲ್ಲಿ ತೂರಿಬರಬಹುದು, ಶ್ರೀಮಂತನಿಗೆ ಭಗವಂತನ ಸಾಮ್ರಾಜ್ಯದಲ್ಲಿ ಪ್ರವೇಶವಿಲ್ಲ,'' ಎಂದು. ಅಂದರೆ ತಾನು ನಿರ್ಮಿಸುತ್ತಿದ್ದ ಹೊಸಪದ್ಧತಿಯ ಸಮಾಜಕ್ಕೆ ಶ್ರೀಮಂತನ ಬೆಂಬಲವಿಲ್ಲ, ಎಂದರ್ಥ. ಆ ನೂತನ ಸಮಸಮಾಜವೇ 'ಭಗವಂತನ ಸಾಮ್ರಾಜ್ಯ'. ಜೆರೂಸಲೆಂ ನಗರದೊಳಕ್ಕೆ ಪ್ರವೇಶಿಸಲು ಇದ್ದ ಹಾದಿಗಳಲ್ಲಿ ''ಸೂಜಿಯ ಕಂಡಿ'' ಎಂಬ ಹೆಸರಿನ ಕಿರಿದಾದ ಹಾದಿಯೊಂದು ಇದ್ದಿತಂತೆ. ಅದರ ಮೂಲಕ ಒಂಟೆಯೊಂದು ಕಷ್ಟಪಟ್ಟು ಪ್ರವೇಶಿಸಬಹುದಿದ್ದಿತೇನೋ! ಯೇಸು ಹಾಗೆಂದಾಗ ಶಿಷ್ಯಕೋಟಿ ಕೇಳಿತು: ''ಶ್ರೀಮಂತರಿಗೆ ಮುಕ್ತಿ ಇಲ್ಲವೆಂದಾದರೆ ಅದು ಇರುವುದು ಯಾರಿಗೆ?'' ಅದಕ್ಕೆ ಯೇಸುವಿನ ಉತ್ತರ: ''ತನಗೆ ತಾನು ಅದನ್ನು ಪಡೆದುಕೊಳ್ಳಲು ಯಾರಿಗೂ ಸಾಧ್ಯವಿಲ್ಲ. ಏನಿದ್ದರೂ ಬೇರೆಯವರೊಡನೆ ಬೆರೆತು ಪಡೆದುಕೊಳ್ಳಬೇಕು, ಅಷ್ಟೆ.'' - ಏನಿದರರ್ಥ? ವೈಯಕ್ತಿಕ ಬಿಡುಗಡೆ ಎಂಬುದು ಮರೀಚಿಕೆ, ಅದು ಇಡೀ ಸಮುದಾಯದ ಬಿಡುಗಡೆಯೇ ಆಗಬೇಕು, ಎಂದು.

ಯೇಸುವಿನ ಮಾತನ್ನು ಕೇಳಿ ಶಿಷ್ಯರೆಲ್ಲಾ ತಮ್ಮೊಳಗೆ ಲೆಕ್ಕಾಚಾರ ಮಾಡಿಕೊಳ್ಳಲಾರಂಭಿಸಿದರು: ನಾವು ಏನೇನು ಬಿಟ್ಟಿದ್ದೇವೆ, ನಮಗೆ ದೊರೆಯುವ ಫಲ ಎಷ್ಟರಮಟ್ಟಿನದು, ಎಂದು. ಆಗ ಯೇಸು ನುಡಿದ: ''ಮನೆ, ಮಠ, ಸೋದರರು, ಭೂಮಿ, ಕಾಣೆ, ಎಲ್ಲವನ್ನೂ ಬಿಟ್ಟು ನೀವೆಲ್ಲಾ ನನ್ನೊಡನೆ ಸೇರಿದ್ದೀರಿ, ಸುವಾರ್ತೆಗಾಗಿ ಮುಡಿಪಾಗಿ ಬಂದಿದ್ದೀರಿ. ಇಷ್ಟನ್ನು ತಿಳಿಯಿರಿ: ಹೀಗೆ ಬಂದಿರುವ ನಿಮಗಾರಿಗೂ **ಇದೇ ಜೀವನದಲ್ಲಿ** ಇದರ ನೂರುಪಟ್ಟು ಸಿಗದಿರುವುದಿಲ್ಲ. ಆದರೆ ಅದಕ್ಕಾಗಿ ಕಿರುಕುಳಗಳನ್ನು ನೀವು ಸಹಿಸಬೇಕಾಗುತ್ತದೆ. ಆಮೇಲೆ ಅಮರವಾದ ಜೀವನ. ಈಗ ಮೊದಲಿನಲ್ಲಿರುವವರು ಆಮೇಲೆ ಕೊನೆಯವರಾಗುತ್ತಾರೆ, ಕೊನೆಯಲ್ಲಿರುವವರು ಮೊದಲಿಗರಾಗುತ್ತಾರೆ'' (ಮಾರ್ಕ್ : ೧೦. ೨೯-೩೧).

ಹಲವು ಶತಮಾನಗಳಿಂದ ಪೋಪನ ಸಾಮ್ರಾಜ್ಯದಲ್ಲಿ ಪರಲೋಕದ ಮಹಿಮೆಯನ್ನು ಕೊಂಡಾಡುತ್ತಾ ಬರಲಾಗಿದೆ. ಆದರೆ ಯೇಸು ಯತ್ನಿಸಿದ್ದು **ಇದೇ ಜೀವನದಲ್ಲಿ** ಹೊಸ ಸಮಾಜವನ್ನು ನಿರ್ಮಿಸುವುದಕ್ಕೆ. ಫಲವು ಪರಲೋಕದಲ್ಲಿ ದೊರಕುವುದಲ್ಲ; ಇಲ್ಲಿ, ಈಗ, ಅದು ದೊರೆಯಬೇಕು. ಸಮತೆ ಮತ್ತು ಭ್ರಾತೃತ್ವಗಳೇ ಆ ಫಲ.

ಇದಕ್ಕಾಗಿ ಹೋರಾಡುವಾಗ ರೋಮಿನ ಚಕ್ರಾಧಿಪತ್ಯದ ದೈತ್ಯಶಕ್ತಿಯ ಅರಿವು ಯೇಸುವಿಗಿರಲಿಲ್ಲವೆ ? ಖಂಡಿತವಾಗಿಯೂ ಇತ್ತು. ಪ್ಯಾಲಿಸ್ಟೈನ್ ಆ ಚಕ್ರಾಧಿಪತ್ಯದ ಒಂದು ಅಂಚಿಗಿತ್ತು. ಆದ್ದರಿಂದ ಅದನ್ನು ಮುರಿದು ಸ್ವತಂತ್ರವಾಗಲು ಹೆಚ್ಚಿನ ಸಾಧ್ಯತೆಯನ್ನು ಯೇಸು ಕಂಡುಕೊಂಡ. ಜಾನ್, ಬರಬ್ಬಸ್ ಮುಂತಾದವರೂ ಅಂತಹ ಕನಸುಗಾರರೇ ಆಗಿದ್ದರು. ಆದರೆ ಸೋಲುಂಟಾದಾಗ ಅವರ ಅನುಯಾಯಿಗಳು ಆ ಕನಸಿನ ಸ್ವತಂತ್ರರಾಜ್ಯದ ನೈತಿಕ ಆಯಾಮಗಳನ್ನು ಮರೆಯಲಿಲ್ಲ; ಅದನ್ನು ದಾಖಲಿಸಿದರು, ಜೀವನದಲ್ಲಿ ಅಳವಡಿಸಿಕೊಳ್ಳಲು ಯತ್ನಿಸಿದರು. ದೇವತಾಶಾಸ್ತ್ರದ ವ್ಯಾಖ್ಯಾನಕಾರರು ಕ್ರೈಸ್ತಧರ್ಮದ ತಿರುಳನ್ನು ಎಷ್ಟು ಕಿವಿಚಿದ್ದರೂ ಅದರ ಮಹತ್ವದ ಭಾಗವಾದ ನೂತನ ಸಾಮಾಜಿಕ ವ್ಯವಸ್ಥೆಯ ಕಲ್ಪನೆಯು ಮಸುಕಾಗಿಲ್ಲ.

**ಜನತಾ ಆಂದೋಳನ**

ಮೊದಲಿಂದಲೂ ರೈತಾಪಿ ಜನ, ಕಂಗಾಲಾಗಿದ್ದ ಜನ, ಸಾಮಾನ್ಯ ಜನ, ಯೇಸುವಿನೊಡನಿದ್ದರು. ಅದೇ ಅವನ ಚಳುವಳಿಯ ಯಶಸ್ಸು. ಅವರು ಪೋಂಟಿಯಸ್ ಪೈಲೇಟ್‌ಗೆ ಹೇಳಿದರು: ''ಇಡೀ ಜೂಡಿಯಾದಲ್ಲಿ ಅವನ ಮಾತುಗಳು ಜನರಲ್ಲಿ ಅಸಮಾಧಾನದ ಹೊಗೆಯನ್ನು

ಎಬ್ಬಿಸಿವೆ. ಅವರ ಮೇಲೆ ಹೇರಲಾಗಿರುವ ಹೊರೆಯನ್ನು ಅವರು ಕಿತ್ತೊಗೆಯಲು ಹಾತೊರೆಯುತ್ತಿದ್ದಾರೆ. ಮೊದಲು ಅದು ಗೆಲಿಲೀಯಲ್ಲಿ ಆರಂಭವಾದ್ದು ಈಗ ಈ ನಗರದವರೆಗೆ ಹಬ್ಬಿದೆ'' (ಲೂಕ್: ೨೩.೫). ತಾನೊಬ್ಬನೇ ಅಸಾಧಾರಣ ದೈವೀಶಕ್ತಿಯಿಂದ ಜನರನ್ನು ಉದ್ಧರಿಸಲು ಶಕ್ತನೆಂಬ ಭ್ರಮೆ ಯೇಸುವಿಗಿರಲಿಲ್ಲ. ಜನರನ್ನು ಮುಟ್ಟಿದರೆ ಮಾತ್ರ ಅದು ಶಕ್ಯವೆಂಬ ಅರಿವು ಅವನಿಗಿದ್ದಿತು. ಅವರ ವರ್ಗದ ಹಿತವೇನೆಂದು ಅವರೇ ತಿಳಿಯದಿದ್ದರೆ ಅವರಿಗೆ ಬಿಡುಗಡೆ ಎಲ್ಲಿಂದ ದೊರಕೀತು ಎಂಬ ಪ್ರಜ್ಞೆ ಅವನಲ್ಲಿತ್ತು. ''ನೀವು ಸತ್ಯವನ್ನು ಅರಿತುಕೊಳ್ಳುತ್ತೀರಿ, ಆ ಸತ್ಯವು ನಿಮ್ಮನ್ನು ಬಂಧನದಿಂದ ಮುಕ್ತರನ್ನಾಗಿಸುತ್ತದೆ,'' ಎಂದ ಯೇಸು.

ಬಂಡಾಯದ ದಿನ ಹತ್ತಿರ ಬರುತ್ತಿದ್ದಂತೆ ಅವನಲ್ಲಿ ದುಗುಡವೂ ಹೆಚ್ಚಾಗುತ್ತಿತ್ತು. ತಾನಲ್ಲದೆ ಬೇರೆಯವ ರೊಬ್ಬರು ನಾಯಕತ್ವ ವಹಿಸುವಂತಿದ್ದರೆ ಈ ದುಗುಡ ಕಡಿಮೆಯಾಗಬಹುದಿತ್ತಲ್ಲಾ, ಎಂದೂ ಅಂದುಕೊಂಡ. ಗೇತ್ಸಮೇನ್ ಎಂಬಲ್ಲಿ ಈ ವಿಚಾರ ಅವನ ಮನಸ್ಸಿನಲ್ಲಿ ಹಾದುಹೋಯಿತು. ಅಷ್ಟರಲ್ಲಿ ಜನಜಂಗುಳಿ ಕಾಣಿಸಿತು. ಸೈನಿಕರೂ ಹಿಂದೆಯೇ ಬಂದರು. ಅವನನ್ನು ದಸ್ತಗಿರಿ ಮಾಡಿದರು. ಆಮೇಲೆ ಚಿರಪರಿಚಿತವಾದ ಪ್ರಹಸನಗಳು : ಕಾನೂನು ಕಟ್ಟಳೆ, ವಿಚಾರಣೆ, ಅವನನ್ನು ನಿಂದಿಸುವಂತಹ ಪ್ರಶ್ನೆಗಳು, ಅದಕ್ಕೆ ಮೌನದ ಅಥವಾ ವ್ಯಂಗ್ಯದ ಉತ್ತರ, ಮುಳ್ಳಿನ ಕಿರೀಟದ ಧಾರಣೆ, ಶಿಲುಬೆಯನ್ನು ಹೊತ್ತು ಸಾಗಲು ನಿಶ್ಶಕ್ತಿ, ಕಡೆಗೆ ದಾರುಣವಾದ ಮರಣ. ಶಿಲುಬೆಗೇರಿದಾಗ ಆತನೆಂದ : ''ಅಯ್ಯೋ ಭಗವಂತ, ನನ್ನನ್ನೇಕೆ ಕೈಬಿಟ್ಟೆ ? ಹೇಗೂ ಇರಲಿ, ಅವರನ್ನು ಕ್ಷಮಿಸು; ಅವರೇನು ಮಾಡುತ್ತಿದ್ದಾರೆಂದು ಅವರು ತಿಳಿಯರು.''

ತನ್ನೆಲ್ಲಾ ಆಕಾಂಕ್ಷೆಗಳೂ ಭಗ್ನವಾಗಿಹೋದುವೇ ಎಂಬ ಆತಂಕ ಅವನನ್ನು ಬಾಧಿಸುತ್ತಿದ್ದಿರಬೇಕು. ಎಷ್ಟೆಲ್ಲಾ ಆಸೆಗಳು, ಎಷ್ಟೆಲ್ಲಾ ಸಾಧ್ಯತೆಗಳು, ಎಷ್ಟೆಲ್ಲಾ ಜನ! ಇನ್ನು ಮುಂದೆ ಜನರು ಏನನ್ನು ಆತುಕೊಳ್ಳಬೇಕು? ಭದ್ರವಾಗಿ ಕಟ್ಟಲಾಗಿದ್ದ ಕೋಟೆಗೆ ಲಗ್ಗೆಯಿಟ್ಟ ದುರ್ಮಾರ್ಗಿಗಳು ಕೋಟೆಯೇ ಇಲ್ಲದಾಗ ಇನ್ನೆಷ್ಟು ದಾಂಧಲೆ, ಅನಾಹುತ ನಡೆಸಬಹುದು! ಈ ರೋಮಿನ ಆಧಿಪತ್ಯಕ್ಕೆ, ಜನರ ನೋವಿಗೆ, ಕೊನೆಯಿದೆಯೆ? ''ಸಸ್ಯವನ್ನು ಹಸಿರಾಗಿರು ವಾಗಲೇ ಹೀಗೆ ಸುಟ್ಟುಹಾಕುವವರಿಗೆ ಅದು ಒಣಗಿದ್ದಾಗ ಏನು ತಾನೆ ಮಾಡಲು ಸಾಧ್ಯವಿಲ್ಲ?'' ಎಂದು ಆತ ಶಿಲುಬೆಯನ್ನು ಹೊತ್ತು ನಡೆಯುತ್ತಿದ್ದಾಗ ಉದ್ಗರಿಸಿದ.

ಅವನನ್ನು ಶಿಲುಬೆಗೇರಿಸಿದರು. ಅದರಡಿ ಒಕ್ಕಣೆ ಕಾಣಿಸಿಕೊಂಡಿತು : ''ಯೆಹೂದ್ಯರ ರಾಜ ಇಲ್ಲಿದ್ದಾನೆ.'' ಜನಮನದ ಆಳದಲ್ಲಿ ಯೇಸು ಮನೆಮಾಡಿಕೊಂಡಿದ್ದುದು ಹಾಗೆ. ಅವನನ್ನು ಗೇಲಿ ಮಾಡಲು ಧೂರ್ತ ಪೈಲೇಟ್ ಹಾಗೆ ಬರೆಯಿಸಿದ್ದ. ಆದರೆ ಅವನ ಮಾತುಗಳು ಯಥಾಸ್ಥಿತಿಯ ಪ್ರತಿಫಲನವೇ ಆಗಿದ್ದವು. ಹಾಗಾಗ ಬೇಕೆಂಬುದೇ ಅವನ ಆಶಯ; ಆದ್ದರಿಂದಲೇ ಈಗಲೂ ಅವನು ಜೀವಂತನಾಗಿರಲು ಶಕ್ಯವಿದೆ.

ಅವನ ಶವವನ್ನು ಪೈಲೇಟನ ಭಂಟರು ಹೂತು ಹೋದರು. ಯೇಸುವಿನ ಅನುಯಾಯಿಗಳು, ಅಭಿಮಾನಿ ಗಳು ಅವನನ್ನು ಪೈಲೇಟಿನ ಪ್ರಪಂಚದಲ್ಲಿ ಬಿಡಲು ಸಿದ್ಧರಿರಲಿಲ್ಲ. ಅವನು ಅವರವನು, ಅವರೊಡನೆ ಇರಬೇಕಾದವನು, ಅವರ ಏಳಿಗೆಗಾಗಿ ಪ್ರಾಣ ಕೊಟ್ಟಿದ್ದ ವನು. ಆದ್ದರಿಂದ ಹೊಂಚುಹಾಕುತ್ತಿದ್ದು ಸಮಯ ಸಿಕ್ಕಾಗ ಅವನ ಶವವನ್ನು ಹೊರತೆಗೆದುಕೊಂಡು ಹೋದರು. ಯಾವ ಗುಡಿಸಿಲಿಗೆ ತೆಗೆದುಕೊಂಡು ಹೋದರೋ ಬಲ್ಲವರಾರು! ಅದನ್ನು ಅಲ್ಲಿ ಏನು ಮಾಡಿಕೊಂಡರೋ ಕಂಡವರಾರು! ಅಂತೂ ಪೈಲೇಟಿನ ಜನ ಬೆಚ್ಚಿದರು. ಇದೇನು ಕೌತುಕವೆಂದು ಹೌಹಾರಿದರು. ಸಾಮಾನ್ಯ ಜನರಲ್ಲಿ ಒಂದು ಐತಿಹ್ಯವು ಪ್ರಚಲಿತವಾಯಿತು : ಹೂಳಲ್ಪಟ್ಟ ಮೂರನೆಯ ದಿನ ಯೇಸುಸ್ವಾಮಿಯು ಎದ್ದು ಹೊರಬಂದ, ನಮ್ಮ ಹೃದಯಗಳಲ್ಲಿ ಸೇರಿಕೊಂಡ, ಎಂದು. ಅದನ್ನೇ ಪುನರುತ್ಥಾನವೆಂದು ಕ್ರೈಸ್ತಧರ್ಮದವರು ಆಚರಿಸುವ ಪದ್ಧತಿ ಇದೆ. ಆದರೆ ಅವರಲ್ಲಿ ಎಷ್ಟು ಮಂದಿಯ ಹೃದಯಗಳಲ್ಲಿ ಯೇಸು ನೆಲೆಸಿದ್ದಾನೆ? ನಮ್ಮ ಕಠೋರ ವ್ಯವಸ್ಥೆಯು ಯೇಸು ಜೀವಿಸಿದ್ದ ಕಾಲದ ಅವನ ನಾಡಿನ ವ್ಯವಸ್ಥೆಗಿಂತಲೂ ಮೌಲಿಕವಾಗಿ ಎಷ್ಟು ಭಿನ್ನ? ಒಂದು ಕಥೆಯ ಮುಖಾಂತರ ಯೇಸು ಒಂದು ಸಂದೇಶ ನೀಡಿದ್ದುದನ್ನು ಅವನ ಸಹಚರರು ಎಂದೆಂದಿಗೂ ಸ್ಮರಿಸಿಕೊಳ್ಳುತ್ತಿದ್ದರು. ಅದು ಗೆದರೀನ್‌ನ ಕತೆ, ಅಲ್ಲಿಯ ಹಂದಿಗಳ ಕತೆ. ರೋಮಿನ ದುಷ್ಟ ಚಕ್ರಾಧಿಪತ್ಯದ ಹಂದಿಗಳನ್ನು ಸಮುದ್ರದೊಳಕ್ಕೆ ಒಗೆಯುವುದೆಂತು, ಎಂಬುದನ್ನು ವಿವೇಚಿಸುವ ಕತೆ ಅದು (ಮ್ಯಾತ್ಯೂ: ೮.೨೮-೩೪).

ಆ ಕತೆಯಿಂದ ಇಂದಿನ ಪ್ರಪಂಚ ಕಲಿಯಬೇಕಾದ್ದು ಬಹಳಷ್ಟಿದೆ. ಅದನ್ನು ಕಲಿತರೆ ಯೇಸುವನ್ನು ಜೀವಂತ ವಾಗಿಟ್ಟಂತೆ ಆಗುತ್ತದೆ. ಇಲ್ಲದಿದ್ದರೆ ಪೋಪ್ ಹಾಗೂ ಇತರ ಮತಧರ್ಮಗಳ ಜಗದ್ಗುರುಗಳಂತೆ ಅವನೂ ಜಡ್ಡುಕಟ್ಟಿ ಹೋಗುತ್ತಾನೆ. ಅವನ ಕಾಲದ ಹಂದಿಗಳಿಗಿಂತ ಭೀಕರವೂ ಬಲಿಷ್ಠವೂ ಆದ ಹಂದಿಗಳು ಜಗತ್ತನ್ನು ಆವರಿಸಿಕೊಂಡು ಕತ್ತಲೆಯನ್ನು ಸೃಷ್ಟಿಸಿವೆ. ಸುಮ್ಮನೆ ''ಕರುಣಾಳು ಬಾ, ಬೆಳಕೆ, ಮುಸುಕಿದೀ ಮಬ್ಬಿನಲಿ, ಕೈಹಿಡಿದು ನಡೆಸೆನ್ನನು'' ಎಂದರೆ ಬೆಳಕು ಬರುವುದಿಲ್ಲ. ನಾವೇ ಬೆಳಕನ್ನು ತಂದು ಕೊಳ್ಳಬೇಕು. ಅದಕ್ಕೆ ಯೇಸುವಿನ ಜೀವನ ಒಂದು ನಿದರ್ಶನವಷ್ಟೆ.

○○

---

(೧೨ನೇ ಪುಟದಿಂದ)

ನಿರ್ದೇಶಿಸುವ ಶಕ್ತಿಶಾಲಿ ಸಂಖ್ಯೆ ಯಾವುದಯ್ಯಾ?' ಎಂದೆ.

'ಹದಿಮೂರರ ಮಹತ್ವದ ಸಂಶೋಧನೆಯ ಜೊತೆಗೆ ಇತರ ಸಂಖ್ಯೆಗಳ ಬಗೆಗೂ ಸಂಶೋಧನೆ ನಡೆಯುತ್ತಿದೆ. ಬೇರೆ ಯಾವುದೇ ಸಂಖ್ಯೆಗಿಂತ ಹೆಚ್ಚು ಸ್ಪಷ್ಟವಾಗಿ ರಾಜಕೀಯಕ್ಕೆ ಅಂಟಿಕೊಂಡಿರುವ ಸಂಖ್ಯೆ 'ಚಾರ್ ಸೌ ಬೀಸ್' ಎಂದು ಗುರುತಿಸಲಾಗಿದೆ. ನಿನಗೆ ಕೂಡುವುದು, ಗುಣಿಸುವುದು ತಿಳಿದಿವೆಯೋ?'

'ಅದೇನಪ್ಪ?'

ಒಂದು ಕಾಗದವನ್ನು ತೆಗೆದುಕೊಂಡು ಅದರಲ್ಲಿ ಕೆಳಗಿನ ಸಮೀಕರಣವನ್ನು ಕೌಟಿಲ್ಯ ಬರೆದಾಗ ನನಗೆ ತಲೆ ತಿರುಗಿದಂತಾಯಿತು.

೪೨೦=(೧೩x೧೩)+(೧೩x೧೩)+(೧೩x೩)+(೩x೧೩)+(೩x೧)+(೧x೧)

ಹದಿಮೂರು ಮತ್ತು ಅದರೊಳಗಡಗಿರುವ ಅಂಕಿಗಳಿಂದಲೇ ಸಾಧಿಸಿ ತೋರಿಸಬಹುದಾದ ಈ ಸಮೀಕರಣದ ಜೊತೆಗೆ ಇನ್ನೂ ಯಾವ ಯಾವ ಸಮೀಕರಣಗಳಿವೆಯೋ ? ಮುಖ್ಯವಾಗಿ ನಮ್ಮ ರಾಜಕೀಯ ಲೋಕದಲ್ಲಿನ ಎಲ್ಲ ಸಮೀಕರಣಗಳೂ ಒಂದೇ ತತ್ವದಿಂದ ಒಡಗೂಡಿರುವುದು ನನ್ನ ಮಂದಮತಿಗೂ ಸ್ಪಷ್ಟವಾಗತೊಡಗಿತು.

ಕರ್ನಾಟಕ ಮುಖ್ಯಮಂತ್ರಿಗಳು ಪ್ರತಿಪಕ್ಷದ ನೆರೆ ರಾಜ್ಯದ ಮುಖ್ಯಮಂತ್ರಿಗಳ ಬಂಡವಾಳ ('ದೇಶೀ' 'ವಿದೇಶೀ') ಪರವಾದ ಆರ್ಥಿಕ ನೀತಿಯ ಪ್ರಶಂಸೆ ಮಾಡುವುದು; ಕಾಂಗ್ರೆಸ್‌ನ ಜಯರಾಮ್ ರಮೇಶ್ ಮತ್ತು ಬಿ.ಜೆ.ಪಿ.ಯ ಅರುಣ್ ಜೆಟ್ಲಿ; ಕಾಂಗ್ರೆಸ್‌ನ ಮನಮೋಹನಸಿಂಗ್, ಬಿ.ಜೆ.ಪಿ.ಯ ಯಶವಂತ ಸಿನ್ಹ, ವಿದೇಶಿ ಟಿ.ವಿ. ಅ.ಆ.ಇ. ಸಂದರ್ಶನದಲ್ಲಿ ಪರಸ್ಪರ ವೈರುಧ್ಯ ಮರೆತು, ದೇಶದ ಆರ್ಥಿಕ ಸೂತ್ರಗಳನ್ನು 'ಸ್ವದೇಶೀ' 'ವಿದೇಶೀ' ಶಾರ್ಕ್‌ಗಳಿಗೆ ಒಪ್ಪಿಸಿಕೊಡುವಲ್ಲಿ ಒಮ್ಮತ ತೋರಲು ಪೈಪೋಟಿ ನಡೆಸುವುದು; ಎಲ್ಲವೂ ಕ್ರಮೇಣ ಅರ್ಥವಾಗತೊಡಗಿತು.

ದೇಶದ ಶ್ರೀಸಾಮಾನ್ಯನಿಗೆ ತುಣುಕುಗಳು ಕ್ರಮೇಣ ಉದುರುವ ಕ್ರಮದಿಂದಲಾದರೂ ಲಾಭ ಸಿಗಬಹುದೇ ? ಅವರ ಆಸೆ ಆಕಾಂಕ್ಷೆಗಳನ್ನು ಪೂರೈಸುವ ಸೂಚನೆಯನ್ನು ಪ್ರತಿನಿಧಿಸುವ ಅದೃಷ್ಟಸಂಖ್ಯೆ ಇದೆಯೇ ಎಂಬ ಪ್ರಶ್ನೆ ನನ್ನ ಮನಸ್ಸಿನಲ್ಲಿ ಹಾಯ್ದು ಹೋಯಿತು. ಇದನ್ನರಿತವನಂತೆ ಕೌಟಿಲ್ಯ ಹೇಳಿದ, 'ಯಾವ ನಿರ್ದಿಷ್ಟ ಸಂಖ್ಯೆ 'x' ಅನ್ನು ೪೨೦ರಿಂದ ಗುಣಿಸಿದಾಗಲೂ, ೧೩ರಿಂದ ಗುಣಿಸಿದಾಗಲೂ, ಮತ್ತೆ ಯಾವುದೋ ಅದೃಷ್ಟ ಸಂಖ್ಯೆಯಿಂದ ಗುಣಿಸಿದಾಗಲೂ 'x' ನಲ್ಲೇ ಪರ್ಯಾವಸಾನವಾಗುವುದೋ ಅದೇ ಸಂಖ್ಯೆ ಶ್ರೀಸಾಮಾನ್ಯನ ನಂಬರ್ ! ತಿಳಿಯಿತೇ?'

ಕೊನೆಯ ಲೆಕ್ಕ ಬಿಡಿಸಿದಾಗ ಸರಸ್ವತಿ ಒಮ್ಮೆಗೇ ಬಂದು ನನ್ನೆದೆಯಲ್ಲಿ ನೆಲೆಸಿದ ಅನುಭವವಾಗಿ ಜ್ಞಾನೋದಯವಾಯ್ತು. ಅದೃಷ್ಟ ಸಂಖ್ಯೆ ಏನಿದ್ದರೂ ರಾಜಕೀಯ ವ್ಯಕ್ತಿಗಳಿಗೆ ಮಾತ್ರ.

ಆಟಂಬಾಬ್, ಮಿಸೈಲ್ಸ್, ಇನ್‌ಸಾಟ್ ಉಪಗ್ರಹಗಳ ಬಗ್ಗೆ ಸಂಶೋಧನೆ ನಡೆಸುವುದರ ಜೊತೆಗೆ ಸಂಖ್ಯೆಗಳ ಅಂತರಾರ್ಥವನ್ನು ಸಂಶೋಧಿಸಲು ಒಂದು ಗುಪ್ತ 'Department of Numerology' ಅನ್ನು ಸೃಷ್ಟಿಸುವ ಸಾಧ್ಯತೆ ಗೋಚರಿಸಿತು.

ಜೈ ಜವಾನ್ ! ಜೈ ಕಿಸಾನ್ ! ಜೈ ವಿಜ್ಞಾನ್ !
ಜೈ ಸಂಖ್ಯಾಜ್ಞಾನ್ !

○○

# ವ್ಹಾಂಕಾ

**ಕ್ರಿಸ್‌ಮಸ್‌ನಲ್ಲಾದರೂ ತನ್ನ ಬಿಡುಗಡೆ ಆಗಬಹುದೇ ಎಂದು ತವಕದಿಂದ ಕಾದಿದ್ದ ವಾಂಕಾ ತನ್ನ ತಾತನಿಗೆ ಕಾಗದ ಬರೆದ. ನಿಜಜೀವನದಲ್ಲಿ ಅಂತಹ ಅದೆಷ್ಟು ವಾಂಕಾಗಳು ಎಲ್ಲೆಲ್ಲಿ ನೋವು ತಿನ್ನುತ್ತಿದ್ದಾರೋ...**

ರಷ್ಯನ್ ಮೂಲ : ಆ್ಯಂಟನ್ ಚೆಕಾಫ್
ಕನ್ನಡಕ್ಕೆ : ಪ್ರಮೋದ ಮುತಾಲಿಕ

ಕ್ರಿಸ್‌ಮಸ್ ಹಿಂದಿನ ರಾತ್ರಿ ಒಂಬತ್ತು ವರ್ಷದ ಎಳೆಯ ವಾಂಕಾ ಜುಕೋವ್ ಇನ್ನೂ ನಿದ್ರೆ ಮಾಡಿರಲಿಲ್ಲ. ಮೂರು ತಿಂಗಳುಗಳ ಹಿಂದೆಯಷ್ಟೆ ಆತನನ್ನು ಅಲ್ಯಾಖಿನ್ ಎಂಬ ಮೋಚಿಯ ಹತ್ತಿರ ಕೆಲಸಕ್ಕೆಂದು ಇಡಲಾಗಿತ್ತು. ತನ್ನ ಒಡೆಯ, ಒಡತಿ, ಇನ್ನುಳಿದ ಸಹಚರರೆಲ್ಲ ಚರ್ಚಿಗೆ ಹೋಗುವವರೆಗೂ ಕಾಯ್ದು, ನಂತರ ಸಂದೂಕಿನಿಂದ ಮಸಿಯ ದೌತಿ, ನಿಬ್ಬು ತುಕ್ಕು ಹಿಡಿದಿದ್ದ ಲೆಕ್ಕಣಿಕೆ ಮತ್ತು ಮುದುಡೆಯಾಗಿದ್ದ ಪೇಪರನ್ನು ಹೊರತೆಗೆದು ಬರೆಯಲು ಸಿದ್ಧನಾದ. ಆದರೂ ಆತನಿಗೆ ಅದೇಕೊ ಧೈರ್ಯ ಸಾಲಲಿಲ್ಲ. ಮೊದಲ ಸಾಲನ್ನು ಬರೆಯುವ ಮೊದಲು ಭಯಮಿಶ್ರಿತ ಕುತೂಹಲದಿಂದ ಹಲವಾರು ಬಾರಿ ಕಿಟಕಿ, ಬಾಗಿಲುಗಳ ನೋಡಿ 'ಯಾರೂ ಬರುತ್ತಿಲ್ಲವಲ್ಲ' ಎಂದು ಖಾತರಿ ಮಾಡಿಕೊಂಡು, ಕೊರೆಯುವ ಛಳಿಯಲ್ಲಿ ಮೊಳಕಾಲೂರಿ ಕುಳಿತ. ಆತನ ಎದುರಿಗಿನ ಪುಟ್ಟ ಮೇಜಿನ ಮೇಲೆ ಆತ ಬರೆಯುವುದಕ್ಕೆಂದು ಹರಡಿದ್ದ ಸರಂಜಾಮು. ವಾಂಕಾ ಬರೆಯಲಾರಂಭಿಸಿದ:

''ನನ್ನ ಪ್ರೀತಿಯ ತಾತ, ಕಾನಸ್ಟಂಟಿನ್ ಮಾಕರಿಚ್. ಕ್ರಿಸ್‌ಮಸ್ ಹಬ್ಬದ ಪ್ರಯುಕ್ತ ಈ ಓಲೆಯನ್ನು ಬರೆಯುತ್ತಿದ್ದೇನೆ. ನಿನಗಾಗಿ ನಾನು ದೇವರಲ್ಲಿ ದಿನವೂ ಪ್ರಾರ್ಥನೆ



ಮಾಡುತ್ತಿದ್ದೇನೆ... ನನಗಾದರೂ ಯಾರಿದ್ದಾರೆ? ಅಪ್ಪ, ಅಮ್ಮ ಇಬ್ಬರೂ ಇಲ್ಲ; ಉಳಿದವನು ನೀನು ಮಾತ್ರ....''

ಎಳೆಯ ವಾಂಕಾನ ಕಣ್ಣು ತುಂಬಿಬಂದು, ಒಂದು ಕ್ಷಣ ಆತನಿಗೆ ಮುಂದಿನ ಅಕ್ಷರಗಳನ್ನು ಬರೆಯಲಾಗದೆ - ತನ್ನ ದೃಷ್ಟಿಯನ್ನು ಕಿಟಕಿಯೆಡೆಗೆ ಹಾಕಿದ. ಕಿಟಕಿಯ ಗಾಜಿನಲ್ಲಿ ಚಿಕ್ಕದಾಗಿ ಉರಿಯುತ್ತಿದ್ದ ದೀಪದ ಪ್ರತಿಬಿಂಬವನ್ನು ಕಂಡ. ಆ ಮಂದ ಪ್ರತಿಬಿಂಬದಾಚೆ ಆತನ ಕಲ್ಪನಾಲೋಕ ಪಸರಿಸಿ, ಆ ಲೋಕದಲ್ಲಿ ಆತನಿಗೆ ಮೊದಲು ಕಣ್ಣಿಗೆ ಬಿದ್ದದ್ದು ಆತನ ತಾತ. ಕಾನಸ್ಟಂಟಿನ್ ಮಾಕರಿಚ್ ದೂರದ ಊರಿನಲ್ಲಿ ಝಿವಾರೋವ್ ಧಣಿಯರ ಬಂಗಲೆಯ ಕಾವಲುಗಾರನಾಗಿದ್ದ. ಅರವತ್ತೈದು ವರ್ಷಗಳಾಗಿದ್ದರೂ ಆತನಲ್ಲಿಯ ಜೀವನೋತ್ಸಾಹ ಬತ್ತಿರಲಿಲ್ಲ. ಸದಾ ಹಸನ್ಮುಖಿಯಾಗಿರುತ್ತಿದ್ದ ಆತ ತನ್ನ ಸುತ್ತಲಿರುವವರನ್ನೂ ಖುಷಿಯಲ್ಲಿಡುತ್ತಿದ್ದ. ಹಗಲು ಅಡುಗೆ ಮನೆಯ ಹಿಂದಿನ ಕೋಣೆಯಲ್ಲಿ ಮಲಗುತ್ತಲೋ - ಇಲ್ಲ ಆ ಅಡುಗೆಯವರ ಸಂಗಡ ಹರಟುತ್ತಲೋ ಕಳೆದುಬಿಡುತ್ತಿದ್ದ. ರಾತ್ರಿ ಆಯಿತೆಂದರೆ ಉಣ್ಣೆಯ ನಿಲುವಂಗಿಯನ್ನು ಧರಿಸಿ, ಬಂಗಲೆಯ ಸುತ್ತಲೂ ತನ್ನ ಕೋಲಿನ ಶಬ್ದವನ್ನು ಮಾಡುತ್ತ ಕಾವಲು ಕಾಯುತ್ತಿದ್ದ. ಆತನ ಹಿಂದೆ ಆತನ ಎರಡು ಅತ್ಯಂತ ವಿಧೇಯ ನಾಯಿಗಳೂ ಬೆನ್ನು ಹತ್ತುತ್ತಿದ್ದವು. ಕಷ್ಟಂಕಾ ಸುಮಾರು ವಯಸ್ಸಾದ ನಾಯಿ; ಇನ್ನೊಂದು ಈಲ್. ಇದು ಒಂದು ತರಹ ವಿಚಿತ್ರವಾದ ನಾಯಿ. ತನ್ನ ಉದ್ದವಾದ ಕಪ್ಪು ಕೂದಲಿನಿಂದ, ಗಂಭೀರವಾದ ಚಹರೆಯಿಂದ, ನೋಡುಗರ ಮೇಲೆ ಒಳ್ಳೆಯ ಛಾಪು ಬೀರಿದರೂ, ಹೊಂಚು ಹಾಕಿ ತನಗೆ ಬೇಕಾದ್ದನ್ನು ಹೊಡೆದುಕೊಳ್ಳುವುದರಲ್ಲಿ ಅಷ್ಟೇ ಪ್ರಚಂಡ. ಈ ಕಾರಣಕ್ಕಾಗಿಯೆ ಸಾಕಷ್ಟು ಹೊಡೆತಗಳನ್ನು ತಿಂದಿದ್ದರೂ, ಅದರ ಪರಿವೆಯೇನೂ ಇಲ್ಲ.... ತಾತ ಬಹುಶಃ ಈಗ ಬಂಗಲೆಯ ಗೇಟಿನ ಮುಂದೆ ನಿಂತುಕೊಂಡು ದೂರದಲ್ಲಿಯ ಚರ್ಚಿನ ಪ್ರಕಾಶಮಾನವಾದ ಬೆಳಕನ್ನು ನೋಡುತ್ತಿರಬಹುದು. ಅಥವಾ ತನ್ನ 'ಹಿಂಬಾಲಕ'ರನ್ನು ಮಾಮೂಲಿ ಗೋಳು ಹುಯ್ಯುತ್ತಿರಬಹುದು; ಅಥವಾ ಅಡುಗೆಮನೆಯ ಕೆಲಸದವಳ ಸಂಗಡ ಹರಟುತ್ತಿರಬಹುದು. ತನ್ನ ನಶ್ಯದ ಡಬ್ಬದಿಂದ ಒಂದು ಚಿಟಿಕೆ ತೆಗೆದು ಅವಳಿಗೂ ಕೊಡುತ್ತ- 'ಹೂಂ, ಏರಿಸು ನೀನೂ' ಎಂದು ಒತ್ತಾಯಿಸಲು, ಅವಳದನ್ನು ಏರಿಸಲು, ಸಹಜವಾಗಿಯೇ ಸೀನಲು, ಈತ ಜೋರಾಗಿ ನಗುತ್ತ ''ಕಟ್ಟಿಕೊಂಡ ಮೂಗಿಗೆ ಒಳ್ಳೆಯದು'' ಎನ್ನುವವ.... ನಂತರ ತನ್ನ ಎರಡೂ ನಾಯಿಗಳಿಗೂ ಒಂದು ಚಿಟಿಕೆ ಕೊಡುವವ. ಕಷ್ಟಂಕಾ ಫಟ್ಟನೆ ಸೀನಿ, ತನ್ನ ಪಾಡಿಗೆ ತಾನು ನುಸುಳಿಕೊಳ್ಳಬಹುದು. ಆದರೆ ಗಂಭೀರ ಚೆಹರೆಯ ಈಲ್ ಸೀನಲೂ ಮುಜುಗರಪಟ್ಟು, ತನ್ನ ಬಾಲವನ್ನಷ್ಟೆ ಆಡಿಸಬಹುದು... ಹೊರಗಡೆ ವಾತಾವರಣ ಮಾತ್ರ ಅದ್ಭುತವಾಗಿತ್ತು. ಮರುದಿನದ ಕ್ರಿಸ್‌ಮಸ್‌ಗಾಗಿ ಇಡೀ ಊರೇ ಇನ್ನೂ ಎಚ್ಚರವಿರಬಹುದು. ಹಿಮಾಚ್ಛಾದಿತ ಛಾವಣಿಗಳು, ಸ್ವಚ್ಛ ಆಕಾಶದ ಹಿನ್ನಲೆಯಲ್ಲಿ, ಬಿಳಿ ಬಣ್ಣ ಬಳೆದುಕೊಂಡಂತೆ ಕಾಣುತ್ತಿದ್ದವು....

ವಾಂಕಾ ಒಂದು ಕ್ಷಣ ನಿಟ್ಟುಸಿರು ಬಿಟ್ಟ; ದೌತಿಯಲ್ಲಿ ಪೆನ್ನನ್ನು ಅದ್ದಿ ಮತ್ತೆ ಬರೆಯಲಾರಂಭಿಸಿದ :

''ನಿನ್ನೆಯೆ, ತಾತ, ನನಗೆ ಅಪಾರ ಹಿಂಸೆಯಾಯ್ತು. ಯಜಮಾನ ನನ್ನ ಕಿವಿ ಹಿಂಡುತ್ತ ಹೊರಗೆಳೆದು ಬಾರುಕೋಲಿನಿಂದ ನಾಲ್ಕು ಬಾರಿಸಿಯೇ ಬಿಟ್ಟ ! ನನ್ನ ತಪ್ಪು ಏನು ಗೊತ್ತಾ ? ನಿದ್ರೆಯಲ್ಲಿ ಗೊತ್ತಾಗದೆ ಅವರ ಮಗುವಿನ ತೊಟ್ಟಿಲನ್ನು ತಳ್ಳಿದ್ದೆ. ಅದು ನನ್ನ ತಪ್ಪಾ ? ನೀನೇ ಹೇಳು. ಇನ್ನು, ಒಡತಿಯೂ ಅಷ್ಟೆ ! ನಾನು ತರುವ ಮೀನುಗಳನ್ನು ನನ್ನ ಮುಖಕ್ಕೆ ಎಸೆಯುತ್ತಾಳೆ. ನನ್ನೊಂದಿಗಿರುವ ಇತರ ಹುಡುಗರು ನನ್ನನ್ನ ಗೇಲಿ ಮಾಡುವುದಕ್ಕೆ ಮಿತಿಯೇ ಇಲ್ಲ. ಮದ್ಯದಂಗಡಿಗೆ ಹೋಗಿ ವೋಡ್ಕಾ ತರುವಂತೆಯೋ ಇಲ್ಲ ಯಜಮಾನರ ಮನೆಯಲ್ಲಿರುವುದನ್ನು ಕಳವು ಮಾಡುವಂತೆಯೋ ಪುಸಲಾಯಿಸುತ್ತಾರೆ.

ಯಜಮಾನನಿಗೆ ಇದರ ಸ್ವಲ್ಪ ಸುಳಿವು ಸಿಕ್ಕರೂ ಸಾಕು; ಕೈಗೆ ಸಿಕ್ಕಿದ್ದನ್ನು ತೆಗೆದುಕೊಂಡು ಅದರಿಂದ ಹೊಡೆಯುತ್ತಾನೆ. ಮತ್ತೆ ನನಗೆ ತಿನ್ನಲು ಏನೂ ಸಿಗುವುದಿಲ್ಲ; ಬರಿ ಬ್ರೆಡ್ ತುಂಡುಗಳು ಮಾತ್ರ. ಇನ್ನು ಉಳಿದದ್ದನ್ನೆಲ್ಲ ಆ ಧಾಂಡಿಗರೆ ಕಬಳಿಸಿಬಿಡುತ್ತಾರೆ. ರಾತ್ರಿ, ನನಗೆ ಮಗು ಮಲಗುವ ಕೋಣೆಯ ಮೂಲೆಯಲ್ಲಿ 'ಬಿದ್ದು'ಕೊಳ್ಳಲು ಹೇಳುತ್ತಾರೆ. ರಾತ್ರಿಯೆಲ್ಲ ಆ ಮಗು ಅಳುತ್ತಲೇ ಇರುವುದು... ನನಗೆ ನಿದ್ರೆಯೇ ಆಗುವುದಿಲ್ಲ. ತಾತ... ನನ್ನ ಪ್ರೀತಿಯ ತಾತ... ದಯವಿಟ್ಟು ನನ್ನನ್ನು ಇಲ್ಲಿಂದ ಕರೆದುಕೊಂಡು ಹೋಗು. ಇಲ್ಲ ನಾನು ಸತ್ತೇ ಹೋಗಬಹುದು.''

ವಾಂಕಾಗೆ ದುಃಖವುಕ್ಕಿ ಕಣ್ತುಂಬ ನೀರು ಬರಲು, ತನ್ನ ಮೊಳಕೈಯಿಂದ ಕಣ್ಣೊರಿಸಿಕೊಂಡು ಮತ್ತೆ....

''ತಾತ, ಅಲ್ಲಿ ನೀನು ಹೇಳಿದ ಕೆಲಸ ಮಾಡುತ್ತೇನೆ. ನಿನಗೆ ನಸ್ಯವನ್ನು ತರುವೆ. ನಿನ್ನ ಸಲುವಾಗಿ ಜೀಸಸ್‌ನಲ್ಲಿ ಪ್ರಾರ್ಥನೆ ಮಾಡುವೆ. ತುಂಟತನ ಮಾಡಿದರೆ ನಿನ್ನ ಮನಸ್ಸಿಗೆ ಬಂದಂತೆ ಶಿಕ್ಷಿಸು. ಅಲ್ಲಿ ನನಗೆ ಮಾಡಲು ಯಾವ ಕೆಲಸವೂ ಇಲ್ಲ ಅಂದರೆ, ನಾನೇ ಹೋಗಿ ಮೇನೇಜರ್ ಕಾಲಿಗೆ ಬಿದ್ದು ಅವರ ಬೂಟುಗಳನ್ನು ಪಾಲಿಶ್ ಮಾಡುವ ಕೆಲಸ ಮಾಡುತ್ತೇನೆ. ಏನಾದರೂ ಮಾಡಿ ಕೆಲ ಕೋಪೆಕ್ ತರುತ್ತೇನೆ. ನಿನಗೆ ಸ್ವಲ್ಪವೂ ಕಷ್ಟ ಕೊಡುವುದಿಲ್ಲ. ನನಗೆ ಇಲ್ಲಿ ಮಾತ್ರ ಇರಲು ಆಗದು. ಎಷ್ಟೋ ಸಲ ಇಲ್ಲಿಂದ ಓಡಿಹೋಗಬೇಕು ಅಂದುಕೊಳ್ಳುತ್ತೇನೆ. ಆದರೆ ನನಗೆ ಬೂಟುಗಳಿಲ್ಲ. ಈ ಬರ್ಫಿನಲ್ಲಿ ಬಿರುಗಾಳಿನಲ್ಲಿ ಹೇಗೆ ನಡೆಯಲಿ?... ತಾತ ನಾನು ದೊಡ್ಡವ ಆದ ಮೇಲೆ ನಿನ್ನನ್ನು ಚೆನ್ನಾಗಿ ನೋಡಿಕೋತೇನೆ. ಯಾರು ಏನೂ ಅನ್ನಲೂ ಬಿಡುವುದಿಲ್ಲ. ನೀನು ಸತ್ತ ಮೇಲೆ, ನನ್ನ ಅಮ್ಮನ ಸಲುವಾಗಿ ಪ್ರಾರ್ಥನೆ ಮಾಡುವಂತೆ ನಿನ್ನ ಸಲುವಾಗಿಯೂ ಪ್ರಾರ್ಥಿಸುತ್ತೇನೆ....

''ತಾತ, ಈ ಮಾಸ್ಕೋ ತುಂಬ ತುಂಬ ದೊಡ್ಡ ಊರು. ಊರು ತುಂಬೆಲ್ಲ ದೊಡ್ಡ ದೊಡ್ಡ ಬಂಗಲೆಗಳು. ಅಲ್ಲಿಯ ದೊಡ್ಡ ಮನುಷ್ಯರಿಗೆ ಬೇಕಾದಷ್ಟು ಕುದುರೆಗಳು. ನಮ್ಮೂರಿನಲ್ಲಿರುವಂತೆ ಇಲ್ಲಿ ಕುರಿಗಳು ಇಲ್ಲವೆ ಇಲ್ಲ... ಮತ್ತೆ ಇಲ್ಲಿಯ ನಾಯಿಗಳೂ ಬಹಳ ಸಾಧು!.... ನನಗೆ ಚರ್ಚಿನಲ್ಲಿ ಹಾಡಲು ಬಿಡುವುದೇ ಇಲ್ಲ. ತಾತ, ಇನ್ನೊಂದು ಸಮಾಚಾರ, ಮೊನ್ನೆ ಒಂದು ಅಂಗಡಿಯಲ್ಲಿ ಸಾಲುಸಾಲಾಗಿ ಬೇರೆ ಬೇರೆ ಥರದ ಮೀನಿನ ಬಲೆಗಳನ್ನು ನೋಡಿದೆ. ಬಂದೂಕಿನ ಅಂಗಡಿಯನ್ನು ನೋಡಿದೆ. ನನ್ನ ಯಜಮಾನನ ಮನೆಯಲ್ಲೂ ಅಂಥದೇ ಇದೆ. ನೂರು ರೂಬಲ್ ಇರಬಹುದೇನೋ ಅದರ ಬೆಲೆ.

''ಪ್ರೀತಿಯ ತಾತ.. ಅಲ್ಲಿ ಕ್ರಿಸ್‌ಮಸ್ ಗಿಡ ಸಿಂಗರಿಸಿದ ಮೇಲೆ, ನನಗೂ ಮಿಠಾಯಿ ತೆಗೆದು ನನ್ನ ಹಸಿರು ಸಂದೂಕಿನಲ್ಲಿಡು. ಮಿಸ್ ಓಗ್ಲಾಗೆ 'ಇದು ವಾಂಕಾಗೆ' ಎಂದು ಹೇಳು....''

ವಾಂಕಾ ಇನ್ನೊಮ್ಮೆ ನಿಟ್ಟುಸಿರು ಬಿಟ್ಟು- ಕಿಟಕಿಯಿಂದಾಚೆ ದೃಷ್ಟಿ ಹರಿಸಿದ. ಆತನ ಕಣ್ಮುಂದೆ ತಾನು, ತನ್ನ ತಾತ ಕ್ರಿಸ್‌ಮಸ್‌ಗಿಡ ತರಲು ಹೋಗುತ್ತಿದ್ದ ಚಿತ್ರ ಸ್ಪಷ್ಟವಾಗಿ ಬಂದಿತು. ತಾನೆಷ್ಟು ಖುಷಿಯಾಗಿರುತ್ತಿದ್ದೆ ಆಗ! ಆ ಚಿಕ್ಕ ಚಿಕ್ಕ ಗಿಡಗಳ ಮುಂದೆ ನಿಂತು ತಾತ ಮಾಡಿದಂತೆಯೇ ತಾನೂ ಮಾಡುತ್ತಿದ್ದ. ಗಿಡಗಳನ್ನು ಕತ್ತರಿಸುವ ಮೊದಲು ತಾತ ಒಂದು ಚಿಟಿಕೆ ನಸ್ಯವನ್ನೇರಿಸಿ, ತನ್ನೆದುರಿಗೆ ಛಳಿಯಿಂದ ನಡುಗುತ್ತಿದ್ದ ತನ್ನನ್ನು ನೋಡಿ ಫಕ್ಕನೆ ನಕ್ಕುಬಿಡುತ್ತಿದ್ದ. ಪಾಪ, ಆ ಚಿಕ್ಕ ಗಿಡಗಳು ತಮ್ಮ ಸಾವಿನ ನಿರೀಕ್ಷೆಯಲ್ಲಿರುವಂತೆ, ತಾತ ಕಡಿಯುವುದನ್ನು ಕಾಯುತ್ತಿರುವಂತೆ ಭಾಸವಾಗುತ್ತಿದ್ದವು... ಆಮೇಲೆ ಆ ಗಿಡಗಳನ್ನೆಳೆದುಕೊಂಡು ಧಣಿಯ ಮನೆಗೆ ಬರುವುದು. ಎಲ್ಲರೂ ಸೇರಿ ಅದನ್ನು ಸಿಂಗರಿಸುವ ಸಡಗರ. ಅದರಲ್ಲಿಯಂತೂ ಮಿಸ್ ಓಗ್ಲಾಳದೆ ಪ್ರಮುಖ ಪಾತ್ರ. ಅದೇನೊ, ವಾಂಕಾಗೂ ಅವಳನ್ನು ಕಂಡರೆ ತುಂಬ ಇಷ್ಟ. ತನ್ನ ತಾಯಿ ಆ ಮನೆಯಲ್ಲಿ ಕೆಲಸಕ್ಕಿದ್ದಾಗ, ತನಗೆ ಈ ಓಗ್ಲಾ ಮಿಠಾಯಿಗಳನ್ನು ಕೊಟ್ಟು ಮುದ್ದು ಮಾಡಿದ್ದಳು. ಅಷ್ಟೇ ಅಲ್ಲ - ತನಗೆ ಓದಲು, ಬರೆಯಲು ಕಲಿಸುವ ಪ್ರಯತ್ನವನ್ನೂ ಮಾಡಿದ್ದಳು. ಆದರೆ ತನ್ನ ಅಮ್ಮ ಹೋದ ಮೇಲೆ ಇದಕ್ಕೆಲ್ಲ ಕೊನೆಯಾಗಿತ್ತು. ಅನಾಥನಾದ ತಾನು ತಾತನ ಹತ್ತಿರ, ಆಮೇಲೆ ಅಲ್ಲಿಂದ ಮಾಸ್ಕೋ, ಈಗ ಈ ಅಲ್ಯಾಖಿನ್ ಮೋಚಿಯ ಹತ್ತಿರ....

''ತಾತ, ನಿನಗೆ ಬೇಡಿಕೋತೇನೆ - ದಯವಿಟ್ಟು ಬೇಗನೆ ಬಾ. ನನ್ನನ್ನು ಕರೆದುಕೊಂಡು ಹೋಗು. ನಾನು ಅನಾಥ - ನನಗೆ ಇಲ್ಲಿ ಯಾವಾಗಲೂ ಹಸಿವು - ಬಳಲಿಕೆ. ನನ್ನ ಯಜಮಾನ ನನ್ನನ್ನ ಹೊಡೆಯುವುದಕ್ಕಂತೂ ಮಿತಿಯೇ ಇಲ್ಲ. ಮೊನ್ನೆ ಮೊನ್ನೆ ಆತ ನನ್ನ ತಲೆಯ ಮೇಲೆ ಬಲವಾಗಿ ಅಪ್ಪಳಿಸಿದ. ಕೆಳಗೆ ಬಿದ್ದುಬಿಟ್ಟಿದ್ದ ನಾನು ಏಳುವುದೇ ಇಲ್ಲ ಅಂದುಕೊಂಡಿದ್ದೆ. ಆದರೆ ನನ್ನ ದುರ್ದೈವ, ಬದುಕಿದೆ. ನಾಯಿಗಿಂತಲೂ ಕಡೆ ನನ್ನ ಬದುಕು ಇಲ್ಲಿ....

''ತಾತ, ಯಿಗೋರ್‌ಗೆ ನಾನು ಕೇಳಿದೆ ಎಂದು ಹೇಳು.

ತಾತ, ದಯವಿಟ್ಟು ಬೇಗ ಬಾ.'' ''ನಿನ್ನ **ಪ್ರೀತಿಯ ಮೊಮ್ಮಗ ಇವಾನ್ ಜುಕೋವ್.**

ಇಷ್ಟು ಬರೆದಾದ ಮೇಲೆ ವಾಂಕಾ ಒಲೆಯನ್ನು ಮಡಚಿ ಹಿಂದಿನ ದಿನ ಒಂದು ಕೋಪೆಕ್ ಕೊಟ್ಟು ತಂದಿದ್ದ ಲಕೋಟೆಯಲ್ಲಿ ಹಾಕಿದ... ಒಂದು ಕ್ಷಣ ಯೋಚಿಸಿ ಮತ್ತೆ ದೌತಿಯಲ್ಲಿ ಪೆನ್ನನ್ನು ಅದ್ದಿ ಲಕೋಟೆಯ ಮೇಲೆ ''ತಾತನಿಗೆ-'' ಎಂದು ಬರೆದ. ಮತ್ತೆ ತಲೆ ತುರಿಸಿಕೊಂಡು, ಏನೋ ವಿಚಾರ ಹೊಳೆದಂತಾಗಿ,

''ಕಾನ್‌ಸ್ಟಾಂಟಿನ್ ಮಾಕರಿಚ್. ನನ್ನೂರು'' ಎಂದು ಸೇರಿಸಿದ.

'ಇಷ್ಟು ಬರೆದು ಮುಗಿಸಿದೆನಲ್ಲ- ಏನೂ ತಡೆಯಾಗಲಿಲ್ಲ-' ಎಂದು ಖುಷಿಪಟ್ಟು, ತಲೆಯ ಟೋಪಿ ಹಾಕಿಕೊಂಡವನೆ ಓಡಲಾರಂಭಿಸಿದ. ಆತ ಮೊನ್ನೆ ಹೊರಗಡೆ ಹೋಗಿದ್ದಾಗ ಎದುರಿಗಿನ ಅಂಗಡಿಯವರು ಟಪ್ಪಾಲು ಡಬ್ಬದ ಬಗ್ಗೆ, ಅವುಗಳಲ್ಲಿ ಹಾಕಿದ ಒಲೆಗಳು ಕುದುರೆ ಸವಾರರಿಂದ ದೂರ ದೂರ ಹಂಚಲ್ಪಡುವುದರ ಬಗ್ಗೆ ಹೇಳಿದ್ದರು. ವಾಂಕಾ ಓಡುತ್ತ ಹತ್ತಿರದ ಡಬ್ಬದಲ್ಲಿ ತನ್ನ ಅತ್ಯಮೂಲ್ಯವಾದ ಒಕ್ಕಣಿಕೆಯನ್ನು ತೂರಿಸಿದ.

.....

ಮುಂದೆ ಒಂದು ಗಂಟೆಯ ನಂತರ ಗಾಢವಾದ ನಿದ್ರೆಯಲ್ಲಿ ಮುಳುಗಿದ ವಾಂಕಾ ತನ್ನ ಕನಸಿನಲ್ಲಿ ಒಂದು ಅಡುಗೆ ಮನೆ, ಅಲ್ಲಿ ತಾತ ತನ್ನ ಒಲೆಯನ್ನು ಓದಿ ತೋರಿಸುತ್ತಿದ್ದಾನೆ. ಪಕ್ಕದಲ್ಲಿ ಈಲ್ ತನ್ನ ಬಾಲ ಅಲ್ಲಾಡಿಸುತ್ತ ಓಡಾಡುತ್ತಿದ್ದಂತೆ ಕಂಡ.

ಪ್ರಮೋದ ಮುತಾಲಿಕ
[illegible]

# ಸರ್ವಾಧಿಕಾರಿಯ ದುಃಸ್ವಪ್ನಗಳು

*ಡಿಸೆಂಬರ್ 10 ಮಾನವ ಹಕ್ಕುಗಳ ದಿನ, ವಿಶ್ವಸಂಸ್ಥೆಯು ಮಾನವ ಹಕ್ಕುಗಳ ಘೋಷಣೆಯನ್ನು ಅಂಗೀಕರಿಸಿದ ದಿನ. ಭಾರತವು ಆ ಘೋಷಣೆಗೆ ಸಹಿ ಹಾಕಿದೆ. ಮಾನವ ಹಕ್ಕುಗಳ ಹೆಸರಿನಲ್ಲಿ ಬೇರೆ ರಾಷ್ಟ್ರಗಳ ಮೇಲೆ ಮಿಲಿಟರಿ ದುರಾಕ್ರಮಣ ನಡೆಸಿರುವ ಅಮೆರಿಕಾ ಆ ಘೋಷಣೆಯನ್ನು ಅಧಿಕೃತವಾಗಿ ಅಂಗೀಕರಿಸಿಲ್ಲ. ಹಕ್ಕುಗಳನ್ನು ನೋಡುವ ರೀತಿಯಲ್ಲೂ ಭೇದವಿರುವುದು ಸಾಧ್ಯ. ವೋಲೆ ಸೋಯಿಂಕ ನೈಜೀರಿಯಾದ ಧೀಮಂತ ಸಾಹಿತಿ, ದೊಡ್ಡ ಹೋರಾಟಗಾರ. ಆತನ ವಿಚಾಸದ ಬಗ್ಗೆ ತಮಾಷೆಯ ಮಾತೊಂದಿದೆ. ಯಾವುದೋ ವಿಮಾನದಲ್ಲಿ, ಇಲ್ಲವೆ ನ್ಯೂಯಾರ್ಕಿನಲ್ಲಿ ವಿಶ್ವಸಂಸ್ಥೆಯ ಕಚೇರಿಯ ಅಂಗಳಗಳಲ್ಲಿ, ಎಂದು. ತನ್ನ ದೇಶದಲ್ಲಿ ಮಿಲಿಟರಿ ಸರ್ವಾಧಿಕಾರದ ವಿರುದ್ಧ ದಿಟ್ಟತನದಿಂದ ಜನರನ್ನು ಸಂಘಟಿಸಿ, ಇಡೀ ವಿಶ್ವಕ್ಕೆ ಮಾನವ ಹಕ್ಕುಗಳ ಆದ್ಯತೆ ಬಗ್ಗೆ ತಿಳುವಳಿಕೆ ನೀಡಿದ, ನೀಡುತ್ತಿರುವ, ಬಹು ಎತ್ತರದ ವ್ಯಕ್ತಿತ್ವದ ವೋಲೆ ಸೋಯಿಂಕ ಸಾಹಿತ್ಯ ಕ್ಷೇತ್ರದಲ್ಲಿ ದಿಗ್ಗಜನಾಗಿರುವಂತೆ ಮಾನವ ಹಕ್ಕುಗಳಿಗಾಗಿ ನಡೆಯುವ ಹೋರಾಟದಲ್ಲೂ ಅಪ್ರತಿಮನೆನಿಸಿದ್ದಾನೆ. ಅವರ ಒಂದು ಲೇಖನದ ಸಂಗ್ರಹ ಇಲ್ಲಿದೆ.*

ಒಂದು ಸಹಸ್ರಮಾನದಿಂದ ಇನ್ನೊಂದು ಸಹಸ್ರಮಾನದತ್ತ ನಮ್ಮ ಜಗತ್ತು ಹೆಜ್ಜೆ ಇಡುತ್ತಿರುವ ಈ ಸಂದರ್ಭದಲ್ಲಿ ಮಾನವ ಬದುಕಿನ ಮೇಲೆ ತೀವ್ರ ಪರಿಣಾಮ ಬೀರಿದ ಕೆಲವು ಮಹತ್ತರ ಬೆಳವಣಿಗೆಗಳನ್ನು ಐತಿಹಾಸಿಕವಾಗಿ ವಿಮರ್ಶೆಗೆ ಒಳಮಾಡುವುದು ಅತ್ಯಗತ್ಯವಾಗಿದೆ. ಈ ನಿಟ್ಟಿನಲ್ಲಿ ಹೆಸರಿಸಲೇಬೇಕಾದ ಅತ್ಯಂತ ಅಪಾಯಕಾರಿ ಹಾಗೂ ಪ್ರತಿಗಾಮಿ ವಿಷಯವೆಂದರೆ ಕಳೆದ ಸಹಸ್ರ ವರುಷಗಳಲ್ಲಿ ಆಗಿಂದಾಗ್ಗೆ ಇಡೀ ಜಗತ್ತಿಗೆ ಮಾರಕ ಶಕ್ತಿಯಾಗಿ ಪ್ರಳಯತಾಂಡವ ವಾಡುತ್ತಿರುವ ಮತಾಂಧತೆ, ಜಡ್ಡುತನ. ಆದರೆ ಇದಕ್ಕೆ ವಿರುದ್ಧವಾಗಿ ಮನುಕುಲದ ಆಕಾಂಕ್ಷೆಗಳಿಗೆ ಒಗ್ಗೊಡುವಂತೆ ಕೆಲವು ಮಾನವೀಯ ಚಿಂತನೆಗಳು ಅಲ್ಲಲ್ಲಿ ಅರಳಿ ಕೊಂಡಿವೆ. ಅದರಲ್ಲಿ ಎದ್ದು ಕಾಣುವಂಥದು ಮಹಾತ್ಮ ಗಾಂಧಿ ಹಾಗೂ ಮಾರ್ಟಿನ್ ಲೂಥರ್ ಕಿಂಗ್ ಅವರಂತಹವರ ವಿಚಾರಧಾರೆ. ನಾಗರಿಕತೆ ಮುಂದುವರೆದಂತೆ ಸಾಮುದಾಯಿಕ ಚಿಂತನೆ, ಪರಸ್ಪರ ವಿಚಾರ ವಿನಿಮಯ, ಸಂಪರ್ಕಗಳೂ ಬೆಳೆದು ಜ್ಞಾನದ ವಿಕಾಸಕ್ಕೆ ಸಹಾಯಕವಾಗಿವೆ. ಈ ಪ್ರಕ್ರಿಯೆಯಲ್ಲಿ ವ್ಯಕ್ತಿ ಸ್ವಾತಂತ್ರ್ಯ ಮತ್ತು ಮೂಲಭೂತ ಹಕ್ಕುಗಳು, ಮಾನವ ಹಕ್ಕುಗಳು ಜನ್ಮಸಿದ್ಧವಾದವು ಎಂಬ ಉದಾತ್ತ ಕಲ್ಪನೆ ಈ ಸಹಸ್ರಮಾನದ ಬಹುಶ್ರೇಷ್ಠ ಕೊಡುಗೆ ಎನ್ನುವುದರಲ್ಲಿ ಎರಡು ಮಾತಿಲ್ಲ.

ಹಲವಾರು ಮೂಲಭೂತ ಮೌಲ್ಯಗಳನ್ನು ತನ್ನದಾಗಿಸಿಕೊಳ್ಳಲು ಮನುಕುಲ ಸಂಘರ್ಷಗಳನ್ನು ನಿರಂತರವಾಗಿ ನಡೆಸುತ್ತಲೇ ಬಂದಿದೆ. ಮಾನವನ ಪ್ರಕೃತಿಯೂ ಹಾಗೆಯೇ. ಹಾಳು ಬೀಳುತ್ತಿರುವ ಕಟ್ಟುಪಾಡುಗಳ ಹಾಗೂ ಹಳಸು ಸಂಪ್ರದಾಯಗಳ ವಿರುದ್ಧ ಸಿಡಿದೆದ್ದು ಅವನು ತನ್ನತನವನ್ನು ಗುರುತಿಸಿಕೊಳ್ಳಲು ರೂಪಿಸಿಕೊಂಡಿರುವ ಚಿಂತನಾಶೀಲತೆ ಮತ್ತು ಹೋರಾಟದ ಹಾದಿ ಅವನ ಸಹಜ ಪ್ರತಿಕ್ರಿಯೆ ಎನ್ನಬಹುದು.

**ರಾಜಾ ಪ್ರತ್ಯಕ್ಷದೇವತಾ ?**

ಸಮಾಜದ ವಿಕಾಸವನ್ನು ಗಮನಿಸಿದರೆ ಪ್ರತಿಯೊಂದು ಹಂತದಲ್ಲಿಯೂ ವ್ಯವಸ್ಥಿತ ಜನಸಮುದಾಯಗಳು ರೂಪುಗೊಂಡಿರುವುದನ್ನು ಕಾಣುತ್ತೇವೆ. ಒಬ್ಬ ಮುಖ್ಯಸ್ಥ, ಆಳುವವ. ರಾಜನೆಂದುಕೊಳ್ಳಿ. ಆ ಮುಖ್ಯಸ್ಥನಿಗೇ ಆಡಳಿತ ನಡೆಸುವ ಅಧಿಕಾರ. ಮೊದಮೊದಲು ಮಾರ್ಗದರ್ಶಕನಾಗಷ್ಟೇ ಇದ್ದ ಅವನಿಗೆ ಕಾಲಕ್ರಮೇಣ ಎಲ್ಲ ವಲಯಗಳಲ್ಲೂ ನಿರಂಕುಶ ಅಧಿಕಾರ ನೀಡಲ್ಪಟ್ಟಿತು.

*ಕಾಲ ಚಕ್ರ ಉರುಳುತ್ತಲೇ ಇರುತ್ತದೆ. ಅಂತೆಯೇ ಆ ಪ್ರಕ್ರಿಯೆಗೆ ಹಾಸುಹೊಕ್ಕಾಗಿ ಮನುಕುಲದ ಏಳುಬೀಳುಗಳು ಜರುಗುತ್ತಿರುತ್ತವೆ. ಎಷ್ಟೋ ಕಟ್ಟುಪಾಡುಗಳು, ನಿರ್ಬಂಧಗಳು, ಮೌಲ್ಯಗಳು ನೆನೆಗುದಿಗೆ ಬೀಳುತ್ತವೆ. ಆತಂಕಕಾರಿ ಎನಿಸುವ ಭಯಂಕರ ಬೆಳವಣಿಗೆಗಳು ಪ್ರಗತಿಗೆ ಅಡ್ಡವಾಗಿ ನಿಲ್ಲುತ್ತವೆ. ಹೊಸ ಮತ್ತು ಆಶಾದಾಯಕ ಚಿಂತನೆಗಳು ಚಿಗುರಿಕೊಳ್ಳುತ್ತವೆ. ಅವುಗಳಲ್ಲಿ ವೈಯಕ್ತಿಕ ಸ್ವಂತಿಕೆ, ವ್ಯಕ್ತಿ ಸ್ವಾತಂತ್ರ್ಯ ಮತ್ತು ಸಾಮುದಾಯಿಕ ಮೂಲಭೂತ ಹಕ್ಕುಗಳು ಪ್ರಾಮುಖ್ಯವೆನಿಸಿಕೊಂಡಿವೆ. ಸರ್ವಾಧಿಕಾರಿ ಮತ್ತು ದಮನಕಾರಿ ಶಕ್ತಿಗಳು ಅವುಗಳನ್ನು ಎಷ್ಟೇ ಹತ್ತಿಕ್ಕಲು ಪ್ರಯತ್ನಿಸಿದರೂ ಮತ್ತೆ ಮತ್ತೆ ಪುಟಗೊಳ್ಳುತ್ತಲೇ ಇರುತ್ತವೆ. ಈ ಪ್ರಕ್ರಿಯೆ ಮನುಕುಲಕ್ಕೆ ಹೊಸ ಹೊಸ ಸವಾಲುಗಳನ್ನು ತಂದುಕೊಡುವ ಪ್ರಸಂಗಗಳು ಇತಿಹಾಸದ ಪುಟಗಳಲ್ಲಿ ತುಂಬಿಹೋಗಿವೆ. ಅಲ್ಲಿ ಆವಿರ್ಭವಿಸುವ ಸಂಘರ್ಷಗಳೇ ಮನುಕುಲದ ಹೊಸ ಕನಸುಗಳಿಗೆ ಕಾರಣವಾಗುವುದು ನಿಜಕ್ಕೂ ಒಂದು ಕುತೂಹಲಕಾರಿ ಅಂಶ.*

ಅವನು ಸಾಮಾನ್ಯ ಜನರ ಕಣ್ಣಿಗೆ ಬೀಳಬಾರದು, ಅವರೊಂದಿಗೆ ನೇರವಾಗಿ ಮಾತನಾಡಲೂಬಾರದು, ಎಂದೆಲ್ಲ ನಿರೂಪಿಸಿ ಅವನನ್ನು ಒಬ್ಬ ದೇವತೆಯ ಮಟ್ಟಕ್ಕೆ ಏರಿಸಲಾಯಿತು. ಆರಂಭದಲ್ಲಿ ಅವನೂ ತನಗೆ ಇಷ್ಟೆಲ್ಲ ಅಧಿಕಾರವಿದ್ದರೂ ತಾನೊಬ್ಬ ಜನತಾ ಸೇವಕನೆಂದಷ್ಟೇ ಬಗೆದು ಅದರ ಹಿತಕ್ಕಾಗಿ ದುಡಿಯುತ್ತಿದ್ದ, ಹಾಗೆ ಜನಸೇವೆ ಮಾಡುತ್ತ ರಾಜರ್ಷಿಗಳೆಂದು ಹೆಸರು ತಳೆದ ಅನೇಕ ನಿದರ್ಶನಗಳೂ ಇತಿಹಾಸದಲ್ಲುಂಟು.

ಹೀಗೆ ಸರ್ವಾಧಿಕಾರಿಯಾದರೂ ಅವನಿಗೂ ಕೆಲವು ಕಟ್ಟುಪಾಡು, ನಿಯಂತ್ರಣಗಳ ವ್ಯವಸ್ಥೆ ಇತ್ತು. ಇದಕ್ಕೆ ಒಂದು ಒಳ್ಳೆಯ ಉದಾಹರಣೆಯೆಂದರೆ, ಪಶ್ಚಿಮ ನೈಜೀರಿಯಾದ ಯೋರುಬಾ ಬುಡಕಟ್ಟಿನವರು. (ಆ ದೇಶದ ಇನ್ನೊಂದು ಪ್ರಮುಖ ಬುಡಕಟ್ಟು ಇಬೋ ಜನರದು). ಪುರಾತನವೆನಿಸಿದರೂ ಯೋರುಬಾಗಳ ಆಡಳಿತ ವ್ಯವಸ್ಥೆ, ರಾಜನ-ಪ್ರಜೆಗಳ ಸಂಬಂಧಗಳು ಬಹಳ ಅರ್ಥಪೂರ್ಣವಾಗಿವೆ. ಅವರ ನಡುವೆ ಇರುವ ಪರಸ್ಪರ ಜವಾಬ್ದಾರಿತನದ ವ್ಯವಹಾರ ಸೋಜಿಗವೆನಿಸುತ್ತದೆ. ಪ್ರಜೆಗಳ ತಪ್ಪುನೆಪ್ಪುಗಳು ಹಾಗಿರಲಿ, ರಾಜನೇ ತನ್ನ ಆಡಳಿತ ಕ್ರಮದಲ್ಲಿ ಎಡವಿದಲ್ಲಿ, ಪ್ರಜೆಗಳ ಹಿತಾಸಕ್ತಿಗಳ ವಿರುದ್ಧವಾಗಿ ವರ್ತಿಸಿದಲ್ಲಿ, ಜನರಿಂದ ಛೀಮಾರಿ ಹಾಕಿಸಿಕೊಂಡು ಅವರ ಗುಂಪಿನಿಂದಲೇ ಗಡಿಪಾರಿಗೆ ಗುರಿಯಾಗುತ್ತಿದ್ದ.

**ದುರುಪಯೋಗ**

ಆದರೆ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು, ಒತ್ತಾಯ ತಂದು ಈ ನಿರಂಕುಶ ಪ್ರಭುಗಳು ತಮ್ಮ ಏಕಸ್ವಾಮ್ಯತೆಯನ್ನು ಜನರ ಮೇಲೆ ಹೇರಿದ ನಿದರ್ಶನಗಳು ಇತಿಹಾಸದಲ್ಲಿ ಸಾಕಷ್ಟು ಕಾಣಬರುತ್ತವೆ.

ನೆಪೋಲಿಯನ್ ಇದಕ್ಕೆ ಒಂದು ಜ್ವಲಂತ ನಿದರ್ಶನ. ಜನಸಾಮಾನ್ಯರ ಹಿತಸಂರಕ್ಷಣೆಗಾಗಿ ಮಹಾಕ್ರಾಂತಿ ಜರುಗಿದ ಫ್ರಾನ್ಸಿನಲ್ಲಿಯೇ ನೆಪೋಲಿಯನ್‌ನಂಥವರು ಕಾಣಿಸಿಕೊಂಡುದು ಒಂದು ವಿಪರ್ಯಾಸವೆನ್ನಬಹುದು. ಇತ್ತೀಚೆಗೆ ಜರ್ಮನಿಯಲ್ಲಿ ಕಾಣಿಸಿಕೊಂಡ ಹಿಟ್ಲರನೂ ಇದಕ್ಕೆ ಮತ್ತೊಂದು ನಿದರ್ಶನ. ಇಡೀ ಜಗತ್ತಿನ ಮೇಲೆ ತನ್ನ ಸರ್ವಾಧಿಕಾರವನ್ನು ಸ್ಥಾಪಿಸಲು ಹವಣಿಸಿದ. ಇವನ ಫ್ಯಾಸಿಸ್ಟ್ ಕರಾಳ ಸಿದ್ಧಾಂತ ಜಗತ್ತನ್ನು ಎರಡನೆಯ ಮಹಾಯುದ್ಧದ ಘೋರ ಪ್ರಪಾತಕ್ಕೆ ತಳ್ಳಿತು. ಒಂದು ಜನಾಂಗದ ಮೇಲರಿಮೆ, ದುರಭಿಮಾನ, ವರ್ಣದ್ವೇಷ,

ಮತಾಂಧತೆ - ಇವುಗಳಿಂದ ಮಿಲಿಯಾಂತರ ಸಾವು ನೋವುಗಳು ಉಂಟಾದವು. ಇಷ್ಟಾದರೂ ಹಿಟ್ಲರನನ್ನು ಬಗ್ಗುಬಡಿದ ಜಾಗತಿಕ ಶಕ್ತಿಗಳ ಹಿರಿಯ ನಾಯಕರು ಇಂಥ ಪ್ರವೃತ್ತಿಗಳ ಗಂಭೀರತೆಯನ್ನು ಎಷ್ಟರಮಟ್ಟಿಗೆ ಪರಿಭಾವಿಸಿದರು ಎಂಬುದು ಪ್ರಶ್ನೆಯಾಗಿಯೇ ಉಳಿದಿದೆ.

**ಹೋರಾಟದ ಹಾದಿ**

ಜನಸಾಮಾನ್ಯರು ರೊಚ್ಚಿಗೆದ್ದು ಹೋರಾಟದ ಹಾದಿ ಹಿಡಿಯುವುದನ್ನು ನಾವು ಅಲ್ಲಲ್ಲಿ ನೋಡುತ್ತೇವೆ. ಶೋಷಿತ ಜನರ ಆಕ್ರೋಶ, ತಲ್ಲಣ ಇಂತಹ ಸಂದರ್ಭಗಳಲ್ಲಿ ಭುಗಿಲೇಳುತ್ತವೆ, ಮೂಲಭೂತ ಹಕ್ಕುಗಳ ಕುರಿತ ಉಲ್ಲಂಘನೆಯ ವಿರುದ್ಧದ ಸಮರಕ್ಕೆ ಚಾಲನೆ ಕೊಟ್ಟಿವೆ. ಇಂಗ್ಲೆಂಡಿನ ಮ್ಯಾಗ್ನ ಕಾರ್ಟ ಮತ್ತು ಅಮೆರಿಕಾದ ಬಿಲ್ ಆಫ್ ರೈಟ್ಸ್ ಕೆಲವು ಉದಾಹರಣೆಗಳು. ಅವು ಅಲ್ಲಿನ ಜನಸಮುದಾಯದ ತಾತ್ಕಾಲಿಕ ಹಿತಾಸಕ್ತಿಯನ್ನು ಕಾಪಾಡಿ ಕೊಳ್ಳುವ ಮಟ್ಟಿಗಿನ ಹೋರಾಟಗಳಿಗಾಗಿ ಮಾತ್ರವೇ ಉಳಿದುಬಿಟ್ಟವು.

ಗುಲಾಮೀಕರಣ, ಮಹಿಳೆಯರ ಮೇಲಿನ ದೌರ್ಜನ್ಯ, ಶೋಷಣೆಗಳು ಇಂದಿಗೂ ಜನತಾ ಪ್ರತಿಭಟನೆಗಳನ್ನು ಮೆಟ್ಟನಿಂತು ಹೆಡೆಯಾಡಿಸುತ್ತಿರುವುದು ಇತಿಹಾಸದಲ್ಲಿನ ಕಪ್ಪು ಕುರುಹುಗಳಾಗಿಯೇ ಉಳಿದಿವೆ.

ಕಾನೂನು, ವ್ಯವಸ್ಥೆ ಅವನ್ನೆಲ್ಲ ಇಂದು ಒಂದು ವರ್ಗದ, ಒಂದು ಕೋಮಿನ, ಜನರ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವುದಕ್ಕೆ ರೂಪಿಸಿಕೊಂಡೇ ಬರಲಾಗುತ್ತಿದೆ. ಇದಕ್ಕಾಗಿ ಧರ್ಮ, ಮತ, ವರ್ಣ ಮತ್ತು ಪೌರತ್ವದ ಬಳಕೆ ಅವ್ಯಾಹತವಾಗಿ ನಡೆದಿದೆ. ಮುಸ್ಲಿಮನ ವಿರುದ್ಧ ಹಿಂದು, ನಾಸ್ತಿಕನ ಎದುರಾಗಿ ಆಸ್ತಿಕ - ಒಟ್ಟಾರೆ ಧರ್ಮದ ವಿರುದ್ಧ ಜಾತ್ಯತೀತತೆ .......... ಹೀಗೆ ನಡೆದಿದೆ ನಮ್ಮ ಇತಿಹಾಸದ ಬೆಳವಣಿಗೆಗಳು. ಆದರೂ ಧರ್ಮ ಮತ್ತು ವರ್ಣಗಳನ್ನು ದುರುಪಯೋಗಪಡಿಸಿಕೊಂಡು ಶೋಷಿಸುವ ಪಾಶವೀ ಶಕ್ತಿಗಳ ಕೈಗಳಲ್ಲಿ ಸಿಕ್ಕಿ ನಲುಗುತ್ತಿರುವ ಜನಸಮುದಾಯ ಸೆಟೆದುನಿಲ್ಲುವ ಲಕ್ಷಣಗಳೂ ಕಂಡು ಬಂದಿಲ್ಲವೆಂದಲ್ಲ, ತಮಗೂ ಚಿಂತನಾಶಕ್ತಿ ಇದೆಯೆಂದು ಪ್ರದರ್ಶಿಸುವ ಸಮಯ ಹತ್ತಿರವಾಗುತ್ತಿದೆ. ಈ ಒಳದನಿಗಳಿಗೆ ರೆಕ್ಕೆಪುಕ್ಕಗಳು ಮೂಡಿಬರುತ್ತಿರುವುದು ಬದಲಾವಣೆಯ ಗಟ್ಟಿ ಸೂಚನೆಗಳು.

ಅದೇ ಹೊತ್ತಿನಲ್ಲಿ ತತ್ವಶಾಸ್ತ್ರ, ಪುರಾಣಗಳನ್ನು ತಿರುಚಿ ಆಳುವ ವರ್ಗಗಳು ಶೋಷಣೆಯನ್ನು ಮುಂದುವರೆಸಿ ಕೊಂಡು ಹೋಗಲು ಅನುಕೂಲ ಮಾಡಿಕೊಟ್ಟಂಥ ಪಂಡಿತೋತ್ತಮರಿಗೇನೂ ಕೊರತೆ ಇಲ್ಲ. ಯೂರೋಪಿನ ಪ್ರಸಿದ್ಧ ತತ್ವಶಾಸ್ತ್ರಜ್ಞರಾದ ಹ್ಯೂಮ್, ಹೆಗೆಲ್, ಕಾಂಟ್ ಅವರುಗಳು ಬೋಧಿಸಿದ್ದು ಇದನ್ನೇ. ಅವನು ಮೇಲು, ಇವನು ಕೀಳು, ಅವನಿಗೆ ಹಕ್ಕಿದೆ, ಇವನಿಗೆ ಹಕ್ಕಿಲ್ಲ - ಎನ್ನುವ ವಾದ. ಇದು ಮತಧರ್ಮ ಮತ್ತು ಧರ್ಮಶಾಸ್ತ್ರವನ್ನು ಬಳಸಿಕೊಂಡು ಸಮಾಜದಲ್ಲಿನ ದ್ವಂದ್ವವನ್ನು ಮುಂದುವರೆಸುವ ಹಿತೂರಿಯಷ್ಟೇ ಆಗಿದೆ.

**ಹೊಸ ಚಿಂತನೆ**

ಈ ಪ್ರಕ್ರಿಯೆಯಲ್ಲಿಯೇ ಕೆಲವು ಮೂಲಭೂತ ಹಕ್ಕುಗಳು, ಮೌಲ್ಯಗಳು, ಮನುಕುಲದ ವಿಕಾಸದ ಅವಿಭಾಜ್ಯ ಅಂಗವೆಂದು ಗುರುತಿಸಿದ್ದು ಒಂದು ಹೊಸ ಚಿಂತನೆಗೆ ನಾಂದಿಯಾಯಿತು. ಇಡೀ ಮಾನವಕುಲ ಒಂದು ಎಂಬ ನೆಲೆಯಲ್ಲಿ ನಿಂತು ಜನರ ನಡುವಿನ ಭೇದ ಭಾವನೆಗಳನ್ನು ತೊಡೆದುಹಾಕುವುದು ಸಾಧ್ಯವಾಗಿದೆ. ಪರಸ್ಪರ ಸಹಾಯ ಸಹಾನುಭೂತಿಗಳಿಂದ ಒಂದು ಹೊಸ ಬಾಳನ್ನೇ ಸೃಷ್ಟಿಸಬಹುದು ಎನ್ನುವ ಉದಾತ್ತ ಚಿಂತನೆ ಮೂಡಿಬರುವುದಕ್ಕೆ ಶತಮಾನಗಳೇ ಹಿಡಿದಿವೆ. ಮಾನವೀಯ ಹಕ್ಕುಗಳ ಸಾರ್ವತ್ರಿಕ ಘೋಷಣೆಗಳು ನಾಗರಿಕತೆಯ ದಿವ್ಯ ಪರಂಪರೆಯನ್ನು ಎತ್ತಿಹಿಡಿದ ವಿಶ್ವ ಸಂಸ್ಥೆಯ ಉದಯವನ್ನು ಈ ಹಿನ್ನೆಲೆಯಲ್ಲಿ ನೋಡಬೇಕಾಗಿದೆ.

ಒಟ್ಟಾರೆ ನೋಡಿದರೆ, ಜ್ಞಾನಪಿಪಾಸೆ, ಶಾಂತಿಯುತ ಸಹಬಾಳ್ವೆ, ಆತಂಕರಹಿತ ಬಾಳು, ಭದ್ರತೆಗಳು, ಮಾನವನ ಜನ್ಮಸಿದ್ಧ ಆಕಾಂಕ್ಷೆಗಳು ಎಂಬ ವಿಚಾರ ಎಷ್ಟೆಲ್ಲ ದಮನಗಳ ವಿರುದ್ಧವೂ ಬದುಕಿ ಬಂದಿವೆ. ಇದಕ್ಕೆಲ್ಲಾ ಕಾಲದ ಮಿತಿ ಇಲ್ಲ. ಎಂದೆಂದಿಗೂ ಹೊಸತೇ. ಅವು ಮಾನವನ ಬದುಕಿನ ಕ್ರಮದಲ್ಲಿಯೇ ಅಂತರ್ಗತವಾದ ಭಾವನೆಗಳು.

ಮಿಲಿಟರಿ, ನಾಗರಿಕ, ಬಲಪಂಥೀಯ ಅಥವಾ ಎಡಪಂಥೀಯ, ಜಾತ್ಯತೀತ ಅಥವಾ ಮತೀಯ ಯಾವುದೇ ಆಗಲಿ ಎಲ್ಲ ರೀತಿಯ ಸರ್ವಾಧಿಕಾರ ಶಾಹಿಗಳೂ ತಮ್ಮ ಪ್ರಭುತ್ವವನ್ನು ಸ್ಥಾಪಿಸಹೊರಡುವುದು ಮಾನವೀಯ ಹಕ್ಕುಗಳನ್ನು ತುಳಿದು ಹಾಕುವ ಪ್ರಯತ್ನಗಳಿಂದಲೇ.

ಆದರೆ ವ್ಯಕ್ತಿ ಸ್ವಾತಂತ್ರ್ಯ, ಸಮಾನತೆ, ಸಹಬಾಳ್ವೆ, ಮೂಲಭೂತ ಹಕ್ಕುಗಳು ಎಂಬಂಥ ಉದಾತ್ತ, ನಿತ್ಯನೂತನ ಕಲ್ಪನೆಗಳಿಗೆ ಸಾವಿಲ್ಲ. ಅವು ಹೊಸ ಹೊಸ ಆಯಾಮಗಳನ್ನು ಪಡೆದು ಮನುಕುಲದ ವಿಕಾಸಕ್ಕೆ ಸ್ಫೂರ್ತಿಯ ಚಿಲುಮೆಗಳಾಗುತ್ತವೆ. ಮಿಲಿಯಾಂತರ ಜನರನ್ನು ಸಂಕೋಲೆಗಳಿಂದ ಬಿಡಿಸಿ ಸ್ವಾತಂತ್ರ್ಯದೆಡೆ ಕೊಂಡೊಯ್ಯುತ್ತವೆ. ಇನ್ನೂ ಮಿಲಿಯಾಂತರ ಜನರ ವಿಮೋಚನೆಗೆ ಕಾರಣಭೂತವಾಗಲು ಸಜ್ಜಾಗಿ ನಿಂತಿವೆ. ಈ ಕ್ರಿಯೆಯೇ ಮನುಕುಲದ ಸರ್ವಾಂಗೀಣ ಪ್ರಗತಿಗೆ, ಸೃಜನಶೀಲತೆಗೆ, ಕ್ರಿಯಾಶೀಲತೆಗೆ ಆಶಾಕಿರಣವಾಗಿರುವುದು ಈ ಸಹಸ್ರಮಾನದ ಎಲ್ಲ ಅನುಭವಗಳ ಒಟ್ಟು ಸಾರಾಂಶ ಎಂದೇ ಈ ಮೌಲ್ಯಗಳು, ಚಿಂತನೆಗಳು, ಸರ್ವಾಧಿಕಾರಿಗಳಿಗೆ ದುಃಸ್ವಪ್ನವಾಗಿ ಕಾಡುವುದರಲ್ಲಿ ಆಶ್ಚರ್ಯವೇನಿಲ್ಲ.

*ಸಂಗ್ರಹಾನುವಾದ : ಎಸ್. ಸುರೇಂದ್ರ*

## ಸಾದರ ಸ್ವೀಕಾರ

**ಬೆಟ್ಟದ ಮೇಲೊಂದು** (ಕಥೆಗಳು)
ಪ್ರಭಾಕರ ಶಿಶಿಲ
ಪುಟಗಳು: ೯೩ ಬೆಲೆ : ರೂ. ೩೩
**ಸ್ವಂತಿಕಾ ಸಾಹಿತ್ಯ ಬಳಗ**, ಸುಳ್ಯ, ದ.ಕ. ೫೭೪೨೩೯.

**ಕುಯಿಲು** (ಕಥಾ ಸಂಕಲನ)
ಲಕ್ಷ್ಮಣ್
ಪುಟಗಳು: ೮೪ ಬೆಲೆ : ರೂ. ೨೫
**ಅಂಬೇಡ್ಕರ್ ಭಾಗ್ಯ ಪ್ರಕಾಶನ**, ೧೨೮, ಅಂಚೆ ಕಚೇರಿ ರಸ್ತೆ, ಯಡಿಯೂರು ಕಾಲನಿ, ಜಯನಗರ ೭ನೇ ಹಂತ, ಬೆಂಗಳೂರು - ೫೬೦೦೮೨.

**ಡಾ॥ ಅಂಬೇಡ್ಕರ್ ವಿರಚಿತ ಬುದ್ಧ ಮಾರ್ಕ್ಸ್ ಗಾಂಧಿ**
ಅನುವಾದ : ಡಾ॥ ಮ. ನ. ಜವರಯ್ಯ
ಪುಟ: ೩೦೩+೮ ಬೆಲೆ : ರೂ. ೧೫೦

**ಗುಲಾಮಿ** (ಕವಿತೆಗಳು)
ಡಾ॥ ಮ. ನ. ಜವರಯ್ಯ
ಪುಟ: ೧೦೫ ಬೆಲೆ : ರೂ. ೪೦

**ಬುರುಡೆಗೆ ಸ್ವರ್ಗ** (ಸಣ್ಣ ಕಥೆಗಳು)
ಡಾ॥ ಮ. ನ. ಜವರಯ್ಯ
ಪುಟ: ೧೦೨ ಬೆಲೆ : ರೂ. ೫೦
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಸಿದ್ಧಾರ್ಥ ಗ್ರಂಥಮಾಲೆ**, ನಂ. ಇ ೪೭, ಮೊದಲ ಹಂತ, ಕುವೆಂಪುನಗರ, ಮೈಸೂರು - ೫೭೦ ೦೨೩.

**ದಲಿತ ಚಿಂತನೆ** (ಪ್ರಬಂಧಗಳು)
ಜನಾರ್ಧನ ಎರ್ಪಕಟ್ಟೆ
ಪುಟ: ೬೪ ಬೆಲೆ : ರೂ. ೧೫
**ಸ್ಮೃತಿ ಪ್ರಕಾಶನ**, ಅಡ್ಯನಡ್ಕ, ೫೭೪೨೬೦.

**ಕಥಾಕುಸುಮ** (ಮಕ್ಕಳ ಕಥೆಗಳು)
ಎಚ್. ಗವಿಸಿದ್ಧಯ್ಯ
ಪುಟ: ೯೬ ಬೆಲೆ : ರೂ. ೧೫
**ಸಿದ್ದೇಶ್ವರ ಪ್ರಕಾಶನ**, ವಿಜಯಪುರ.

**ಅಶ್ವಶಕ್ತಿ-೫೦೦೦** (ಮಕ್ಕಳ ಕಥೆಗಳು)
ನೀಲಾಂಬರಿ
ಪುಟ: ೪೦ ಬೆಲೆ : ರೂ. ೧೫
**ಇಂಚರ ಪ್ರಕಾಶನ**, ೧೬೭, ೧೦ನೇ ಮೇನ್, ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೫೮.

**ಗತಿಶೀಲ** (ಕವಿತೆಗಳು)
ಮೈನುದ್ದೀನ ರೇವಡಿಗಾರ
ಪುಟ: ೪೪ ಬೆಲೆ : ರೂ. ೨೦
**ಸೌಜನ್ಯ ಪ್ರಕಾಶನ**, ರೈಲ್ವೆನಿಲ್ದಾಣ ಹತ್ತಿರ, ಬಾಗಲಕೋಟೆ - ೫೮೭ ೧೦೧.

**ಪಾತರದವರು** (ಸಂಶೋಧನೆ)
ಶೈಲಜ ಹಿರೇಮಠ
ಪುಟ: ೧೬೪ ಬೆಲೆ : ರೂ. ೭೫
**ಪ್ರಸಾರಾಂಗ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩೨೭೬.

## ಪರಮಾಣು ಹುಲಿಯ ಸವಾರಿ

**Riding The Nuclear Tiger**

*ಲೇಖಕರು : ಎನ್. ರಾಮ್*

ಪ್ರಕಾಶಕರು : Leftword ಪ್ರಕಾಶನ

*ಪುಟ : 120* *ಬೆಲೆ : ರೂ. 60*

ಈ ಪುಸ್ತಕದ ಮುನ್ನುಡಿಯಲ್ಲಿ ಹೇಳಿರುವ ಹಾಗೆ, ''ಭಾರತೀಯ ಜನತಾ ಪಕ್ಷನೇತೃತ್ವ ವಹಿಸಿರುವ ಸರಕಾರದ ಅಪಾಯಕಾರಿಯಾದ ಪರಮಾಣು ಸಾಹಸದ ಖಂಡನೆ'' ಈ ಕೃತಿಯ ವಸ್ತು. ಅದೊಂದು ಮಹತ್ವ ಸಾಧನೆಯೆಂದು ಹೇಳಿಕೊಳ್ಳುತ್ತಿರುವ ಬಿಜೆಪಿ ಮತ್ತು ಅದರ ಮಿತ್ರಪಕ್ಷಗಳು ನಿಜವಾಗಿ ಈ ದೇಶದ ಹಿತಾಸಕ್ತಿಗಳನ್ನೆಲ್ಲಾ ಗಾಳಿಗೆ ತೂರಿವೆಯೆಂದು ಆಧಾರಸಹಿತವಾಗಿ ಈ ಕೃತಿಯಲ್ಲಿ ವಿವರಿಸಲಾಗಿದೆ.

ಐವತ್ತು ವರ್ಷಗಳಿಂದ ಭಾರತ ಅನುಸರಿಸಿಕೊಂಡು ಬಂದಿದ್ದ ಸ್ವತಂತ್ರ ವಿದೇಶಾಂಗ ನೀತಿಯನ್ನು, ಯುದ್ಧ ವಿರೋಧಿ ನಿಲುಮೆಯನ್ನು, ಪರಮಾಣು ಶಸ್ತ್ರೀಕರಣ ವಿರೋಧಿ ಧೋರಣೆಯನ್ನು ಬಿಜೆಪಿ ಸರಕಾರವು ಗಾಳಿಗೆ ತೂರಿದೆ. ಸಿಟಿಬಿಟಿ ಒಡಂಬಡಿಕೆಗೆ ಸಹಿಹಾಕುವಂತೆ ಒತ್ತಡ ಹೇರುವುದಕ್ಕೆ ಅಮೆರಿಕ ಮತ್ತಿತರ ಪರಮಾಣು ಶಸ್ತ್ರಸಜ್ಜಿತ ಸಾಮ್ರಾಜ್ಯಶಾಹಿಗಳಿಗೆ ಅದು ಅವಕಾಶ ಕಲ್ಪಿಸಿಕೊಟ್ಟಿದೆ. ಪಾಕಿಸ್ತಾನವನ್ನು ಭಾರತವನ್ನು ಒಂದೇ ಸಾಲಿಗೆ ಸೇರಿಸುವುದಕ್ಕೆ ಸಾಮ್ರಾಜ್ಯಶಾಹಿಗಳಿಗೆ ಆಸ್ಪದ ನೀಡಿದೆ. ಭಾರತ ಅಂತರರಾಷ್ಟ್ರೀಯ ನೆಲೆಯಲ್ಲಿ ಐವತ್ತು ವರ್ಷಗಳ ಪ್ರಯತ್ನದಿಂದ ಸಂಪಾದಿಸಿದ ಸ್ಥಾನಮಾನಗಳನ್ನು ಒಂದೇ ಏಟಿಗೆ ದುರ್ಬಲಗೊಳಿಸಿದೆ. ಹತ್ತಿಪ್ಪತ್ತು ವರ್ಷಗಳಿಂದ ಭಾರತವು ಪರಮಾಣು ಶಸ್ತ್ರ ತಯಾರಿಕೆಯ ಸಾಮರ್ಥ್ಯವನ್ನು ಬಹಳ ಎಚ್ಚರಿಕೆಯಿಂದ ಬೆಳೆಸುತ್ತಾ ಬಂದಿದೆ; ಅದೇ ಸಮಯದಲ್ಲಿ ಅದೊಂದು ರಾಷ್ಟ್ರೀಯ ಒತ್ತಡಕ್ಕೆ ಕಾರಣವಾಗದಂತೆಯೂ ಯಾವಾಗ ಏನು ಮಾಡಬೇಕೆಂಬ ಆಯ್ಕೆಯು ಪೂರ್ಣವಾಗಿ ಭಾರತಕ್ಕೆ ಉಳಿಯುವಂತೆಯೂ ಹಿಂದಿನ ಸರಕಾರವು ಜಾಗ್ರತೆ ವಹಿಸಿದ್ದವು. ಅದನ್ನೆಲ್ಲ ಬುಡಮೇಲು ಮಾಡಿ ಭಾರತದ ಭದ್ರತೆಗೆ ಬಿಜೆಪಿ ಸರಕಾರ ಅಪಾಯ ತಂದುಕೊಂಡಿದೆ. ಇದೆಲ್ಲ ಯಾಕೆ ? ಕೇವಲ ತಾನೇನೋ ಒಂದು ಮಹಾತ್ಸಾಧನೆ ಮಾಡಿದ್ದೇವೆಂದು ತೋರಿಸಿಕೊಳ್ಳುವುದಕ್ಕೆ !

ಭಾರತದ ಉಳಿವೇ ಪರಮಾಣು ಶಸ್ತ್ರಪರೀಕ್ಷೆಯನ್ನು ಹೊಂದಿಕೊಂಡಿದೆಯೆಂದೂ ಭಾರತ ತನ್ನ ಸಾಮರ್ಥ್ಯವನ್ನು ಪ್ರದರ್ಶಿಸಿದರೆ ಪಾಕಿಸ್ತಾನ ಮತ್ತು ಚೀನ ಸಹ ತಮ್ಮ ಪರಮಾಣು ಶಸ್ತ್ರ ವಿಕಾಸದ ಕಾರ್ಯಕ್ರಮವನ್ನು ಸ್ಥಗಿತಗೊಳಿಸಬಹುದೆಂದೂ ಬಿಜೆಪಿ ಸರಕಾರ ಭಾವಿಸಿದ್ದಂತೆ ತೋರುತ್ತದೆ. ಆದರೆ ಪರಿಣಾಮ ಅದಕ್ಕೆ ತದ್ವಿರುದ್ಧವಾಯಿತೆನ್ನುವುದು ಸ್ಪಷ್ಟವಿದೆ.

ಈ ವಿಷಯಕ್ಕೆ ಸಂಬಂಧಿಸಿ ಬಹಳ ವ್ಯಾಪಕವಾದ ವಸ್ತುನಿಷ್ಠ ವಿಶ್ಲೇಷಣೆ ನಡೆಸಿರುವ ಎನ್. ರಾಮ್ ಅವರು ಕೊನೆಗೆ ಪರಮಾಣು ಸ್ಫೋಟವೆಂಬ ಹುಲಿಯ ಬೆನ್ನೇರಿರುವ ಭಾರತ ಅದರಿಂದ ಕೆಳಗಿಳಿದು ಬರುವುದು ಅಗತ್ಯವೆಂದೂ ಅದಕ್ಕೆ ಏನು ಮಾಡಬೇಕೆಂದೂ ಸೂಚಿಸಿದ್ದಾರೆ. ಪರಮಾಣು ನಿಶ್ಶಸ್ತ್ರೀಕರಣಕ್ಕೆ ಅನುಸರಿಸತಕ್ಕ ದಾರಿಯನ್ನವರು ತೋರಿಸಿದ್ದಾರೆ.

''ಪರಮಾಣು ಹುಲಿಯ ಬೆನ್ನ ಮೇಲಿಂದ ಇಳಿಯುವುದಕ್ಕೆ ಹಿಂದೂ ಬಲಪಂಥೀಯ ಸರಕಾರವು ದಾರಿ ಕಂಡುಕೊಳ್ಳದೆಂದು ಮೊದಲಿನಿಂದಲೇ ಸ್ಪಷ್ಟವಾಗಿತ್ತು. ನವದೆಹಲಿಯಲ್ಲಿ ಅಧಿಕಾರ ಬದಲಾವಣೆಯು ಅದಕ್ಕೆ ಪೂರ್ವಭಾವಿ ಅಗತ್ಯವೆನ್ನುವುದು ನಿಚ್ಚಳವಿದೆ. ಈ ದಿಶೆಯಲ್ಲಿ ಪ್ರಜಾಪ್ರಭುತ್ವವಾದಿ ಶಕ್ತಿಗಳು ತಮ್ಮ ಕಾರ್ಯಕ್ರಮವನ್ನು ದೃಢತೆಯಿಂದ ಅನುಷ್ಠಾನಗೊಳಿಸಬೇಕು. ಭಾಜಪೇತರ ಸರಕಾರ ಬೇರೆ ಏನು ಮಾಡಲು ಸಾಧ್ಯವಾಗಲಿ, ಆಗದಿರಲಿ, ಈ ಒಂದು ಕಾರ್ಯವನ್ನು ನೆರವೇರಿಸದೆ ಬೇರೆ ದಾರಿ ಇಲ್ಲ'' ಎಂದು ಪ್ರಸ್ತುತ ಕೃತಿಯಲ್ಲಿ ಸ್ಪಷ್ಟಪಡಿಸಿದ್ದಾರೆ, ಎನ್. ರಾಮ್. ಆದರೆ ಅದೇ ಸರ್ಕಾರ ಮತ್ತೆ ಬಂದಿದೆ.

ನಮ್ಮ ಮುಂದಿನ ಹಾದಿ ಯಾವುದು ?

---

## ಗೆಲುವುದಕ್ಕೆ ಇಡೀ ವಿಶ್ವವೇ ಇದೆ

ಇದೊಂದು ಆಂಗ್ಲ ಭಾಷೆಯ ಕೃತಿ. ಇದು ಮಾರ್ಕ್ಸ್ ಮತ್ತು ಏಂಗಲ್ಸ್ ಅವರು ರಚಿಸಿದ ''ಕಮ್ಯುನಿಸ್ಟ್ ಪಕ್ಷದ ಪ್ರಣಾಳಿಕೆ'ಯ ೧೫೦ನೇ ವರ್ಧಂತಿಯ ಸಂದರ್ಭದಲ್ಲಿ ಐಜಾಸ್ ಅಹ್ಮದ್, ಇರ್ಫಾನ್ ಹಬೀಬ್, ಪ್ರಭಾತ್ ಪಟ್ನಾಯಕ್ ಬರೆದ ಲೇಖನಗಳ ಸಂಕಲನ. ಪ್ರಕಾಶ್ ಕಾರಟ್ ಅವರು ಮುನ್ನುಡಿ ಬರೆದಿದ್ದಾರೆ. ಮಾರ್ಕ್ಸ್ ಮತ್ತು ಏಂಗೆಲ್ಸ್‌ರ ಕಮ್ಯುನಿಸ್ಟ್ ಪಕ್ಷದ ಪ್ರಣಾಳಿಕೆಯ ಆಂಗ್ಲ ಭಾಷಾಂತರ ಇದರಲ್ಲಿದೆ. Leftword ಪ್ರಕಾಶನ. ಬೆಲೆ ರೂ. ೫೦.

ಕಮ್ಯುನಿಸ್ಟ್ ಪ್ರಣಾಳಿಕೆಯು ವಿಶ್ವದಲ್ಲಿ ''ಬೈಬಲ್ ಮತ್ತು ಖುರಾನ್ ನಂತರ ಅತ್ಯಧಿಕ ಮುದ್ರಣಗಳನ್ನು ಕಂಡ'' ಎಲ್ಲ ದೇಶಗಳ ಎಲ್ಲ ಭಾಷೆಗಳಲ್ಲೂ ಪ್ರಕಟವಾಗಿರುವ ಕೃತಿ. ಅದು ಕಮ್ಯುನಿಸ್ಟ್ ಸಿದ್ಧಾಂತಗಳ ಮೊಟ್ಟಮೊದಲನೆಯ ವ್ಯವಸ್ಥಿತ ಘೋಷಣೆ. ಅದು ಕಾರ್ಮಿಕ ವರ್ಗದ ಕ್ರಾಂತಿಕಾರಿ ಚಳವಳಿಗೆ ದಾರಿ ತೋರುವ ದೀಪದಂತಿದೆ. ಅದು ಮಾನವ ಕುಲದ ಅತ್ಯುನ್ನತ ಸಾಮಾಜಿಕ ಜೀವನ ಕ್ರಮದ ನಿರೂಪಣೆ. ಸಂಧಿ ಮನೋಭಾವ, ಸಂದರ್ಭಸಾಧಕ ತನ್ನ ಸಮಷ್ಟಿಯ ಕ್ಷೇಮಕ್ಕಿಂತ ವ್ಯಕ್ತಿಗತ ಹಿತಾಸಕ್ತಿಗೆ ಮುಖ್ಯತ್ವ ನೀಡುವ ಸ್ವಾರ್ಥಪರತೆ ಇತ್ಯಾದಿಗಳು ಎಲ್ಲೆಲ್ಲೂ ಮೇಲುಗೈ ಪಡೆದಿರುವ ಇಂದಿನ ಪರಿಸ್ಥಿತಿಯಲ್ಲಿ ಕಮ್ಯುನಿಸ್ಟ್ ಪ್ರಣಾಳಿಕೆಯ ಹೊಸ ಆವೃತ್ತಿಯ ಪ್ರಕಟಣೆಯು ಸಕಾಲಿಕವಾಗಿದೆ.

ನೂರೈವತ್ತು ವರ್ಷಗಳ ಹಿಂದಿನ ಪರಿಸ್ಥಿತಿ ಇಂದು ಇಲ್ಲ. ಇಂದಿನ ಪರಿಸ್ಥಿತಿಯ ರಾಜಕೀಯ ಪರಿಣಾಮ ಇಂದಿನ ವಾಸ್ತವಿಕತೆ. ಮಾರ್ಕ್ಸ್‌ವಾದವು ವಾಸ್ತವಿಕತೆಯನ್ನು ಅರ್ಥ ಮಾಡಿಕೊಂಡು ವರ್ತಿಸುವುದಕ್ಕೆ ಕಲಿಸುತ್ತದೆ. ಪ್ರಸ್ತುತ ಪುಸ್ತಕದಲ್ಲಿ ಅಡಕವಾಗಿರುವ ಲೇಖನಗಳು ಅದನ್ನೇ ತೋರಿಸಿಕೊಡುತ್ತವೆ.

ಕಮ್ಯುನಿಸ್ಟ್ ಪ್ರಣಾಳಿಕೆಯನ್ನು ಮಾರ್ಕ್ಸ್ ಮತ್ತು ಏಂಗೆಲ್ಸ್ ೧೮೪೮ರಲ್ಲಿ ಸಿದ್ಧಗೊಳಿಸಿದಾಗ ಬಂಡವಾಳಶಾಹಿ ವರ್ಗವಿನ್ನೂ ಬೆಳವಣಿಗೆಯ ಹಂತದಲ್ಲಿತ್ತು, ಸಾಮಂತಶಾಹಿಗಿದಿರಾದ ಕ್ರಾಂತಿಕಾರಿ ಹೋರಾಟಗಳ ಮುಂಚೂಣಿಯಲ್ಲಿತ್ತು. ಕಾರ್ಮಿಕ ವರ್ಗ ಸ್ವತಂತ್ರ ಶಕ್ತಿಯಾಗಿ ಬೆಳೆದು ಕ್ರಾಂತಿಕಾರಿ ಪ್ರಕ್ರಿಯೆಯ ಮುಂಚೂಣಿಗೆ ತಲುಪಿರಲಿಲ್ಲ. ಆದರೆ ಮಾರ್ಕ್ಸ್ ಮತ್ತು ಏಂಗೆಲ್ಸ್ ಬಂಡವಾಳಶಾಹಿ ವರ್ಗದ ಪರಾಜಯವನ್ನು, ಕಾರ್ಮಿಕ ವರ್ಗದ ಜಯವನ್ನು, ಮೊದಲಾಗಿ ಕಂಡಿದ್ದರು. ಬಂಡವಾಳಶಾಹಿಯ ನಾಶ ಮತ್ತು ಸಮಾಜವಾದದ ಜಯ ಖಚಿತವೆಂದು ವೈಜ್ಞಾನಿಕ ವಾಗಿ ದೃಢಪಡಿಸಿದ್ದರು.




ಬಂಡವಾಳಶಾಹಿಯು ಸಾಮ್ರಾಜ್ಯಶಾಹಿಯಾಗಿ ಬೆಳೆದಾಗ, ಲೆನಿನ್ ಕಾರ್ಮಿಕ ವರ್ಗದ ಕ್ರಾಂತಿಕಾರಿ ಚಳವಳಿ ಅನುಸರಿಸತಕ್ಕ ವ್ಯೂಹರಚನೆ ಮತ್ತು ಸಮರ ತಂತ್ರಗಳನ್ನು ನಿರೂಪಿಸಿದರು. ಅವರು ಮಾರ್ಕ್ಸ್‌ವಾದವನ್ನು ಹೊಸ ಕಾಲಘಟ್ಟಕ್ಕೆ ಅನ್ವಯಗೊಳಿಸಿದರು. ಲೆನಿನ್‌ರವರ ನಿರ್ದೇಶನದಲ್ಲಿ ಕಾರ್ಮಿಕ ವರ್ಗದ ಯಶಸ್ವೀ ಕ್ರಾಂತಿ ನಡೆದು ಸಮಾಜವಾದೀ ಪ್ರಭುತ್ವ ಮೊತ್ತಮೊದಲ ಬಾರಿಗೆ ಸ್ಥಾಪನೆಯಾಯಿತು. ಅದೊಂದು ಜಾಗತಿಕ ಶಕ್ತಿಯಾಗಿ ಬೆಳೆಯಿತು. ಬಂಡವಾಳಶಾಹಿಯಿಂದ ಸಮಾಜವಾದಕ್ಕೆ ವಿಶ್ವವ್ಯಾಪಿಯಾದ ಪರಿವರ್ತನೆಯ ಯುಗ ಉದಯವಾಯಿತು.

ಆದರೆ ಮಾರ್ಕ್ಸ್‌ವಾದ-ಲೆನಿನ್‌ವಾದದ ಪಥದಿಂದ ವ್ಯತಿಚಲನೆಗಳಾದ ಪರಿಣಾಮವಾಗಿಯೂ ವಸ್ತುನಿಷ್ಠೆಯ ಬದಲು ಕರ್ತೃನಿಷ್ಠತೆ ಹಾಗೂ ಸಮಷ್ಟಿ ಹಿತದ ಬದಲಾಗಿ ವ್ಯಕ್ತಿ ಹಿತಾಸಕ್ತಿಯು ಮುಖ್ಯತ್ವ ಪಡೆದುದರ ಪರಿಣಾಮವಾಗಿಯೂ ಸಮಾಜವಾದೀ ಪರಿವರ್ತನೆಯ ಪ್ರಕ್ರಿಯೆಯು ಗಂಭೀರವಾದ ಹಿಂಜರಿಕೆಯನ್ನು ಅನುಭವಿಸಿತು.

ಆದರೆ ಮಾರ್ಕ್ಸ್‌ವಾದ-ಲೆನಿನ್‌ವಾದ ವೈಜ್ಞಾನಿಕವಾದುದರಿಂದ ಅದು ಮತ್ತೆ ತಲೆಯೆತ್ತಿ ಮುನ್ನಡೆಯುತ್ತದೆ. ಕಾರ್ಮಿಕ ವರ್ಗದ ನಾಯಕತ್ವದಲ್ಲಿ ಮಾನವಕುಲ ಸಮಾಜವಾದಿ ಪಥದಲ್ಲಿ ಇಡೀ ವಿಶ್ವದಲ್ಲಿ ಜಯಗಳಿಸುತ್ತದೆ.

ಇದೊಂದು ಓದಲೇಬೇಕಾದ ಕೃತಿ

ಬಿ. ವಿ. ಕಕ್ಕಿಲ್ಲಾಯ

''ಗಂಗಾ'', ನಂ.೩-೧೭/೧೪, ಸೈಮನ್ ರಸ್ತೆ, ಕಂಕನಾಡಿ, ಮಂಗಳೂರು - ೫೭೫ ೦೦೨



## ಸ್ನೇಹಮಯೀ ವ್ಯಾಕ್ಸೀನುಗಳು

ಡಾ॥ ಬಾಳಫೋಂಡ್ಕೆ
ಅನು : ಡಾ॥ ಸಿ. ಆರ್. ಚಂದ್ರಶೇಖರ್
ಪುಟ : ೧೨೮ ಬೆಲೆ : ರೂ. ೪೫
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧.

ಉಗ್ರಸ್ವರೂಪಿ ರೋಗಗಳ ವಿರುದ್ಧ ಹೋರಾಟದಲ್ಲಿ ಮನುಷ್ಯನ ಜಯಕ್ಕೆ ಕಾರಣವಾಗಿರುವ 'ವ್ಯಾಕ್ಸೀನುಗಳ' ಬಗ್ಗೆ ವಿವರಿಸುವ ಕೃತಿ. ಇಂದು ಸುರಕ್ಷಿತ, ಪರಿಣಾಮಕಾರಿ ಹಾಗೂ ವಿಶ್ವಾಸಾರ್ಹ ವ್ಯಾಕ್ಸೀನುಗಳು ಲಭ್ಯವಿರುವುದರಿಂದ, ಮಕ್ಕಳನ್ನು ಅಂಗವಿಕಲರನ್ನಾಗಿ ಮಾಡುತ್ತಿದ್ದ ರೋಗ ಮರೆಯಾಗುತ್ತಿದೆ. ಅತ್ಯಾಧುನಿಕ ಜೀವ-ತಂತ್ರ ವಿಜ್ಞಾನದಿಂದಾಗಿ ಹಾಗೂ ರೋಗನಿರೋಧಕಶಾಸ್ತ್ರದಲ್ಲಿ ಆಗಿರುವ ಪ್ರಗತಿಯಿಂದಾಗಿ ಮನುಷ್ಯನನ್ನು ಕಾಡುತ್ತಿರುವ ಅನೇಕ ಬಗೆಯ ಸಾಂಕ್ರಾಮಿಕ ಮತ್ತು ಅಸಾಂಕ್ರಾಮಿಕ ರೋಗಗಳಿಗೆ ಹೊಸ, ಉತ್ತಮವಾದ ವ್ಯಾಕ್ಸೀನುಗಳನ್ನು ತಯಾರಿಸಲು ಸಾಧ್ಯವಾಗುತ್ತಿದೆ.



## ಚಾಪ್ಲಿನ್ (ಜೀವನ ಮತ್ತು ಸಾಧನೆ)

ಕುಂ. ವೀರಭದ್ರಪ್ಪ
ಪುಟ : ೩೫೨ ಬೆಲೆ : ರೂ. ೧೫೦
**ಕಾಮಧೇನು**, ನಂ. ೬, ನಾಗಪ್ಪ ಬೀದಿ,
ಶೇಷಾದ್ರಿಪುರ, ಬೆಂಗಳೂರು - ೫೬೦ ೦೨೦.

ಈ ಶತಮಾನದ ಅತ್ಯಂತ ಮೇಧಾವಿ ಚಿತ್ರನಟ, ನಿರ್ದೇಶಕನಾದ ಚಾರ್ಲಿ ಚಾಪ್ಲಿನ್‌ನ ಜೀವನ ಮತ್ತು ಸಾಧನೆಯನ್ನು ಪರಿಚಯಮಾಡಿಕೊಡುವ ಕೃತಿ. ಆತ ಎಡಪಂಥೀಯ ವಿಚಾರದವನೆಂದು ಉಪದ್ರವ ನೀಡಿ ನಾಡಿನಿಂದ ಹೊರದಬ್ಬಿತು ಅಮೆರಿಕ. ಆದರೆ, ಚಾಪ್ಲಿನ್ನನ ದೈತ್ಯ ಪ್ರತಿಭೆ ಮಣಿಯಲಿಲ್ಲ. ಆತನೇ ಹೇಳುವಂತೆ, "ನನ್ನ ಚಾರ್ಲಿ ಮೂಕ... ಆದರೂ ಶಬ್ದದ ಸಹಾಯವಿಲ್ಲದೆ ಮಾತಾಡಬಲ್ಲ. ನನ್ನ ಚಾರ್ಲಿ ಅಂಗವಿಕಲ, ಅಸಾಧ್ಯವಾದುದನ್ನು ಮಾಡಿತೋರಿಸಬಲ್ಲ." ಮಹಾನ್ ಜೀವನ ಪ್ರೇಮಿಯ ಬದುಕಿನ ಕಥೆ ಇದು.

## ಪಾತರದವರು, *ಶೈಲಜ ಹಿರೇಮಠ*



ಪುಟ : ೧೬೨ ಬೆಲೆ : ರೂ. ೭೫
**ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ**
ಹಂಪಿ, ವಿದ್ಯಾರಣ್ಯ - ೫೮೩೨೭೬.

ಪಾತರದವರ ವ್ಯಕ್ತಿಗತ ಅನುಭವಗಳನ್ನು ಸಾಮಾಜಿಕ-ಸಾಂಸ್ಕೃತಿಕ ವ್ಯವಸ್ಥೆಯಲ್ಲಿಟ್ಟು ವಿಶ್ಲೇಷಣೆಗೊಳಪಡಿಸುವ ಅಗತ್ಯವಿದೆ. ಪುರುಷರ ಹುಚ್ಚು ಕಾಮನೆಯ ಫಲವಾಗಿ ಬೆಳೆದು ಬಂದ ಲೈಂಗಿಕ ದಾಸಿಯರ ರೂಪ-ಸ್ವರೂಪಗಳನ್ನು ಒಂದೊಂದಾಗಿ ಪರಿಶೀಲಿಸಬೇಕಾಗಿದೆ. ಭಾರತೀಯ ಸಂಸ್ಕೃತಿಯಲ್ಲಿ ಧಾರ್ಮಿಕ ಹಿನ್ನೆಲೆಯುಳ್ಳ ರಂಗಭೋಗದಲ್ಲಿ ತೋರಿಕೆಗೆ ಪ್ರಾಧಾನ್ಯ ಪಡೆದುಕೊಂಡು ಇಂದಿಗೂ ಜೀವಂತವಾಗಿರುವ ಪಾತರದವರ ಬದುಕಿನ ವಿವರಣೆಗಳನ್ನು ವಿಶ್ಲೇಷಿಸುವ ಕೃತಿ.



## ಬುದ್ಧ ಮಾರ್ಕ್ಸ್ ಗಾಂಧಿ

ಡಾ॥ ಅಂಬೇಡ್ಕರ್
ಅನು : ಡಾ॥ ಮ. ನ. ಜವರಯ್ಯ
ಪುಟ : ೩೧೧ ಬೆಲೆ : ರೂ. ೧೫೦
**ಸಿದ್ಧಾರ್ಥ ಗ್ರಂಥಮಾಲೆ** ನಂ. ಇ-೪೭, ಮೊದಲನೇ ಹಂತ, ಕುವೆಂಪು ನಗರ, ಮೈಸೂರು - ೫೭೦ ೦೨೩.

ಹಿಂದೂ ಧರ್ಮ ದಲಿತರ ಧರ್ಮವಾಗಬೇಕಾದರೆ, ಅದು ಸಾಮಾಜಿಕ ಸಮಾನತೆಯ ಧರ್ಮವಾದರೆ ಮಾತ್ರ. ದಲಿತರಿಗೆ ಗುಡಿ ಪ್ರವೇಶವಿದೆ ಎಂಬ ಕೇವಲ ತಿದ್ದುಪಡಿಯಿಂದ ಹಿಂದೂ ಧರ್ಮವನ್ನು ಸಾಮಾಜಿಕ ಸಮಾನತೆಯ ಧರ್ಮವೆಂದು ಕರೆಯಲು ಸಾಧ್ಯವಿಲ್ಲ. ಅಂಥ ತಿದ್ದುಪಡಿಯನ್ನು ಮಾಡಿದ್ದೇ ಆದರೆ ಈಗ ಚಾಲ್ತಿಯಲ್ಲಿರುವ ಮಾತುಗಳಲ್ಲೇ ಹೇಳಬೇಕೆಂದರೆ "ಅಯ್ಯೋ ಪಾಪ, ದಲಿತರು ವಿದೇಶೀಯರೇನಲ್ಲ ಅವರು ನಮ್ಮ ದೇಶದವರೇ ಅಲ್ಲವೆ?" ಎಂದಂತಾಗುತ್ತದೆ ಅಷ್ಟೆ.



## ಕಳೆದ ಆ ದಿನಗಳು

ಎನ್. ಮಲ್ಲಪ್ಪ
ಪುಟ : ೨೮೮ ಬೆಲೆ : ರೂ. ೬೦
**ಕನ್ನಡ ಪುಸ್ತಕ ಪ್ರಾಧಿಕಾರ**, ಬೆಂಗಳೂರು

ಶ್ರೀ ನರಸಿಂಹ ಶಾಸ್ತ್ರಿಗಳೆಂಬುವರು ಇಂಗ್ಲಿಷ್ ಪಾಠ ಹೇಳುತ್ತಿದ್ದರು. ಉಚ್ಚಾರಣೆಯಲ್ಲಿ ತಪ್ಪು ಮಾಡಿದರೆ 'ಶೂದ್ರ ಮುಂಡೇದೆ' ಎಂದು ಗುಡುಗುತ್ತಿದ್ದರು. ಹಮಾಂ ಕೋಮ್ ಜಾತಿಗೆ ಸೇರಿದ ಹುಡುಗರನ್ನು ಕಂಡರೆ ಮುಖ ಸಿಂಡರಿಸಿಕೊಳ್ಳುತ್ತಿದ್ದರು. 'ಇವರೆಲ್ಲ ಬಂದು ಸ್ಕೂಲು ಹಾಳಾಗೋಯ್ತು' ಎನ್ನುವುದೇ ಅವರ ಕೊರಗು. ನನ್ನ ಪಕ್ಕದಲ್ಲಿ ತಿಗಳರ ಜಾತಿಗೆ ಸೇರಿದ ಕೆಂಪೇಗೌಡ ಎಂಬುವವ ಕುಳಿತುಕೊಳ್ಳುತ್ತಿದ್ದ. ಆತನಿಗೆ ನಾಲಗೆ ತಿರುಗುತ್ತಿರಲಿಲ್ಲ. ಆಗ ಶಾಸ್ತ್ರಿಗಳು "ಹಿಂಗೆ ನಾಲಿಗೆ ತಿರುಗೋಲ್ಲ ತಿಗಳ ಹಾಕಿದಂತ ನೆರೆತೋಟೇಯೋರ್ನ್ನ ಕಡಿಸಿದ ಅನ್ನೋ ಗಾದೆ ಹಾಗೆ ನೀನು ಸ್ಕೂಲಿಗೆ ಬಂದು ಯಾರೆಯುವದಕ್ಕೆ ಯಾಕೆ ಕೆಡಿಸುತ್ತೀಯ' ಎಂದು ಛೀಮಾರಿ ಹಾಕುತ್ತಿದ್ದರು. 'ಸತ್ತ ಕುರೀನ ಹೊತ್ಕೊಂಡು ಬಾವೀಗೆ ಬೀಳೋದು ಬಿಟ್ಟು ನೀನ್ಯಾಕೆ ಇಂಗ್ಲೀಷ್ ಕಲಿಯೋಕೆ ಬಂದ್ಯೋ" ಅಂತ ಎಲ್ಲಿ ಅಂತಾರೋ ಅಂತ ನನ್ನೆದೆ ಬಡಕೊಳ್ಳಿತ್ತು....



## ಕಳಿಂಗ ಸೂರ್ಯ ಮತ್ತು ಇತರ ಲೇಖನಗಳು

ಎಂ. ಪಿ. ಪ್ರಕಾಶ್
ಪುಟ : ೧೫೬ ಬೆಲೆ : ರೂ. ೮೦
**ನೆಲಮನೆ ಪ್ರಕಾಶನ**, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ.

ಕರ್ನಾಟಕದ ರಾಜಕೀಯ ರಂಗದಲ್ಲಿ ಪರಿಚಿತರಾಗಿರುವ ಎಂ. ಪಿ. ಪ್ರಕಾಶರ ಹತ್ತು ವಿಚಾರ ಪೂರ್ಣ ಲೇಖನಗಳ ಸಂಗ್ರಹ. ತಾವು ಕೈಗೊಂಡ ಪ್ರವಾಸವಾಗಲಿ, ರಾಜಕೀಯ ವಿಮರ್ಶೆಯಾಗಲಿ, ಸಮಕಾಲೀನ ಸಂಗತಿಗಳ ವಿಶ್ಲೇಷಣೆಯಾಗಲಿ, ಅವುಗಳ ಮೂಲಕ ನೋಡಿದ ನಾಟಕಗಳ ವಿಮರ್ಶೆಯಾಗಲಿ ಅವುಗಳ ಮೂಲಕ ಲೇಖಕರ ಮತ್ತೊಂದು ಸೃಜನಶೀಲ ಮುಖವನ್ನು ಪರಿಚಯ ಮಾಡಿಕೊಡುವ ಕೃತಿ.

- ಕೆ. ಪಿ. ಎಸ್.

### ಲೇಖಕರು ಮತ್ತು ಪ್ರಕಾಶಕರ ಗಮನಕ್ಕೆ

ಈ ವಿಭಾಗದಲ್ಲಿ ಒಳ್ಳೆಯ ಪುಸ್ತಕಗಳನ್ನು ಓದುಗರಿಗೆ ಪರಿಚಯಿಸಲಾಗುತ್ತದೆ. ಇದು ಪುಸ್ತಕದ ವಿಮರ್ಶೆಯಲ್ಲ. ಪುಸ್ತಕ ಕಳಿಸಿಕೊಡಿ. ಆಯ್ಕೆ ನಮ್ಮದು

# ವಿಜಯನಗರ ಮತ್ತು ಶಾಸನಗಳು

ಡಾ|| ಎಚ್. ಎಸ್. ಗೋಪಾಲರಾವ್

ಪ್ರಾಚೀನ ಮತ್ತು ಮಧ್ಯಕಾಲೀನ ಇತಿಹಾಸದ ತಿಳುವಳಿಕೆಗಂತೂ ಶಾಸನಗಳು ಪ್ರಮುಖ ದಾಖಲೆಗಳಾಗಿವೆ. ಶಾಸನಗಳು ಹೊಸದಾಗಿ ದೊರೆತಂತೆಲ್ಲಾ ಇತಿಹಾಸ ಹೆಚ್ಚು ಸ್ಪಷ್ಟವಾಗುತ್ತದೆ. ಗಂಗ ವಂಶದ ಬಗೆಗೆ ತಾಮ್ರ ಶಾಸನಗಳ ಹಿನ್ನೆಲೆಯಲ್ಲಿ ಜೆ. ಎಫ್. ಫ್ಲೀಟ್ ಮತ್ತು ಬಿ. ಎಲ್. ರೈಸ್ ಅವರ ನಡುವೆ ನಡೆದಿರುವ ವಾದ ವಿವಾದಗಳನ್ನು ಗಮನಿಸಿದಾಗ ಹೊಸದಾಗಿ ದೊರೆಯುವ ಶಾಸನಗಳು ಸತ್ಯವನ್ನು ಹೊರಗೆಡಹುತ್ತವೆ ಎಂದು ಸ್ಪಷ್ಟವಾಗುತ್ತದೆ. ಗಂಗ ವಂಶದ ಅಸ್ತಿತ್ವದ ಬಗೆಗೇ ಅನುಮಾನ ಹೊಂದಿದ್ದ ಫ್ಲೀಟ್ ಅವರು, ಪೆನುಗೊಂಡೆಯ ಶಾಸನವು ದೊರೆತನಂತರ ತಮ್ಮ ಅಭಿಪ್ರಾಯಗಳನ್ನು ಬದಲಾಯಿಸಿಕೊಂಡರು. ನಂತರ ಗಂಗ ವಂಶಕ್ಕೆ ಸಂಬಂಧಿಸಿದ ಅನೇಕ ಶಿಲಾ ಶಾಸನಗಳೂ ಸಹ ದೊರೆತು ಗಂಗ ವಂಶದ ಬಗೆಗೆ ಅನೇಕ ಮಹತ್ವ ವಿಷಯಗಳು ಬೆಳಕಿಗೆ ಬಂದಿವೆ. ಹೀಗೆ ಶಾಸನಗಳು ಇತಿಹಾಸವನ್ನು ತಿಳಿಯಲು ಮಹತ್ವದ ದಾಖಲೆಗಳಾಗಿ ಸಹಕರಿಸುತ್ತವೆ. ಆದರೆ ತಾಮ್ರ ಶಾಸನಗಳ ಬಗೆಗೂ ಇದೇ ಅಭಿಪ್ರಾಯವನ್ನು ಇರಿಸಿಕೊಳ್ಳಲು ಸಾಧ್ಯವಿಲ್ಲ. ಗಂಗ ವಂಶಕ್ಕೆ ಸಂಬಂಧಿಸಿದ ಅನೇಕ ತಾಮ್ರ ಶಾಸನಗಳು ಪ್ರಕ್ಷಿಪ್ತ (Spurious) ಎಂದು ದೃಢಪಟ್ಟಿವೆ.

ಹೊಸ ಶಾಸನಗಳು ದೊರೆತಾಗ ಸಹಜವಾಗಿಯೇ ಕುತೂಹಲವಿರುತ್ತದೆ. ಅವು ಇತಿಹಾಸದ ಪುನಾರಚನೆಗೆ ಎಷ್ಟರಮಟ್ಟಿಗೆ ಸಹಕಾರಿಯಾಗುತ್ತವೆ ಎಂದು ಇತಿಹಾಸಕಾರರು ಕುತೂಹಲದಿಂದ ಕಾಯುತ್ತಾರೆ; ಪರೀಕ್ಷಿಸುತ್ತಾರೆ. ಅಧ್ಯಯನ ಮಾಡಿ ಹೊಸ ವಿಚಾರಗಳನ್ನು ಜನರ ಮುಂದಿಡುತ್ತಾರೆ. ಕತ್ತಲೆಯ ಮೂಲೆಯಲ್ಲಿ ಸೇರಿ ಹೋಗಿರುವ ಇತಿಹಾಸದ ಎಷ್ಟೋ ವಿಷಯಗಳು ಹೀಗೆ ಬಹಿರಂಗವಾಗುತ್ತವೆ; ಇತಿಹಾಸದ ಪುನಾರಚನೆಯ ಕಾರ್ಯ ಮುಂದುವರಿಯುತ್ತದೆ. ನಿಜವಾದ ಅರ್ಥದಲ್ಲಿ 'ಇತಿಹಾಸ' ಜನರ ಅರಿವಿಗೆ ಬರುತ್ತದೆ. ಭೂಮಿಯ ಗರ್ಭದಲ್ಲಿ ಅಡಗಿರುವ, ನೆಲದಾಳದಲ್ಲಿ ಹೂತು ಹೋಗಿರುವ, ಇತಿಹಾಸದ ಕುರುಹುಗಳು ಹೊರಬರಲು ನೆಲದೊಳಗೆ ಹುಡುಕಾಟ ನಡೆಸಬೇಕು.

### ಹುಡುಕಾಟ

ಇಂತಹ ಹುಡುಕಾಟಗಳು ನಡೆಯುತ್ತಲೇ ಇರುತ್ತವೆ. ಕರ್ನಾಟಕದಲ್ಲಿ ಇತ್ತೀಚಿಗೆ ತಲಕಾಡು, ಹಂಪಿ, ಸನ್ನತಿ ಇತ್ಯಾದಿ ಸ್ಥಳಗಳಲ್ಲಿ ಉತ್ಖನನ ಕಾರ್ಯ ನಡೆದಿದೆ; ಹೊಸ ವಿಚಾರಗಳು ಬೆಳಕಿಗೆ ಬಂದಿವೆ. ನಿನ್ನೆಯ ವಿಷಯಗಳು ಈಗ ಹೆಚ್ಚು ಸ್ಪಷ್ಟವಾಗುತ್ತಿವೆ. ಸುಮಾರು ವರ್ಷಗಳಿಂದ ಹಂಪಿಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಪುರಾತತ್ವ ಇಲಾಖೆಗಳು ಸತತವಾಗಿ ಎನ್ನುವಂತೆಯೇ ನಡೆಸುತ್ತಿರುವ ಉತ್ಖನನ ಕಾರ್ಯಗಳ ಫಲಿತಗಳು ಇತಿಹಾಸದ ಕಳಚಿಕೊಂಡಿದ್ದ ಕೊಂಡಿಗಳನ್ನು ಸೇರಿಸಲು ನೆರವಾಗಿವೆ.

ಹಂಪಿ ಎಂದೊಡನೆ ನಮಗೆ ನೆನಪಾಗುವುದು ವಿಜಯನಗರ; ವಿಜಯನಗರದ ಅರಸರು; ಕೃಷ್ಣದೇವರಾಯ ಇತ್ಯಾದಿ. ಹಂಪಿಯು ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ಬಹಳ ಮೊದಲೇ ಜನವಸತಿಯ ನೆಲೆಯಾಗಿತ್ತು ಎಂಬ ವಿಷಯವು ಈಗ ಹೆಚ್ಚು ಸ್ಪಷ್ಟವಾಗುತ್ತಿದೆ. ಹಂಪಿಯಲ್ಲಿ ಅರಮನೆಯ ಭಾಗವಾಗಿತ್ತು ಎಂದು ತಿಳಿಯಲಾಗಿರುವ ಭಾಗಗಳಲ್ಲಿ ದೊರೆತಿರುವ ಕ್ರಿ.ಶ. ೧ ಮತ್ತು ೨ನೇ ಶತಮಾನದ ಬ್ರಾಹ್ಮಿ ಲಿಪಿಯ ಮತ್ತು ಪ್ರಾಕೃತ ಭಾಷೆಯ ಎರಡು ಶಾಸನಗಳು ಕ್ರಿ.ಶ. ೧೩೩೬ರಲ್ಲಿ ವಿಜಯನಗರ ಎಂಬ ಊರಿನ ಸ್ಥಾಪನೆ ಆಯಿತು ಎಂಬ ನಂಬಿಕೆಯ ಮಾತನ್ನು ಪ್ರಶ್ನಿಸುವಂತೆ ಮಾಡಿವೆ. ಮಹಾನವಮಿಯ ದಿಬ್ಬದ ಮುಂದೆ ನೆಲದೊಳಗೆ ಸೇರಿಹೋಗಿದ್ದು ಈಗ ಬೆಳಕಿಗೆ ಬಂದಿರುವ ಒಂದು ಶಾಸನವು ಕಲ್ಯಾಣ ಚಾಲುಕ್ಯ ವಿಕ್ರಮಾದಿತ್ಯನ ಆಳ್ವಿಕೆಯ ಕಾಲಕ್ಕೆ ಸೇರಿದ್ದು (೨೧-೮-೧೦೭೬) ಅದರಲ್ಲಿ ಮಹಾಪ್ರಧಾನ ದಂಡನಾಯಕ ಸೋಮೇಶ್ವರ ಭಟ್ಟೋಪಾಧ್ಯಾಯನು ಮಠದಲ್ಲಿ ಪುರಾಣ ಓದುವವರಿಗೆ ದಾನ ನೀಡಿದ್ದನ್ನು ಉಲ್ಲೇಖಿಸಿದೆ. ಕ್ರಿ.ಶ. ೧೩ನೆಯ ಶತಮಾನದ ಪ್ರಸಿದ್ಧ ಕವಿಯಾದ ಹರಿಹರ, ಅವನ ಸೋದರಳಿಯ ಹಾಗೂ ಮತ್ತೊಬ್ಬ ಪ್ರಸಿದ್ಧ ಕವಿ ರಾಘವಾಂಕರ ನೆಲೆಯೂ ಆಗಿದ್ದ ಹಂಪಿಯು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಮೊದಲೇ ಪ್ರಬಲವಾದ ಜನವಸತಿಯ ನೆಲೆಯಾಗಿತ್ತು ಎಂಬ ಅಂಶವು ಖಚಿತವಾಗುತ್ತದೆ. ಈ ಎಲ್ಲಾ ಹೊಸ ವಿಚಾರಗಳು ಬೆಳಕಿಗೆ ಬರಲು ಅಲ್ಲಿ ನಡೆದಿರುವ ಹಾಗೂ ನಡೆಯುತ್ತಿರುವ ಉತ್ಖನನಗಳೇ ಕಾರಣವಾಗಿವೆ. ಬಹುತೇಕ ಈ ಉತ್ಖನನ ಕಾರ್ಯಗಳ ಆರಂಭವಾದದ್ದು ೧೯೭೬ರಲ್ಲಿ. ಆ ಮೊದಲೂ ಇಲ್ಲಿ ಶಾಸನಗಳು ದೊರೆತಿವೆ. ಇಲ್ಲಿನ ಪ್ರಾಚೀನ ಅವಶೇಷಗಳು, ವಿದೇಶೀ ಪ್ರವಾಸಿಗರ ಪ್ರವಾಸ ಕಥನಗಳು, ಮತ್ತಿನ್ನೂ ಅನೇಕ ದಾಖಲೆಗಳು ವಿಜಯನಗರದ ಬಗೆಗೆ ತಿಳಿಯಲು ಸಹಕಾರಿಯಾಗಿದ್ದವು. ಆದರೆ ಉತ್ಖನನದ ಆರಂಭದ ನಂತರ ದೊರೆಯುತ್ತಿರುವ ಐತಿಹಾಸಿಕ ಸಾಮಗ್ರಿಗಳು ವಿಜಯನಗರದ ಬಗೆಗೆ ಅನೇಕ ಹೊಸ ವಿಷಯಗಳನ್ನು ಬೆಳಕಿಗೆ ತರುತ್ತಿವೆ. ಈ ಉತ್ಖನನ ಕಾರ್ಯಗಳು ಒಂದು ಹಂತ ತಲುಪಿ ಅವುಗಳ ವ್ಯವಸ್ಥಿತ ಅಧ್ಯಯನ ಕಾರ್ಯ ನಡೆದಾಗ ಮತ್ತೆಷ್ಟೋ ಹೊಸ ವಿಷಯಗಳು ಮತ್ತು ವಿಚಾರಗಳು ಬೆಳಕು ಕಾಣುವುದು ಅಸಂಭವವಲ್ಲ. ಮೊದಲಿಗೆ ಒಂದು ಸಣ್ಣ ಹಳ್ಳಿಯಾಗಿದ್ದ ಹಂಪಿಯು ಕ್ರಮೇಣ ವಿಸ್ತಾರಗೊಂಡು ವಿಜಯನಗರದ ಅರಸರ ರಾಜಧಾನಿಯಾಗಿ ಪ್ರಸಿದ್ಧಿ ಪಡೆದು ರಕ್ಕಸಗಿ-ತಂಗಡಗಿ ಯುದ್ಧದ ನಂತರ ಹಾಳಾಗಿ ಹೋದದ್ದು ಕರ್ನಾಟಕದ ಇತಿಹಾಸದಲ್ಲಿ ಮರೆಯಲಾಗದ ಅಧ್ಯಾಯ. ಆ ಮೊದಲೇ ಉತ್ತರ ಭಾರತದ ಬಹುಭಾಗಗಳನ್ನು ತಮ್ಮ ವಶ ಮಾಡಿಕೊಂಡಿದ್ದ ಮೊಘಲರು ಮತ್ತು ದಕ್ಷಿಣ ಭಾರತದಲ್ಲಿ ಪ್ರಬಲರಾಗುತ್ತಿದ್ದ ಬಿಜಾಪುರದ ಸುಲ್ತಾನರ ಆಕ್ರಮಣವನ್ನು ತಡೆಗಟ್ಟಲು ದಕ್ಷಿಣ ಭಾರತದಲ್ಲಿ ನೆಲೆಗೊಂಡ ವಿಜಯನಗರ ಸಾಮ್ರಾಜ್ಯವನ್ನು ಆಳಿದ ಮೂರು ರಾಜ ವಂಶಗಳು (ಸಂಗಮ, ಸಾಳುವ ಮತ್ತು ತುಳುವ) ವಿಜಯನಗರದ ಬೆಳವಣಿಗೆಗೆ ಪ್ರೋತ್ಸಾಹಿಸಿದ್ದಾರೆ. ಒಂದನೆಯ ಹರಿಹರನ ಕಾಲದಿಂದಲೂ, ಹಂಪಿಯ ಆಸುಪಾಸಿನಲ್ಲಿ ವಿಜಯನಗರದ ಅರಸರ ಶಾಸನಗಳು ಯಥೇಚ್ಛವಾಗಿಯೇ ದೊರೆತಿವೆ.



*ಭಕ್ತರ ನಾಗಪ್ಪನಿಂದ ವಿನಾಯಕ ಅಶ್ವತ್ಥ ಬಾವಿಯ ನಿರ್ಮಾಣ ಕುರಿತ ಶಾಸನ*

### ಖಚಿತ ಮಾಹಿತಿ

ಈಚಿಗೆ ದೊರೆತಿರುವ ಶಾಸನವೊಂದು ಕೃಷ್ಣದೇವರಾಯನ ಪಟ್ಟಾಭಿಷೇಕ ದಿನಾಂಕದ ಬಗೆಗಿದ್ದ ಗೊಂದಲವನ್ನು ನಿವಾರಿಸಿದೆ. ಈ ಶಾಸನ ದೊರೆಯುವವರೆಗೆ ಕೃಷ್ಣದೇವರಾಯನ ಪಟ್ಟಾಭಿಷೇಕದ ದಿನಾಂಕವು ೮-೮-೧೫೦೯ ಎಂದು ತಿಳಿಯಲಾಗಿತ್ತು. ಹಂಪಿಯಲ್ಲೇ ದೊರೆತ ಈ ಶಾಸನದಿಂದ ಕೃಷ್ಣದೇವರಾಯನ ಪಟ್ಟಾಭಿಷೇಕವು ನಡೆದದ್ದು ೨೪-೧-೧೫೧೦ ಎಂದು ಖಚಿತವಾಗಿದೆ. ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕ

(ಮುಂದಿನ ಪುಟಕ್ಕೆ)

# ಬುದ್ಧನ ನೆರಳು



ಸುತ್ತಣ ಸೆಲೆ ಹೆಚ್ಚಿ
ಒಳಗಿನ ಕಾವೇರಿ
ವರುಷಗಳುರುಳಿ
ಕಾರಿರುಳ ಕಗ್ಗತ್ತಲಲಿ
ಬೆಳ್ಳಿ ಕೋಲ್ಮಿಂಚು
ನಭೋಮಂಡಲವೆಲ್ಲ
ಬೆಳಕು ಬೆಳಕು ಬೆಳಕು

ಆ ಬೆಳಕು
ತಿಳಿವಿನ ಅಳಿವಿನೊಳಗೆ ಇಳಿದು
ನಿಧನಿಧಾನವಾಗಿ ಪದಪದಗಳಲ್ಲಿ
ಕಣ ಕಣ ಕಣ ಹರಳುಗಟ್ಟಿ
ಫಳ ಫಳ ಸ್ಫಟಿಕ

ಮನದ ಮೂಲೆ ಮೂಲೆಯಲಿ ಮಿಳಿತವಾದ
ಜಾಣ್ಮೆಯ ಜತೆ ಕೆಲಕಾಲ ಕಳೆತು
ಬಾಳಿನೊಳಗಿನ ನೋವು ನಲಿವಿನ
ಕಾಮನಬಿಲ್ಲಿನ ಏಳು ಬಣ್ಣ ಹೀರಿಕೊಂಡು

ಕರುಳ ಕರುಣೆಯ ಕಣಿವೆ ಹಾದು
ನಾಲಗೆಯ ಮೇಲಿಂದ ಸಾಲು ಸಾಲಾಗಿ
ಬರುವಾಗ ಕರಗಿ ನೊರೆ ಹಾಲಾಗಿ
ಅಲೆ ಅಲೆಯಾಗಿ ಹರಿವ ಹೊಳೆಯಾಗಿ

ಇಂದು ಇಲ್ಲಿ
ನೂರು ಗಾವುದ ದೂರ
ನಾಳೆ ಅಲ್ಲಿ
ಎದೆಕದಗಳ ಮಿದುವಾಗಿ ತಟ್ಟಿ ತೆರೆದು
ಒಂದು ಹತ್ತು ನೂರು ಸಾವಿರ
ಅಂತರಾತ್ಮದ ಹಣತೆಗೆ ತಣ್ಣನೆ ಎಣ್ಣೆಯಾಗಿ
ಅವರವರ ಕಣ್ಣುಗಳಿಗೆ ಅವರೊಲವಿನ ಬಣ್ಣವಾಗಿ
ಅವರವರ ದಾರಿಗಳಿಗೆ ನಿರಂತರ ದೀವಿಗೆಯಾಗಿ
ದೇಶ ಭಾಷೆಗಳಾಚೆ
ಕಾಲಕೋಶಗಳಾಚೆ
ಸಾವಿರ ಸಾವಿರ ದೀಪಗಳಾಗಿ
ಸಾವಿರದ ಬೆಳಕಾಗಿ

**ಸಂಕುಲಜೀವ**
ಮಲ್ಲಿಗೆ, ೧೯/೨, ಮಹಿಷಿ ರಸ್ತೆ, ಮಾಳಮಡ್ಡಿ, ಧಾರವಾಡ - ೫೮೦ ೦೦೭

---

*(ಹಿಂದಿನ ಪುಟದಿಂದ)*

ದಂದು ಹಂಪಿಯ ವಿರೂಪಾಕ್ಷನ ಸೇವೆಗಾಗಿ ಸಿಂಗ ನಾಯಕನಹಳ್ಳಿ ಗ್ರಾಮವನ್ನು ದಾನವಾಗಿ ನೀಡಿದ್ದನ್ನು ಈ ಶಾಸನವು ದಾಖಲಿಸಿದೆ. ದಾನವಾಗಿ ನೀಡಲ್ಪಟ್ಟ ಸಿಂಗನಾಯಕನ ಹಳ್ಳಿಯಲ್ಲಿ ಕೂಡಾ ಈ ದಾನದ ವಿಷಯವನ್ನು ಸಮರ್ಥಿಸುವ ಶಾಸನವೊಂದು ದೊರೆತು ಕೃಷ್ಣದೇವರಾಯನ ಪಟ್ಟಾಭಿಷೇಕದ ದಿನಾಂಕವು ಖಚಿತ ವಾಗಿದೆ.

ಮೂಲ ಹಂಪಿಯ ಸುತ್ತಲೂ ಬೆಳೆದ ವಿಜಯನಗರವು ವಿಸ್ತಾರವಾದಂತೆಲ್ಲಾ ಪ್ರತಿಯೊಂದು ವಿಸ್ತರಣಕ್ಕೂ ಆಯಾ ಕಾಲದ ಅಥವಾ ಆ ವಿಸ್ತರಣೆಗಳಿಗೆ ಕಾರಣರಾದ ದೊರೆಗಳ ಹೆಸರುಗಳನ್ನು ಇಡಲಾಗಿದೆ. ಕೃಷ್ಣದೇವರಾಯನ ಹೆಸರನ್ನು ನೆನಪು ಮಾಡುವ ಅಥವಾ ಕೃಷ್ಣ ದೇವಾಲಯದ ಸುತ್ತಲಿನ 'ಕೃಷ್ಣಾಪುರ', ಅಚ್ಯುತದೇವರಾಯನ ಹೆಸರಿನ ಅಥವಾ ಅಚ್ಯುತರಾಯ ದೇವಾಲಯದ ಸುತ್ತಲಿನ 'ಅಚ್ಯುತಾಪುರ' ಇತ್ಯಾದಿ ವಿಸ್ತರಣಗಳಲ್ಲದೆ ವಿಠ್ಠಲ ದೇವಾಲಯಕ್ಕೆ ಹೊಂದಿಕೊಂಡ 'ವಿಠ್ಠಲಾಪುರ' ಇವೆಲ್ಲವೂ ವಿಜಯನಗರದ ಭಾಗಗಳಾಗಿದ್ದವು. ವಿಸ್ತಾರವಾಗಿದ್ದ ನಗರಕ್ಕೆ ಹೆಬ್ಬಾಗಿಲು, ಬಾಗಿಲು, ದಿಡ್ಡಿ ಮತ್ತು ಕೊತ್ತಲಗಳಿದ್ದವು. ಶಾಸನಗಳ ನೆರವಿನಿಂದ ಸಿಂಗಾರದ ಹೆಬ್ಬಾಗಿಲು, ಬೇಟೆಕಾರರ ಹೆಬ್ಬಾಗಿಲು, ಕೋಟೆ ಶಂಕರದೇವರ ಬಾಗಿಲು, ಸ್ವಾಮಿದೇವರ ಬಾಗಿಲು, ಹೊದೆಯ ಬಾಗಿಲು, ಸೋಮವಾರದ ಬಾಗಿಲು, ಉಪ್ಪರಿಗೆ ಬಾಗಿಲು, ಪೆನುಗೊಂಡೆ ಬಾಗಿಲು, ಜಡೆಯಶಂಕರದೇವರ ದಿಡ್ಡಿ, ಹಂಪಾದೇವಿಯ ದಿಡ್ಡಿ, ಮತಂಗೇಶ್ವರ ದಿಡ್ಡಿ, ಪ್ರತಾಪ ಕೊತ್ತಳ, ಸ್ವಾಮಿದ್ರೋಹರಗಂಡನ ಕೊತ್ತಳ, ಮಳಲ ವಿನಾಯಕ ಕೊತ್ತಳ, ಇತ್ಯಾದಿಗಳನ್ನು ಗುರುತಿಸಲು ಸಾಧ್ಯವಾಗಿದೆ. ವಿಜಯನಗರದಲ್ಲಿ ಹಿಂದೆ ದೊರೆತಿದ್ದ ಮತ್ತು ಈಗ ದೊರೆತಿರುವ ಶಾಸನಗಳು ಮೂಲ ಹಂಪಿ ಮತ್ತು ವಿಜಯನಗರದ ಅರಸರ ಕಾಲದಲ್ಲಿ ವಿಜಯನಗರವು ಬೆಳೆದ ಮತ್ತು ವಿಸ್ತಾರಗೊಂಡ ಬಗೆಯನ್ನು ತಿಳಿಯಲು ನೆರವಾಗಿವೆ. ಕ್ರಿ.ಶ. ೧೪೩೯ರ ಒಂದು ಶಾಸನವು ಎರಡನೆಯ ದೇವರಾಯನ ಕಾಲದಲ್ಲಿ ಅಹಮದ್ ಖಾನ್ ಎಂಬುವವನು ಒಂದು ಧರ್ಮಶಾಲೆ ಮತ್ತು ಬಾವಿಯೊಂದನ್ನು ಕಟ್ಟಿಸಿದ ವಿಷಯವನ್ನು ತಿಳಿಸುತ್ತದೆ.

ಹೀಗೆ ಶಾಸನಗಳು ಇತಿಹಾಸದ ಪುನಾರಚನೆಗೆ, ಮತ್ತು ಸತ್ಯಕ್ಕೆ ಹತ್ತಿರವೆನಿಸುವ ಇತಿಹಾಸವನ್ನು ತಿಳಿಯಲು ನೆರವಾಗುತ್ತವೆ. ಭೂಮಿಯ ಒಳಗೆ ಸೇರಿಹೋಗಿರುವ ಶಾಸನಗಳನ್ನು ಬೆಳಕಿಗೆ ತರಲು ಉತ್ಖನನಗಳು ಅವಶ್ಯಕ. ಹಂಪಿಯಲ್ಲಿ ನಡೆಯುತ್ತಿರುವ ಉತ್ಖನನ ಕಾರ್ಯದಿಂದ ವಿಜಯನಗರದ ಇತಿಹಾಸವು ಸ್ಪಷ್ಟವಾಗಿ ತಿಳಿದು, ಈವರೆಗೆ ಇರುವ ಹಲವಾರು ಅನುಮಾನಗಳು ನಿವಾರಣೆ ಆಗುವ ಸೂಚನೆಗಳು ಸಂಶೋಧನ ಕ್ಷೇತ್ರದಲ್ಲಿ ಭರವಸೆಯನ್ನು ಹುಟ್ಟಿಸಿವೆ.

**ಡಾ|| ಎಚ್. ಎಸ್. ಗೋಪಾಲರಾವ್**
'ಸ್ವಸ್ತಿಶ್ರೀ ಸ್ಕಂದ', ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು(ಗ್ರಾ.)ಜಿಲ್ಲೆ - ೫೬೨೧೨೩

---

## ಒಂಟಿ ಪಯಣ

ಮಂಜು ಹನಿಯ
ಸವಿ ಮುತ್ತಿಗೆ
ತುಟಿಯರಳಿಸಿ ನಕ್ಕ
ಮಲ್ಲಿಗೆ ಕನಸು ಅದೆಷ್ಟು ರಮ್ಯ !

ಮೇ ಧಗೆಯ ನೋವಿನಲಿ
ಬೆಂದು ಚೀರಿಟ್ಟ
ನೆಲವನ್ನಪ್ಪಿದ
ಪಕಳೆ ಮನದ ನನಸೆಷ್ಟು ರೌದ್ರ, ?!

ನಿನ್ನ ಕನಸಿನರಮನೆಯ
ಹೂ-ಮಂಚದಲಿ
ನನ್ನೀ ದೌರ್ಭಾಗ್ಯ ಮುಳ್ಳು
ಆಗೀಗ ನಿನಗೂ ನಾಟುವುದು ಬೇಡ !

ಸಮಾನಾಂತರ ಹಾದಿಗುಂಟ
ಗುರಿಯರಿಯದೆ ಪಯಣಿಸಿದ
ನಾವು -
ಕಹಿ ನೆನಪ ಬುತ್ತಿ ಹಿಡಿದು
ಮುಖಾಮುಖಿ ಆಗುವುದೂ ಬೇಡ !

ಅದಕ್ಕೆ ಗೆಳೆಯಾ -
ನನ್ನ [illegible] !
ನನ್ನ [illegible] !!

**ಶೋಭಾ ಪ್ರಮೋದ್**
[illegible] ಏಜೆನ್ಸೀಸ್, ಮಾಡ್‌ಗಾವ್ [illegible]
[illegible] ಜಿಲ್ಲೆ, ಮಹಾರಾಷ್ಟ್ರ

# ಪೃಥ್ವಿಯ ಮೇಲೆ ಜೀವಿಯ ಆರಂಭ ಎಲ್ಲಿಂದ ?

ಡಾ॥ ವಿರುಪಾಕ್ಷ ಕೆ. ಬಣಕಾರ

ಈ ಸರಳ ಪ್ರಶ್ನೆಗೆ ಸಮರ್ಪಕವಾದ ಉತ್ತರ ವಿಜ್ಞಾನಿಗಳಿಗಿನ್ನೂ ನಿಗೂಢ ಸಮಸ್ಯೆಯಾಗಿಯೇ ಉಳಿದಿದೆ. ಮಾನವ, ಮಂಗಳನನ್ನು ಕಂಡಿದ್ದೂ ಆಯಿತು, ಕೃತ್ರಿಮವಾಗಿ ಪ್ರಯೋಗಾಲಯದಲ್ಲಿ ಹೊಸ ಜೀವಿಗಳನ್ನು ಸೃಷ್ಟಿಸಿದ್ದೂ ಆಯಿತು, ಆದರೆ ಜೀವಿಯ ಮೂಲವನ್ನು ಕಂಡುಹಿಡಿಯುವುದಿನ್ನೂ ಆಗಿಲ್ಲ. ಈ ದಿಸೆಯಲ್ಲಿ ನಮ್ಮ ತಿಳಿವಳಿಕೆಯಲ್ಲಿ ಸಾಕಷ್ಟು ಪ್ರಗತಿಯಾಗಿದ್ದರೂ, ಜೀವಿಯ ಮೂಲದ ಪ್ರಶ್ನೆಗೆ ಹುಡುಕಿರುವ ಕೆಲವು ಉತ್ತರಗಳಲ್ಲಿನ್ನೂ ಕಲ್ಪನೆಯ ಅಂಶ ತುಂಬಿದೆ. ಮೊದಲನೆಯ ಪ್ರಶ್ನೆ, ಪೃಥ್ವಿಯ ಮೇಲೆ ಜೀವಿಯ ಉತ್ಪತ್ತಿ ಹೊರಜಗತ್ತಿನಿಂದ ಆಗಮಿಸಿದ ಬೇರೊಂದು ಜೀವಿಯಿಂದಾಯಿತೇ ಅಥವಾ ಇಲ್ಲಿಯೇ ದೊರೆತ ನಿರ್ಜೀವ ದ್ರವ್ಯದಿಂದಾಯಿತೆ ಎನ್ನುವುದು. ಹತ್ತೊಂಬತ್ತನೇ ಶತಮಾನದ ಆರಂಭದಲ್ಲಿ ಅರ್‍ಹೀನಿಯಸ್ ಎಂಬ ವಿಜ್ಞಾನಿ, ಬೇರೆ ನಕ್ಷತ್ರಗಳಿಂದ ಹೊರಹೊಮ್ಮುವ ಕಿರಣಗಳು ಅತಿಸೂಕ್ಷ್ಮ ಜೀವಿಗಳನ್ನು ವಿಶ್ವದ ಒಂದು ಜಗತ್ತಿನಿಂದ ಇನ್ನೊಂದು ಜಗತ್ತಿಗೆ ಸಾಗಿಸು ವಲ್ಲಿ ಶಕ್ತವಾಗಿವೆ ಎಂದು ಪ್ರತಿಪಾದಿಸಿ, ಇದಕ್ಕೂ ಮೊದಲೇ ಪ್ರಚಲಿತವಿದ್ದ ಪುರಾತನ ಪಾನ್ಸ್‌ಪರ್ಮಿಯ ಎನ್ನುವ ವಿಚಾರ ಹಾಗೂ ಹದಿನೇಳನೇ ಶತಮಾನದ ಫ್ರಾನ್ಸಿಸ್ಕೊ ರೆಡಿ ಎಂಬ ವಿಜ್ಞಾನಿಯ ಸಿದ್ಧಾಂತಗಳನ್ನು ಪುಷ್ಟೀಕರಿಸಿದ. ಪಾನ್ಸ್‌ಪರ್ಮಿಯ ವಿಚಾರದ ಪ್ರಕಾರ, ಪೃಥ್ವಿಯ ಮೇಲೆ ಜೀವಿಯ ಉಗಮ ಅಂತರಿಕ್ಷದಲ್ಲಿ ಸಾಗಿ ಬಂದಿದ್ದ ಜೀವಿಯಿಂದಲೇ ಮಾತ್ರ ಸಾಧ್ಯವೆನ್ನುವುದಾಗಿತ್ತು. ಹಾಗಿದ್ದರೆ, ಅಂತರಿಕ್ಷದಲ್ಲಿರುವ ಹಲವಾರು ಮಾರಣಾಂತಕವಾದ ಕಿರಣ ಹಾಗೂ ಶೂನ್ಯಕ್ಕಿಂತ ಕೆಳಗಿರುವ ನಿರ್ವಾತವನ್ನು ತಡೆದುಕೊಂಡು ಹಲವಾರು ಬೆಳಕಿನ ವರ್ಷಗಳಷ್ಟು ದೂರವಿರುವ ಬೇರೆ ನಕ್ಷತ್ರ ಮಂಡಲದಿಂದ ಕೋಟ್ಯಾಂತರ ಮೈಲು ದೂರವನ್ನು ಪ್ರಯಾಣಿಸಿ ಜೀವಂತವಾಗಿ ನಮ್ಮ ಗ್ರಹವನ್ನು ತಲುಪಲು ಅಂತಹ ಹೊರಜಗತ್ತಿನ ಸೂಕ್ಷ್ಮಜೀವಿಗಳು ಶಕ್ತವೇ ಎನ್ನುವ ತಾರ್ಕಿಕ ಪ್ರಶ್ನೆಗೆ ಸಮರ್ಪಕವಾದ ಉತ್ತರವಿಲ್ಲವೆನ್ನಬಹುದು. ಅಂದಮೇಲೆ, ಪೃಥ್ವಿಯ ಮೇಲೆ ಜೀವಿಯ ಉದ್ಭವ ಇಲ್ಲಿಯೇ ಆಗಿರಬೇಕು ಎಂದ ಹಾಗಾಯಿತು. ಆದಿಮ ಜೀವಿಯ ಉದ್ಭವ ಸಮುದ್ರದಲ್ಲಾಯಿತೋ ಅಥವಾ ಭೂಮಿಯ ಮೇಲಾಯಿತೋ...? ಜೀವಿಯ ರಚನೆಗೆ ಬೇಕಾದ ಜೈವಿಕ ಸಾಮಗ್ರಿಗಳು ಎಲ್ಲಿಂದ ದೊರೆತವು...? ಎನ್ನುವುದು ಮುಂದಿನ ಪ್ರಶ್ನೆ.

ಸುಮಾರು ೪೫೦೦ ದಶಲಕ್ಷ ವರ್ಷಗಳ ಹಿಂದೆ ಬ್ರಹ್ಮಾಂಡದಲ್ಲಿ ಒಂದೇ ಸಮನೆ ವೇಗವಾಗಿ ತಿರುಗುತ್ತಿದ್ದ ಉಗ್ರ-ತಂಪಿನ, ಬೆಳಕುರಹಿತ ಅಂತರ್‌ನಕ್ಷತ್ರ ಅನಿಲ ಹಾಗೂ ಧೂಳಿನ ಕಾರ್ಮೋಡಗಳ ಚಪ್ಪಟೆ ಸುಳಿ ತೂರಿಬಂದು ನಮ್ಮ ಸೌರಮಂಡಲದ ನಿರ್ಮಾಣದೊಂದಿಗೆ ಪೃಥ್ವಿಯ ಜನನಕ್ಕೆ ನಾಂದಿಯಾಯಿತು ಎನ್ನುವುದನ್ನು ಬಹಳಷ್ಟು ವಿಜ್ಞಾನಿಗಳು ಒಪ್ಪಿದ್ದಾರೆ. ನಮ್ಮ ಗ್ರಹದ ಜನನದ ನಂತರ, ಹಲವಾರು ದಶಲಕ್ಷ ವರ್ಷ ಅವಧಿಯಲ್ಲಿ ಒಂದೇ ಸಮನೆ ಭೂಮಿಯನ್ನು ಅಪ್ಪಳಿಸುತ್ತಿದ್ದ ಧೂಮಕೇತುಗಳು, ಉಲ್ಕೆಗಳು, ಕ್ಷುದ್ರಗ್ರಹಗಳು ಹಾಗೂ ಅವುಗಳಿಂದ ತೂರಿಬಂದ ವಿಶ್ವಧೂಳಿ (Cosmic dust) ಜೀವಿಯ ಉಗಮ ಹಾಗೂ ವಿಕಾಸಕ್ಕೆ ಅವಕಾಶ ನೀಡದಿದ್ದರೂ, ಅದರ ಹುಟ್ಟಿಗೆ ಅವಶ್ಯಕವಿರುವ ಪರಿಸರ (ನೀರು, ವಾತಾವರಣ ಇತ್ಯಾದಿ) ಸೃಷ್ಟಿಸಲು ಸಹಾಯವಾಯಿತೆನ್ನುವ ನಂಬಿಕೆ ಹಲವರದು.



ಚಿತ್ರ ೧. ಸಾಗರ ತಳದಲ್ಲಿನ ಬಿಸಿ ದ್ರವ ಬುಗ್ಗೆ ಹಾಗೂ ಅದರ ಪರಿಸರದಲ್ಲಿ ಜೀವಿಸಿರುವ ವಿವಿಧ ಜೀವಿಗಳು

ವಿಶ್ವಧೂಳಿ, ಧೂಮಕೇತು, ಉಲ್ಕಾಪಾತಗಳ ಅತಿವೃಷ್ಟಿ ಕ್ರಮೇಣ ಕಡಿಮೆಯಾಗಿ, ಸುಮಾರು ೩೮೦೦ ದಶಲಕ್ಷ ವರ್ಷಗಳ ಹಿಂದೆ ಏಕಕೋಶಜೀವಿ, ನೇರಳೆ ಕೀಟಾಣುವಿನ (Purple bacteria) ಜನ್ಮ, ಸಾಗರ ತಳದ ಉಷ್ಣದ್ರವ ಬುಗ್ಗೆಗಳ (Hydrothermal vents) ಪರಿಸರದಲ್ಲಾಯಿತೆಂದು ಗ್ಲಾಸ್‌ಬಿ ಪ್ರತಿಪಾದಿಸಿರುವರು. ಮುಂದಿನ ಕೇವಲ ಮೂವತ್ತೇ ದಶಲಕ್ಷ ವರ್ಷಗಳಲ್ಲಿ ಇವುಗಳ ಸಂತತಿ ತೀವ್ರವಾಗಿ ಸಾಗರ ತಳದಲ್ಲಿ ಪಸರಿಸತೊಡಗಿತು. ಆ ಬುಗ್ಗೆಗಳಿಂದ ಹೊರ ಚಿಮ್ಮಿದ ಉಷ್ಣದ್ರವದಲ್ಲಿ ಇಂಗಾಲದ ಡೈ-ಆಕ್ಸೈಡ್‌ನ ಪ್ರಮಾಣ, ಇಂದು ನಾವು ಸಾಗರ ಗರ್ಭದಲ್ಲಿ ಕಾಣುವ ಬುಗ್ಗೆಗಳ ದ್ರವದಲ್ಲಿನ ಪ್ರಮಾಣಕ್ಕಿಂತ ೨-೩ ಪಟ್ಟು ಹೆಚ್ಚಾಗಿರುವುದು ತಿಳಿಯಿತು. ಜೈವಿಕ ಪದಾರ್ಥಗಳ ರಚನೆಗೆ ಮೂಲಭೂತವಾಗಿರುವ ಹಲವು ಕಾರ್ಬಾನಿಕ-ಅಣುಗಳ ಸಂಶ್ಲೇಷಣೆ, ಈ ಇಂಗಾಲದ ಡೈ-ಆಕ್ಸೈಡ್‌ನ ಅಪಕರ್ಷಣೆಯಿಂದ ಸಾಧ್ಯವಾಗಿ, ಆದಿಮ ಜೀವ ಕೋಶಗಳ ಜನ್ಮವಾಯಿತು ಎಂದು ತಿಳಿಯಬಹುದು. ಈ ರೀತಿಯ ಸಂಶ್ಲೇಷಣೆಯ ಸಂದರ್ಭದಲ್ಲಿ, ಉಷ್ಣದ್ರವದಲ್ಲಿ ಕರಗಿದ್ದ ಕಬ್ಬಿಣ ಉತ್ತೇರಿಸಲ್ಪಟ್ಟು, ಜಗತ್ತಿನ ಹಲವಾರು ಕಬ್ಬಿಣದ ಖನಿಜ ಪಟ್ಟಗಳು ರಚನೆಯಾದವು ಎಂದು ಭೂವಿಜ್ಞಾನಿಗಳ ಅಭಿಪ್ರಾಯವಾಗಿದೆ. ಇಂತಹ ಖನಿಜ ಪಟ್ಟಗಳಲ್ಲಿ ಕಬ್ಬಿಣ ಪಟ್ಟ ಪ್ರಮುಖವಾದದ್ದು. ಹೀಗೆ ಅಜೈವಿಕ ರಾಸಾಯನಿಕ ಕ್ರಿಯೆಗಳಿಂದ ಜೀವಿಯ ಆರಂಭ ಸಾಗರ ತಳದಲ್ಲಾಯಿತು ಎನ್ನುವ ತರ್ಕದಲ್ಲಿ ತಥ್ಯ ಕಾಣಬಹುದು. ಹಾಗಾದರೆ, ಇಂದೂ ಕೂಡ ಸಾಗರ ತಳದಲ್ಲಿ ಹಲವಾರು ಕ್ರಿಯಾಶೀಲ ಉಷ್ಣದ್ರವ ಬುಗ್ಗೆಗಳು ಹರಡಿವೆ. ಈ ಬುಗ್ಗೆಗಳ ದ್ರವದ ಉಷ್ಣತೆ ೧೫೦ ಡಿಗ್ರಿ ಸೆಲ್ಸಿಯಸ್‌ಗೂ ಹೆಚ್ಚಾಗಿರುವುದು. ಇಂಥ ಪರಿಸರದಲ್ಲಿ, ಇಂದು ಅಲ್ಲಿ ಜೈವಿಕ ಕ್ರಿಯೆ ಸಾಗುತ್ತಿದೆಯೇ ಎಂಬ ಪ್ರಶ್ನೆ ಸಹಜವಾದದ್ದು. ಹೌದು, ಇಂದು ಕೂಡ ಇಂತಹ ಬುಗ್ಗೆಗಳ ಪರಿಸರದಲ್ಲಿ ವಿವಿಧ ಕೀಟಾಣುಗಳ ವಸತಿ ಹೇರಳವಾಗಿ ಬೆಳೆದು ಕಾರ್ಪೆಟ್ಟಿನಂತೆ ಹರಡಿಕೊಂಡಿರುವುದನ್ನು ಸಾಗರ ವಿಜ್ಞಾನಿಗಳು ತೋರಿಸಿದ್ದಾರೆ. ಅಷ್ಟೇ ಏಕೆ..., ಹಲವು ವಿಕಸಿತ ಬಹುಕೋಶೀಯ ಉನ್ನತ ವರ್ಗದ ಜೀವಿಗಳು ಕೂಡ ಆ ಪರಿಸರದಲ್ಲಿ ಜೀವಿಸುತ್ತಿರುವುವು (ಚಿತ್ರ ೧).

ಮೂಲತಃ ಸಾಗರ ತಲದಲ್ಲಿ ಪ್ರಪ್ರಥಮ ಆದಿಮ ಏಕಕೋಶೀಯ ಜೀವಿಯ ಉಗಮವನ್ನು ಎಲ್ಲರೂ ಒಪ್ಪಿದ್ದರೂ, ಜೈವಿಕ ಕ್ರಿಯೆ ಆರಂಭವಾಗುವುದಕ್ಕೆ ಅವಶ್ಯವಿರುವ ಕಚ್ಚಾ ಸಾಮಗ್ರಿಗಳ ಪೂರೈಕೆಯ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಜೀವಿಯ ರಚನೆಗೆ ಪ್ರೊಟೀನ್‌ಗಳು ಅವಶ್ಯ. ಪ್ರೊಟೀನ್‌ಗಳ ರಚನೆಗೆ ಅಮಿನೊ-ಆಮ್ಲಗಳು ಅವಶ್ಯ. ಸ್ಟ್ಯಾನ್ಲಿ ಮಿಲ್ಲರ್ ಪ್ರಯೋಗಗಳ ಆಧಾರದ ಮೇಲೆ ಪ್ರತಿಪಾದಿಸಿದ ''ಆದಿಮ ಸಾರು'' (Primordial soup)ನಲ್ಲಿ ಜೈವಿಕ ಕ್ರಿಯೆ ಆರಂಭವಾಗಲು ಅವಶ್ಯವಿದ್ದ ಎಲ್ಲ ಘಟಕಾಂಶಗಳು ಲಭ್ಯವಿದ್ದವು. ಈ ಆದಿಮ ಸಾರು, ಆದಿಮ-ಸಾಗರದ ನೀರಿನೊಂದಿಗೆ ಬೆರೆತು ಕೊಂಡೊಡನೆ, ಜೀವಿಯ ಉಗಮಕ್ಕೆ ಬೇಕಾದ ಸಮರ್ಪಕ ಪರಿಸರ ದೊರೆತು, ಹಲವಾರು ಅ-ಜೈವಿಕ ರಾಸಾಯನಿಕ ಕ್ರಿಯೆಗಳಿಂದ ಪ್ರೊಟೀನ್ ಸಂಶ್ಲೇಷಣೆಯಾಗಿ ಜೀವಿಯ ಉತ್ಪತ್ತಿಯಾಯಿತು ಎನ್ನುವ

ಅಭಿಪ್ರಾಯ ಹೊಂದಿದವರು ಸಾಕಷ್ಟು ಇದ್ದಾರೆ. ಈ ನಿಟ್ಟಿನಲ್ಲಿ ರಷ್ಯನ್ ವಿಜ್ಞಾನಿ ಓಪರಿನ್ ಮತ್ತು ಬ್ರಿಟಿಷ್ ವಿಜ್ಞಾನಿ ಜೆ. ಡಿ. ಬರ್ನಾಲ್ ಅವರ ಸಾಧನೆಗಳನ್ನು ಸ್ಮರಿಸಿಕೊಳ್ಳಬಹುದು. ಇಲ್ಲಿಗೆ ನಿಲ್ಲಲಿಲ್ಲ ಸರಿಯಾದ ಉತ್ತರದ ಬೇಟೆ. ಅಂತರಿಕ್ಷ-ರಸಾಯನ ವಿಜ್ಞಾನಿಗಳು ಹೇಳುವುದೇ ಬೇರೆ. ಕ್ರಿಸ್ಟೋಫರ್ ಚೈಬ ಎನ್ನುವ ವಿಜ್ಞಾನಿ, ಅಂತರ್‌ಗ್ರಹ ಧೂಳಿ (Inter planetary dust), ಉಲ್ಕಾಪಾತ, ಧೂಮಕೇತು ಇತ್ಯಾದಿಗಳು ಒಂದೇಸಮನೆ ಪೃಥ್ವಿಯನ್ನಪ್ಪಳಿಸುತ್ತ ನಮ್ಮ ಜಲಗೋಳ ಹಾಗೂ ವಾಯುಮಂಡಲವನ್ನು ರಚಿಸಿದವು ಎಂದು ೧೯೯೦ರಿಂದಲೇ ಪ್ರತಿಪಾದಿಸುತ್ತಿದ್ದಾನೆ. ಆತನ ತರ್ಕ ಏನೇ ಇದ್ದರೂ, ಒಂದು ವಿಷಯ ಮಾತ್ರ ಸತ್ಯ; ಅದೇನೆಂದರೆ..., ಇಂದಿಗೂ ನಮ್ಮ ವಾತಾವರಣದಲ್ಲಿ ಪ್ರತಿದಿನ ನೂರಾರು ಟನ್ನುಗಳಷ್ಟು ಅಂತರಿಕ್ಷ-ಧೂಳಿ ಕಣಗಳ (ಚಿತ್ರ ೨) ಪ್ರವೇಶವಾಗುತ್ತಲೇ ಇದೆ. ಈ ಕಣಗಳು ಅತ್ಯಂತ ಸೂಕ್ಷ್ಮವಾಗಿದ್ದು, ಘನೀಕರಿಸಿದ ನೀರಿನಂಶವನ್ನಷ್ಟೇ ತಮ್ಮಲ್ಲಿ ಅಡಗಿಸಿಕೊಂಡಿಲ್ಲ. ಅದಕ್ಕೂ ಪ್ರಾಮುಖ್ಯವಾಗಿ, ಜೈವಿಕ ಕ್ರಿಯೆಗೆ ಅತ್ಯವಶ್ಯವಿರುವ ಹಲವು ಕಾರ್ಬನಿಕ ಅಣುಗಳನ್ನೂ ಹೊಂದಿರುವುದು ತಿಳಿದು ಬಂದಿದೆ. ಅಂದರೆ..., ನಮ್ಮ ಪೃಥ್ವಿ ಘನೀಕರಿಸುತ್ತ ರೂಪಿತವಾದಂತೆ, ಬಾಹ್ಯ-ಜಗತ್ತಿನಿಂದ ಬೀಸಿಬಂದ ವಿಶ್ವ-ಕಣಗಳು (Cosmic dust) ತಮ್ಮೊಂದಿಗೆ, ಪೃಥ್ವಿಯ ಪ್ರಪ್ರಥಮ ಜೀವಿಯ ಉಗಮಕ್ಕೆ ಅವಶ್ಯವಿದ್ದ ಜೈವಿಕ ಸಾಮಗ್ರಿಗಳನ್ನು ತಂದು ಚೆಲ್ಲಿರಬಹುದಲ್ಲ. ಹೌದು, ನಮ್ಮ ಗ್ರಹದ ವಾತಾವರಣವನ್ನು ಪ್ರವೇಶಿಸುತ್ತಿರುವ ಇಂತಹ ಧೂಳಿಕಣಗಳಲ್ಲಿ ಕ್ವಿನೋನ್, ಅಮಿನೊ- ಆಮ್ಲ, ಆಂಫಿಫೈಲಿಕ್ ಇತ್ಯಾದಿ ಜೈವಿಕ-ಅಣುಗಳನ್ನು ಶೋಧಿಸಲಾಗಿದೆ. ಈ ಕ್ವಿನೋನ್‌ಗಳ ರಚನೆ, ಸಸ್ಯಕೋಶಗಳಿಗೆ ಶಕ್ತಿಯ ಸರಬರಾಜಿಗೆ ಅವಶ್ಯವಿರುವ ಹರಿತ್ತಿನ (Chlorophyll) ಅಣುವನ್ನು ಸುಮಾರಾಗಿ ಹೋಲುತ್ತದೆ.

ಇತ್ತೀಚೆಗೆ ನಮ್ಮ ಸೌರಮಂಡಲದ ಪರಿಧಿಯಲಿ ಹಾದು ಹೋದ ಹ್ಯಾಲಿ, ಹೇಲ್-ಬಾಪ್, ಹ್ಯಾಕುಟಾಕೆ ಧೂಮಕೇತುಗಳು ಹೇರಳ ಪ್ರಮಾಣದಲ್ಲಿ ಜೈವಿಕ-ದ್ರವ್ಯವನ್ನು ಹೊಂದಿರುವುದಾಗಿ ವಿಜ್ಞಾನಿಗಳು ತಿಳಿಸಿದ್ದಾರೆ. ಈ ದ್ರವ್ಯದಲ್ಲಿ ಮೀಥೇನ್, ಈಥೇನ್‌ಗಳಲ್ಲದೆ ಹಲವಾರು ಕಾರ್ಬನಿಕ-ಅಣುಗಳಿರುವುದನ್ನು ಪತ್ತೆ ಹಚ್ಚಲಾಗಿದೆ. ನಮ್ಮ ಸೌರ ಮಂಡಲದ ಒಳಪರಿಧಿಯಲ್ಲಿ ಧೂಮಕೇತು ಹಾದು ಹೋಗುವಾಗ ಅದರ ಅಲ್ಪಭಾಗ ಕುದಿದು ಆವಿ ಹಾಗೂ ಧೂಳಿನ ಮೋಡ ಹೊರಚಲ್ಲುವುದು. ಹೀಗೆ ಹೊರಚಲ್ಲಿದ ಈ ಮೋಡ ಭೂಮಿಯ ಗುರುತ್ವಾಕರ್ಷಣೆಗೆ ಸಿಕ್ಕು ನಮ್ಮ ವಾತಾವರಣ ಸೇರುವುದು. ಇಂತಹ ಧೂಳಿನ ಕಣಗಳನ್ನು 'ನಾಸಾ'ದ ವಿಜ್ಞಾನಿಗಳು, ಸುಮಾರು ೬೨ ಸಾವಿರ ಅಡಿ ಮೇಲೆ ಹಾರಬಲ್ಲ ವಿಶೇಷ ವಿಮಾನವನ್ನು ಉಪಯೋಗಿಸಿ ಕಲೆಹಾಕಿ ಪರೀಕ್ಷಿಸಿದರು. ಪರಿಣಾಮ ಆಶ್ಚರ್ಯಕರವಾಗಿತ್ತು; ಧೂಮಕೇತು ಚೆಲ್ಲಿಹೋದ ಆ ಧೂಳಿನ ಕಸದಲ್ಲಿ ಏನಿಲ್ಲವೆಂದರೂ ಸುಮಾರು ೫೦% ಜೈವಿಕ-ಕಾರ್ಬನ್ ಇರುವುದು ತಿಳಿಯಿತು. ಅಂದರೆ, ನಮ್ಮ ಪೃಥ್ವಿಗೆ ಪ್ರತಿನಿತ್ಯ ಸುಮಾರು ೩೦ ಟನ್ನು ಅಂತರಿಕ್ಷದಿಂದ ತೂರಿಬಂದ ಜೈವಿಕ-ಪದಾರ್ಥದ ಆಗಮನವಾಗುತ್ತದೆ. ಹಲವು ಕ್ಷುದ್ರ-ಗ್ರಹ ಹಾಗೂ ಉಲ್ಕೆಗಳ ಧೂಳಿ, ಕೀಟೋನ್, ಕ್ವಿನೋನ್, ಕಾರ್ಬಾಕ್ಸಿಲ್ ಆಮ್ಲಗಳಲ್ಲದೇ, ಸುಮಾರು ೭೦ ಅಮಿನೋ-ಆಮ್ಲಗಳನ್ನು ಹೊಂದಿರುವುದು ತಿಳಿಯಿತು. ಈ ೭೦ ಅಮಿನೋ ಆಮ್ಲಗಳಲ್ಲಿ, ೮ ಆಮ್ಲಗಳು ಇಂದು ನಮ್ಮ ಜೀವಗೋಳದ ಅಡಿಪಾಯವಾಗಿರುವ ೨೦ ಅಗತ್ಯ ಅಮಿನೋ-ಆಮ್ಲಗಳ ಗುಂಪಿಗೆ ಸೇರಿದವುಗಳಾಗಿವೆ. ಈ ವಿಷಯಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ..., ಜೈವಿಕ-ದ್ರವ್ಯ ಹಾಗೂ ಅದನ್ನು ರಚಿಸಿರುವ ಕಾರ್ಬನಿಕ-ಅಣುಗಳು ವಿಶ್ವವ್ಯಾಪಿಯಾಗಿರುವುದಾಗಿ ತೋರುತ್ತದೆ.



ಚಿತ್ರ ೨. ಕೆಲವು ಮೈಕ್ರಾನ್‌ಗಳಷ್ಟು ಮಾತ್ರ ಗಾತ್ರವಿರುವ ವಿಶ್ವ-ಧೂಳಿಯ ಒಂದು ಕಣ, ಸೂಕ್ಷ್ಮದರ್ಶಕದಲ್ಲಿ ನೋಡಿದಾಗ

ಬಾಹ್ಯ ಜಗತ್ತಿನಿಂದ ಜೈವಿಕ ಸಾಮಗ್ರಿಯ ಆಗಮನದ ಸಿದ್ಧಾಂತ ಸತ್ಯವಾಗಿದ್ದಲ್ಲಿ, ನಮ್ಮ ಸೌರ ಮಂಡಲದ ಉಳಿದ ಗ್ರಹಗಳಿಗೂ ಜೈವಿಕ ಸಾಮಗ್ರಿಗಳ ಸರಬರಾಜು ಆಗಿರಲೇಬೇಕು. ಹಾಗಿದ್ದರೆ, ಅವುಗಳ ಇತಿಹಾಸದಲ್ಲಿಯೂ ಕೂಡ ಜೀವಿಯ ಉತ್ಪತ್ತಿಗೆ ಸಮರ್ಪಕ ಪರಿಸರ ರಚನೆಯಾಗಿ, ಅಲ್ಲಿಯೂ ಜೀವಿಯ ಉಗಮ, ವಿಕಾಸವಾಗಿರಬಹುದು. ನಮ್ಮ ಸೌರಮಂಡಲವಷ್ಟೇ ಏಕೆ..? ಬ್ರಹ್ಮಾಂಡದ ಬೇರೆ ನಕ್ಷತ್ರಮಂಡಲದಲ್ಲಿ ಜೀವಿಯ ಇರುವಿನ ವಿಚಾರ ಸಧೃಡವಾಗುತ್ತ ಸತ್ಯವಾಗಬಹುದು. ಹೊರಜಗತ್ತಿನಿಂದ ತೂರಿಬರುವ ವಿಶ್ವ- ಕಣಗಳಲ್ಲಿ ಜೈವಿಕ-ದ್ರವ್ಯವಿರಬೇಕಾದರೆ.., ವಿಶ್ವದ ಬೇರೆಡೆಯಲ್ಲಿಯೂ ಕನಿಷ್ಠಪಕ್ಷ ಜೈವಿಕ ಕ್ರಿಯೆ ನಡೆಯುತ್ತಿರಲೇಬೇಕು ಅಲ್ಲವೆ...?

ಇವುಗಳನ್ನೆಲ್ಲ ಗಮನಿಸಿದಾಗ ತಿಳಿಯುವ ವಿಷಯವೆಂದರೆ, ಜೈವಿಕ ಕ್ರಿಯೆಗೆ ಅವಶ್ಯವಿರುವ ಸಾಮಗ್ರಿಗಳ ಮೂಲ ಯಾವುದೇ ಇರಲಿ.., ಪ್ರಪ್ರಥಮ ಆದಿಮ ಜೀವಿಯ ಜನ್ಮ ಏಕ ಕೋಶಿಯ ಕೀಟಾಣುಗಳ ರೂಪದಲ್ಲಿ, ಸುಮಾರು ೩೮೦೦ ದಶಲಕ್ಷ ವರ್ಷಗಳ ಹಿಂದೆ, ಸಾಗರತಳದ ಉಷ್ಣದ್ರವ ಬುಗ್ಗೆಗಳ ಪರಿಸರದಲ್ಲಿ, ಹಲವಾರು ರಾಸಾಯನಿಕ ಕ್ರಿಯೆಗಳಿಂದ ಜೈವಿಕ-ದ್ರವ್ಯದ (Organic matter) ಸಂಶ್ಲೇಷಣೆಯಿಂದಾಗಿ ಸಾಧ್ಯವಾಯಿತು ಎನ್ನುವುದಕ್ಕೆ ಪುರಾವೆಗಳು ದೊರಕಿವೆ.

**ಡಾ॥ ವಿರುಪಾಕ್ಷ ಕೆ. ಬಣಕಾರ**
ವಿಜ್ಞಾನಿ, ರಾಷ್ಟ್ರೀಯ ಸಾಗರ ವಿಜ್ಞಾನ ಕೇಂದ್ರ, ಡೊನಾಪೌಲ್
ಗೋವಾ-೪೦೩ ೦೦೪.



# ಆಫ್ರಿಕದ ಆದರ್ಶನಾಯಕ ಜ್ಯೂಲಿಯಸ್ ನೈರೇರೆ

ಸೀಯಾರ್ಕೆ

ಇತ್ತೀಚೆಗೆ ನಿಧನರಾದ ತಾಂಜೇನಿಯದ ಮಾಜಿ ರಾಷ್ಟ್ರಪತಿ ಜ್ಯೂಲಿಯಸ್ ಕಂಚರಗೆ ನೈರೇರ (೧೯೨೨-೧೯೯೯) ಆಫ್ರಿಕಾದ ಧೀಮಂತ ನಾಯಕರಲ್ಲೊಬ್ಬರು. ಸಕಲರಿಗೂ ಸಮಾನ ಅವಕಾಶ ಕಲ್ಪಿಸುವ ಸಮಾಜವಾದಿ ನಿರ್ಮಾಣದ ಆದರ್ಶ ಹೊಂದಿದ್ದ ಅವರು ಅವಿಶ್ರಾಂತ ಹೋರಾಟಗಾರ. ಬ್ರಿಟಿಷ್ ಸಾಮ್ರಾಜ್ಯಶಾಹಿಗಳ ವಿರುದ್ಧ ಸ್ವಾತಂತ್ರ್ಯ ಹೋರಾಟಕ್ಕೆ ನೇತೃತ್ವ ನೀಡಿದ ನೈರೇರೆ ತಾಂಜೇನಿಯಾದ ಜನತೆಯ ರಾಷ್ಟ್ರಪಿತ. ಸ್ವಾತಂತ್ರ್ಯಾನಂತರ ಇಪ್ಪತ್ತು ವರ್ಷಗಳ ಕಾಲ ದೇಶದ ಆಡಳಿತೆಯ ಚುಕ್ಕಾಣಿಯಾಗಿದ್ದ ನೈರೇರೆ ತನ್ನ ಆದರ್ಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಶ್ರಮಿಸಿದ ರೂವಾರಿ. ಕೃಷಿ ಸಹಕಾರ, ಆರ್ಥಿಕ ಸ್ವಾವಲಂಬನೆಯ ಸಾಧನೆ ಅವರ ಮುಖ್ಯ ಗುರಿ. ಅಧಿಕಾರದಲ್ಲಿ ಮುಂದುವರೆಯಲು ಅವಕಾಶವಿದ್ದರೂ ಕಳೆದ ಹದಿನಾಲ್ಕು ವರ್ಷಗಳಿಂದ ಯಾವ ಅಧಿಕಾರ ಸ್ಥಾನದಲ್ಲೂ ಇರದಿದ್ದ ನೈರೇರೆ ದಕ್ಷಿಣ-ದಕ್ಷಿಣ ಆಯೋಗದ ಅಧಿಪತಿಯಾಗಿದ್ದು ತೃತೀಯ ಜಗತ್ತಿನ ಐಕ್ಯತೆಯನ್ನು ಬಲಗೊಳಿಸಲು ಸತತವಾಗಿ ಪ್ರಯತ್ನಿಸಿದ ವ್ಯಕ್ತಿ. ಹೊಸದಾಗಿ ಸ್ವಾತಂತ್ರ್ಯಗಳಿಸಿಕೊಂಡ ಆಫ್ರಿಕಾಖಂಡದ ದೇಶಗಳ ಮಧ್ಯೆ ಸಹಕಾರ ಮತ್ತು ಐಕ್ಯತೆಯನ್ನು ಬೆಸೆಯಲು ಆಫ್ರಿಕನ್ ಐಕ್ಯತಾ ಸಂಘಟನೆಯ ಸಂಸ್ಥಾಪಕರಲ್ಲೊಬ್ಬರು. ಇತರ ಹಲವು ಆಫ್ರಿಕಾದ ದೇಶಗಳಲ್ಲಿನಂತೆ ವಿವಿಧ ಜನಾಂಗಗಳು ಯಾವ ಬುಡಕಟ್ಟುಗಳ ನಡುವೆ ಘರ್ಷಣೆಗಳಾಗಲೀ, ಮಿಲಿಟರಿ ಸರ್ವಾಧಿಕಾರವಾಗಲಿ ಇಲ್ಲದೆ ಪ್ರಜಾತಂತ್ರ ಊರ್ಜಿತಗೊಂಡ ರಾಷ್ಟ್ರ ತಾಂಜೇನಿಯ. ಇದಕ್ಕೆ ನೈರೇರೆ ಅನುಸರಿಸಿದ ನೀತಿ ಹಾಗೂ ಕೈಗೊಂಡ ಅಭಿವೃದ್ಧಿ ಕಾರ್ಯಕ್ರಮಗಳೇ ಕಾರಣ.

ಬ್ರಿಟಿಷ್ ತಾಂಗನೀಕದ ಗ್ರಾಮವೊಂದರಲ್ಲಿ ಸಣ್ಣ ಬುಡಕಟ್ಟೊಂದರ ಮುಖ್ಯಸ್ಥನ ಮಗನಾಗಿ ಜನಿಸಿದ ನೈರೇರೆ ಬ್ರಿಟಿಷ್ ಸಾಮ್ರಾಜ್ಯಶಾಹಿಗಳ ಕ್ರೂರ ಶೋಷಣೆಯನ್ನು, ಕ್ರೌರ್ಯವನ್ನು ಕಣ್ಣಾರೆ ಕಂಡು ಅನುಭವಿಸಿದವರು. ತಮ್ಮ ನಾಡಿನಲ್ಲಷ್ಟೇ ಅಲ್ಲದೆ, ನೆರೆಯ ದೇಶಗಳಲ್ಲೂ ಸಾಮ್ರಾಜ್ಯಶಾಹಿಗಳು ನಡೆಸುತ್ತಿದ್ದ ನೈಸರ್ಗಿಕ ಸಂಪತ್ತಿನ ಸೂರೆಯನ್ನು ಅರಿತಿದ್ದರು. ಅದರಿಂದಾಗಿಯೇ ಅವರು ದಕ್ಷಿಣ ಆಫ್ರಿಕಾದಲ್ಲಿ, ರ್‍ಹೊಡೇಶಿಯಾದಲ್ಲಿ (ಈಗಿನ ಜಿಂಬಾಬ್ವೆ) ಮತ್ತು ನೈರುತ್ಯ ಆಫ್ರಿಕ (ಈಗಿನ ನಮೀಬಿಯ) ಬಿಳಿಯರ ವಿರುದ್ಧವಾಗಿ ನಡೆಯುತ್ತಿದ್ದ ಹೋರಾಟಕ್ಕೆ ಅವರು ಪೂರ್ಣ ಬೆಂಬಲ ನೀಡಿದರು. ವಿಶ್ವಸಂಸ್ಥೆಯಲ್ಲೂ, ಇತರ ಅಂತರರಾಷ್ಟ್ರೀಯ ಸಂಘಟನೆಗಳಲ್ಲೂ ಅವರು ಹಿಂದಿನ ದಕ್ಷಿಣ ಆಫ್ರಿಕದ ಮೇಲೆ ಆರ್ಥಿಕ ದಿಗ್ಬಂಧನ ಹಾಗೂ ಇತರ ಕ್ರಮಗಳನ್ನು ಕೈಗೊಳ್ಳಬೇಕೆಂದು ಬಲವಾಗಿ ಒತ್ತಾಯಿಸಿದ್ದರು.

ಪ್ರಪಂಚದ ಬೇರೆಲ್ಲ ಭಾಗಗಳಿಗಿಂತ ಸಾಮ್ರಾಜ್ಯಶಾಹಿಗಳು ಆಫ್ರಿಕಾದಲ್ಲಿ ನಡೆಸಿದ ದೌರ್ಜನ್ಯ ಹಾಗೂ ಕ್ರೂರ ಶೋಷಣೆ ವಿಶಿಷ್ಟವಾದ್ದು. ಸುಮಾರು ನಾಲ್ಕು ನೂರು ವರ್ಷಗಳ ತಮ್ಮ ವಸಾಹತುಶಾಹಿ ಆಳ್ವಿಕೆಯ ಕಾಲದಲ್ಲಿ ಇಂಗ್ಲಿಷರು, ಫ್ರೆಂಚರು, ಪೋರ್ಚುಗೀಸರು, ಬೆಲ್ಜಿಯನ್ನರು. ಡಚ್ಚರು ಮೊದಲಾದವರು ಆಫ್ರಿಕಾದ ಜನರನ್ನು, ನೆಲವನ್ನು, ಖನಿಜ ಸಂಪತ್ತನ್ನು ದೋಚಿಕೊಂಡರೇ ಹೊರತು ಆ ಪ್ರದೇಶದ ಅಭಿವೃದ್ಧಿಯ ಕಡೆಗೆ ಕಿಂಚಿತ್ತೂ ಗಮನ ಕೊಡಲಿಲ್ಲ. ತಮ್ಮ ಇತರ ವಸಾಹತುಗಳಲ್ಲಿ ದುಡಿಯಲು ಆಫ್ರಿಕಾದ ನಿವಾಸಿಗಳನ್ನು ಗುಲಾಮರನ್ನಾಗಿಸಿ ಸಾಗಿಸುತ್ತಿದ್ದುದಲ್ಲದೆ, ಅಮಾನವೀಯವಾಗಿ ಅವರನ್ನು ಶೋಷಣೆ ಮಾಡಿ, ಜಾನುವಾರುಗಳಂತೆ ಮಾರಾಟ ಮಾಡುತ್ತಿದ್ದುದನ್ನು ನೆನಪು ಮಾಡಿಕೊಳ್ಳಬಹುದು. ಈ ಅನಿಷ್ಟ ಗುಲಾಮ ಪದ್ಧತಿ ಕೊನೆಗೊಂಡದ್ದು ಹತ್ತೊಂಬತ್ತನೇ ಶತಮಾನದಲ್ಲಿ. ಆಫ್ರಿಕಾದ ಮೂಲ ನಿವಾಸಿಗಳನ್ನು ಮೂಲೆಗೊತ್ತಿ ಅವರ ಫಲವತ್ತಾದ



ಜಮೀನುಗಳನ್ನು ತಮ್ಮದಾಗಿಸಿಕೊಂಡ ಬಿಳಿಯರು ಪ್ಲಾಂಟೇಷನ್ನುಗಳನ್ನು ಸ್ಥಾಪಿಸಿ ಭೋಗಜೀವನ ನಡೆಸುತ್ತಿದ್ದರೆ, ಕಡು ಬಡತನ, ಅರೆ ಹೊಟ್ಟೆ ಕರಿಯ ಜನರ ಪಾಲಿಗೆ. ಇಂದಿಗೂ ಇದೇ ಪರಿಸ್ಥಿತಿ ಇದೆ. ದಕ್ಷಿಣ ಆಫ್ರಿಕಾದ ಬಂಗಾರದ ಗಣಿಗಳನ್ನು, ವಜ್ರದ ಗಣಿಗಳನ್ನು ಇಂಗ್ಲಿಷರು ಹೆಚ್ಚು ಕಡಿಮೆ ಬರಿದಾಗಿಸಿದ್ದರೆ, ಬೆಲ್ಜಿಯನ್ನರು ಕಾಂಗೋದ ತಾಮ್ರದ ಗಣಿಗಳನ್ನು ಬರಿದಾಗಿಸಿದ್ದಾರೆ. ಸಾಮ್ರಾಜ್ಯಶಾಹಿಗಳು ಇತರ ಆಫ್ರಿಕನ್ ದೇಶಗಳ ಖನಿಜ ಸಂಪತ್ತನ್ನೂ ಲೂಟಿ ಮಾಡಿದ್ದಾರೆ. ವಸಾಹತುಶಾಹಿಗಳು ಈ ಭೂಭಾಗದ ಎಲ್ಲ ನೈಸರ್ಗಿಕ ಸಂಪತ್ತುಗಳನ್ನೂ ತೀವ್ರವಾಗಿ ಶೋಷಣೆ ಮಾಡಿ ತಮ್ಮ ನಾಡಿಗೆ ಸಾಗಿಸಿ ಶ್ರೀಮಂತರಾದರೆ ಬಡತನ, ಹಸಿವು, ರೋಗರುಜಿನ ಆಫ್ರಿಕದ ಜನರ ಪಾಲಿಗೆ ಬಿಟ್ಟಿದ್ದಾರೆ.

ಇಂದಿನ ಆಫ್ರಿಕಾದ ದೇಶಗಳ ಹೀನಸ್ಥಿತಿಗೆ ಸಾಮ್ರಾಜ್ಯಶಾಹಿಗಳ ಉಗ್ರಶೋಷಣೆಯೇ ಕಾರಣ ಎಂಬುದರಲ್ಲಿ ಸಂದೇಹವಿಲ್ಲ. ಈಗಲೂ ಅವರು ಆಫ್ರಿಕಾದ ದೇಶಗಳ ವಿವಿಧ ಬುಡಕಟ್ಟುಗಳ ನಡುವೆ ವೈಮನಸ್ಯದ ಬೀಜ ಬಿತ್ತಿ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದಾರೆ. ಕಾಂಗೋದಲ್ಲಿ ನಡೆದ ಘಟನೆಗಳು, ಮುಖ್ಯವಾಗಿ ಲುಮುಂಬಾ ಕೊಲೆ, ಬೆಲ್ಜಿಯನ್ನರ ಕುಮ್ಮಕ್ಕಿನಿಂದ ಕಟಾಂಗ ಪ್ರಾಂತದ ಪ್ರತ್ಯೇಕತೆ ಇದಕ್ಕೆ ಒಂದು ಉದಾಹರಣೆ. ಇದೇ ಬಗೆಯ ತಂತ್ರವನ್ನು ಆಫ್ರಿಕಾದ ಇತರ ದೇಶಗಳಲ್ಲೂ ಕಾಣಬಹುದು. ದಕ್ಷಿಣ ಆಫ್ರಿಕಾದಲ್ಲಿ ಅನಿಷ್ಟವಾದ ಅಪಾರ್ತಿಡ್ ನೀತಿ ಈ ಶತಮಾನದ ಉತ್ತರಾರ್ಧದಲ್ಲಿ ಅಂತ್ಯಗೊಂಡಿದ್ದು ಆಫ್ರಿಕನ್ನರ ಕೈಗೆ ಆಡಳಿತ ಬಂದಿದ್ದರೂ, ಆರ್ಥಿಕ ಕ್ಷೇತ್ರದಲ್ಲಿ ಬಿಳಿಯರ ಪ್ರಾಬಲ್ಯವೇನೂ ಕಡಿಮೆಯಾಗಿಲ್ಲ.

ಆಫ್ರಿಕಾ ಖಂಡದ ಹಲವು ದೇಶಗಳಲ್ಲಿ, ವಿಶೇಷವಾಗಿ ಉಗಾಂಡ, ರುವಾಂಡ, ಇತಿಯೋಪಿಯ ಮೊದಲಾದ ಕಡೆಗಳಲ್ಲಿನ ಹೀನಸ್ಥಿತಿಗೆ, ಅಭಾವ ಪರಿಸ್ಥಿತಿಗೆ ನವ ವಸಾಹತುಶಾಹಿ ಆರ್ಥಿಕ ಹಿಡಿತವೇ ಕಾರಣ. ಪರಿಸ್ಥಿತಿಗೆ ಮೂಲಕಾರಣವನ್ನು ಗ್ರಹಿಸಿದ್ದ ನೈರೇರೆ ಅದಕ್ಕಾಗಿಯೇ ಆರ್ಥಿಕ ಸ್ವಾವಲಂಬನೆಯ ಉಗ್ರ ಪ್ರತಿಪಾದಕರಾಗಿದ್ದರು. ರಾಷ್ಟ್ರೀಯ ಸಾರ್ವಭೌಮತ್ವಕ್ಕೆ ಮನ್ನಣೆ, ಗಡಿಗಳ ಅನುಲ್ಲಂಘನೀಯತೆ, ಇತರ ರಾಷ್ಟ್ರಗಳ ಆಂತರಿಕ ವ್ಯವಹಾರಗಳಲ್ಲಿ ತಲೆ ಹಾಕದಿರುವುದು, ಆರ್ಥಿಕ ಸಹಕಾರ ಹಾಗೂ ಸ್ವಾವಲಂಬನೆ ಇವು ನೈರೇರೆಯ ಮೂಲಮಂತ್ರಗಳಾಗಿದ್ದುವು. ನೈಜೀರಿಯದ ಅಂತರ್ಯುದ್ಧದಲ್ಲಿ ನೈರೇರೆ ಪ್ರತ್ಯೇಕವಾಗಬಯಸಿದ್ದ ಬಯಾಫ್ರಾಗೆ ನೀಡಿದ ಬೆಂಬಲದ ವಿಚಾರದಲ್ಲಿ ಟೀಕೆ ಇದ್ದಾಗ್ಯೂ ಆಫ್ರಿಕಾದ ದೇಶಗಳ ಐಕ್ಯತೆಗಾಗಿ ಅವರು ಸಲ್ಲಿಸಿರುವ ಕಾಣಿಕೆ ಗಣನೀಯ.

ಜ್ಯೂಲಿಯಸ್ ನೈರೇರೆ ಅಲಿಪ್ತ ಚಳುವಳಿಯಲ್ಲಿ ಪ್ರಾಮುಖ್ಯವಾದ ಪಾತ್ರ ವಹಿಸಿದ್ದರು. ಎಪ್ಪತ್ತರ ದಶಕದ ಕಾಲದಲ್ಲಿ ಲುಸಾಕಾ ಮತ್ತು ಆಲ್ಜಿಯರ್ಸ್‌ಗಳಲ್ಲಿ ಜರುಗಿದ ಅಲಿಪ್ತ ರಾಷ್ಟ್ರಗಳ ಶೃಂಗಸಭೆಯಲ್ಲಿ ಅಲಿಪ್ತ ರಾಷ್ಟ್ರಗಳ ಮಧ್ಯೆ ಆರ್ಥಿಕ ಸಹಕಾರಕ್ಕೆ ಒತ್ತುಕೊಟ್ಟವರು, ಆರ್ಥಿಕ ಸ್ವಾವಲಂಬನೆಗೆ ಕರೆ ನೀಡಿದವರು ನೈರೇರೆ. ಆರ್ಥಿಕ ಸಹಕಾರದ ಕುರಿತು ಈ ಶೃಂಗಸಮ್ಮೇಳನಗಳಲ್ಲಿ ಅಂಗೀಕೃತವಾದ ನಿರ್ಣಯಗಳನ್ನು ರೂಪಿಸುವುದರಲ್ಲಿ ಅವರ ಪಾತ್ರ ಹಿರಿದು. ಆರ್ಥಿಕವಾಗಿ ಸ್ವಾವಲಂಬನೆ ಸಾಧಿಸುವವರೆಗೆ ರಾಜಕೀಯ ಸ್ವಾತಂತ್ರ್ಯಕ್ಕೆ ಅರ್ಥವಿಲ್ಲ ಎಂಬುದನ್ನು ನೈರೇರೆ ಚೆನ್ನಾಗಿ ಅರಿತಿದ್ದರು.

ಇಂದು ಜಾಗತೀಕರಣ, ಉದಾರೀಕರಣ ಮುಂತಾದ ಸಿಹಿ ಲೇಪಿತ ಘೋಷಣೆಗಳ ಜಾಲದಲ್ಲಿ ಆರ್ಥಿಕ ಸ್ವಾವಲಂಬನೆಯ ವಿಚಾರ ಮಾಯವಾಗಿದೆ. ಬಹುರಾಷ್ಟ್ರೀಯ ಕಂಪೆನಿಗಳ ಜಾಲಕ್ಕೆ ಸಿಕ್ಕಿಬಿದ್ದ ದೇಶೀ ಉದ್ಯಮಗಳು ನೆಲ ಕಚ್ಚುತ್ತಿವೆ. ನವವಸಾಹತುಶಾಹಿಗಳು ತಮ್ಮ ಆರ್ಥಿಕ ಹಿಡಿತವನ್ನು ಐ.ಎಂ.ಎಫ್., ವರ್ಲ್ಡ್ ಬ್ಯಾಂಕ್, ಡಬ್ಲ್ಯು.ಟಿ.ಓ. ಮೊದಲಾದ ಅಂತರರಾಷ್ಟ್ರೀಯ ವ್ಯವಸ್ಥೆಗಳ ಮೂಲಕ ಬಿಗಿಗೊಳಿಸುತ್ತಿದ್ದಾರೆ. ಇಂಥ ಸನ್ನಿವೇಶದಲ್ಲಿ ನೈರೇರೆಯವರಂಥ ಆದರ್ಶವಾದಿ ನಾಯಕರುಗಳ ಅಗತ್ಯತೆ ತೃತೀಯ ಜಗತ್ತಿನ ರಾಷ್ಟ್ರಗಳಿಗೆ ಅಧಿಕವಾಗಿದೆ, ಸಾಮ್ರಾಜ್ಯಶಾಹಿಗಳ ವಿರುದ್ಧ ಹೋರಾಟ ನಡೆಸಲು.

ಜ್ಯೂಲಿಯಸ್ ನೈರೇರೆ ನಿಧನದಿಂದ ತಾಂಜೇನಿಯಾ ರಾಷ್ಟ್ರಪಿತನನ್ನು ಕಳೆದುಕೊಂಡಿದೆಯಾದರೆ, ಜಗತ್ತು ಈ ಶತಮಾನದ ಇನ್ನೊರ್ವ ಧೀಮಂತ ನಾಯಕನನ್ನು ಕಳೆದುಕೊಂಡಿದೆ.



# ಸ್ವಾತಂತ್ರ್ಯ: ನೋವಿನೊಳಗಿನ ನೋವು

*ನರಸಿಂಹ ದಾಬಡೆಯವರ ಸಂದರ್ಶನ , ಸಂದರ್ಶಕ : ಡಾ|| ಸಿದ್ದನಗೌಡ ಪಾಟೀಲ*

ತ್ಯಾಗ ಎಂಬ ಶಬ್ದವೇ ಗೌಣವಾಗುತ್ತಿರುವಾಗ ಸ್ವಾತಂತ್ರ್ಯ ಹೋರಾಟದಲ್ಲಿ ರಕ್ತ-ಬೆವರು ಸುರಿಸಿ ಹೋರಾಡಿದ ಯೋಧರು ಇಂದು ಬಲಿಪಶುಗಳಂತೆ ಕಾಣುತ್ತಿದ್ದಾರೆ. ಬಿಳಿ ಗಡ್ಡ, ಗುಳಿಬಿದ್ದ ಕಣ್ಣು, ಅದೇ ಮುಗ್ಧ ನಗೆ ಹೊತ್ತು ಮುಸ್ಸಂಜೆಯ ಬದುಕನ್ನು ಹಲವರು ನಿರ್ಲಿಪ್ತತೆಯಿಂದ ಕಳೆದರೆ, ಕೆಲವರು ನಿರಾಶೆಯಲ್ಲಿದ್ದಾರೆ. ಇನ್ನು ಕೆಲವರು ಬೂದಿ ಮುಚ್ಚಿದ ಕೆಂಡದಂತೆ. ಅವರ ಆತ್ಮಕ್ಕೆ ಕಿವಿಗೊಟ್ಟರೆ ಸಾಕು ನಿಗಿನಿಗಿ ಬೆಂಕಿಯಂತಿದ್ದಾರೆ. ಸ್ವಾತಂತ್ರ್ಯ ಎಂದರೆ ಸಾಕು ಮತ್ತೆ ಅದೇ ಯುವಕರಾಗುತ್ತಾರೆ. ಬಾಲ್ಯವನ್ನು, ಯೌವನವನ್ನು, ಖಾಸಗಿ ಸುಖವನ್ನು ಇಂಚು ಇಂಚಾಗಿ ಈ ದೇಶದ, ಸಮಾಜದ ಸ್ವಾತಂತ್ರ್ಯಕ್ಕಾಗಿ ಸವೆಸಿ ಇಡೀ ಬದುಕನ್ನೇ ಧಾರೆಯೆರೆದ ಆ ವೃದ್ಧರು ಇಂದಿನ ಸ್ವತಂತ್ರ ಭಾರತವನ್ನು ನೋಡಿ ಮತ್ತೆ ಕ್ರುದ್ಧರಾಗುತ್ತಾರೆ. ಅವರು ಸ್ವಾತಂತ್ರ್ಯಕ್ಕಾಗಿ ಹೋರಾಡಿದರು, ಆದರೆ ದೇಶದ ಬಹುತೇಕ ಜನರಿಗೆ ಸ್ವಾತಂತ್ರ್ಯ ಇನ್ನೂ ಮರೀಚಿಕೆ. ಕೋಮು-ಜಾತಿಗಳನ್ನಳಿಸಲು ಅವರು ತಮ್ಮ ಬದುಕನ್ನೇ ಕೊಟ್ಟರು, ಆದರೆ ಇಂದು ಕೋಮು ಮತ್ತು ಜಾತಿಗಳೇ ನಮ್ಮ ಜನತೆಯ ಅಸ್ತಿತ್ವದ ಸಂಕೇತ. ಅವರು ಸ್ವದೇಶಿ ಎಂದು ಮೈತುಂಬ ಬಾಸುಂಡೆ ತಿಂದರು; ಇಂದು ನಮ್ಮ ಮೈಮನ ಒಳಗೊಂಡು ಎಲ್ಲೆಲ್ಲೂ ವಿದೇಶಿ ಸರಕುಗಳೇ ರಾರಾಜಿಸುತ್ತಿವೆ. ಅಂದು ಭ್ರಷ್ಟಾಚಾರರಹಿತ ಭಾರತ ಕಟ್ಟಲು ಪಣತೊಟ್ಟರು - ಇಂದು ಭ್ರಷ್ಟಾಚಾರವೇ ಒಂದು ಮೌಲ್ಯವಾಗಿ ನೀತಿವಂತರು ನಿರ್ವೀರ್ಯರಂತೆ ಕಾಣುತ್ತಿದ್ದಾರೆ. ಅಂದು ಹೆಂಡ-ಸರಾಯಿ ವಿರುದ್ಧ ಹೋರಾಡಿ ಪ್ರಾಣ ಕೊಟ್ಟರು - ಇಂದು ಅದೇ ಹೆಂಡ-ಸಾರಾಯಿ ಗಂಗಾಜಲವಾಗಿ ಅದಕ್ಕೇ ಜನ ಪ್ರಾಣ ಕೊಡುತ್ತಿದ್ದಾರೆ. ಇದಕ್ಕಾಗಿಯೇ ಏನು ಅವರು ತ್ಯಾಗ ಮಾಡಿದ್ದು?

ಇಂದು ಯಾವುದೇ ಪ್ರಾಮಾಣಿಕ ಸ್ವಾತಂತ್ರ್ಯ ಹೋರಾಟಗಾರನ ಕಿರುಬೆರಳು ಸ್ಪರ್ಶಿಸಿದರೂ ಸಾಕು, ಅದರ ಮನಸ್ಸಿನೊಳಗಿನ, ಆತ್ಮದೊಳಗಿನ ನೋವು, ನೋವಿನೊಳಗಿನ ನೋವು, ಮಂಜುಗಡ್ಡೆಯೊಳಗಿನ ನಿಗಿನಿಗಿ ಕೆಂಡದಂತೆ ತಣ್ಣಗೆ ನಮ್ಮನ್ನು ಸುಡುತ್ತದೆ. ಇಂಥ ಒಂದು ಅನುಭವವಾಗಿದ್ದು ನರಸಿಂಹ ದಾಬಡೆ ಎಂಬ ಧಾರವಾಡದ ೮೫ರ ಹರೆಯದ ಸ್ವಾತಂತ್ರ್ಯ ಯೋಧರನ್ನು ಮಾತನಾಡಿಸಿದಾಗ.

೧೯೧೫ರಲ್ಲಿ ಆಗಿನ ವಿಜಾಪುರ ಜಿಲ್ಲೆಯ ಗುಳೇದಗುಡ್ಡದ ತೀರ ಬಡ ಕುಟುಂಬದಲ್ಲಿ ಹುಟ್ಟಿದ ಅವರು ಕೆರೂರಿನಲ್ಲಿ ಪ್ರಾಥಮಿಕ ಓದು ಮುಗಿಸಿ ಹೈಸ್ಕೂಲ್ ಓದಲೆಂದು ಹುಬ್ಬಳ್ಳಿಗೆ ಬಂದರು. ಆಗ ಹುಬ್ಬಳ್ಳಿ ಸ್ವಾತಂತ್ರ್ಯ ಸಮರದ ಸುಡುಸುಡುವ ನೆಲವಾಗಿತ್ತು. ಸಹಜವಾಗಿಯೇ ಹೈಸ್ಕೂಲ್ ಬಾಲಕ ನರಸಿಂಹ ದಾಬಡೆ ಉಪ್ಪಿನ ಸತ್ಯಾಗ್ರಹ, ಗಾಂಧೀಜಿ, ಸ್ವಾತಂತ್ರ್ಯ ಚಳವಳಿ ಕುರಿತು ಆಕರ್ಷಿತರಾದರು. ಹೈಸ್ಕೂಲ್ ಓದು ನಡೆಯುತ್ತಲೇ ನಿತ್ಯ ಸೇವಾದಳದ ಚಟುವಟಿಕೆಗಳಲ್ಲಿ ಪಾಲ್ಗೊಂಡರು. ೧೯೩೧ರಲ್ಲಿ ಹುಬ್ಬಳ್ಳಿಯಲ್ಲಿ ಜರುಗಿದ ಸ್ವದೇಶಿ ವಸ್ತು ಪ್ರದರ್ಶನದಲ್ಲಿ ಸ್ವಯಂಸೇವಕರಾದರು. ಕಾಂಗ್ರೆಸ್‌ನ ಸುದ್ದಿಪತ್ರಗಳನ್ನು ಹಂಚಿಬರುವ ಸಕ್ರಿಯ ಕಾರ್ಯಕರ್ತರಾದರು. ಮುಂದೆ ೧೯೩೪ರಲ್ಲಿ ಧಾರವಾಡದಲ್ಲಿದ್ದ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಕಮಿಟಿಯ ಕಾರ್ಯಾಲಯ ಕಾರ್ಯದರ್ಶಿಯಾಗಿ ನೇಮಕಗೊಂಡರು. ಆಫೀಸಿನ ಕೆಲಸ ಮಹತ್ವದ್ದೇ ಆದರೂ ಅದೇಕೋ ಬರೀ ಗುಮಾಸ್ತಗಿರಿ ಎನಿಸಿ ಚಳುವಳಿಯಲ್ಲಿ ನೇರವಾಗಿ ಧುಮುಕಬೇಕೆಂಬ ಉತ್ಕಟ ಬಯಕೆ ಅವರಲ್ಲಿತ್ತು. ಅದೇ ಸಂದರ್ಭದಲ್ಲಿ ೫.೨.೧೯೩೯ರಂದು ಶಕುಂತಲಾ ಎಂಬುವರೊಡನೆ ಅವರ ಮದುವೆಯೂ ಆಯಿತು. ಮದುವೆಗೆ ಮುಂಚೆಯೇ ಶಕುಂತಲಾ ಅವರಿಗೆ ತಮ್ಮ ಸ್ವಾತಂತ್ರ್ಯ ಹೋರಾಟದ ಉದ್ದೇಶವನ್ನು ಹೇಳಿ ಒಪ್ಪಿಸಿದ್ದರು. ಅಷ್ಟರಲ್ಲಿ ೧೯೪೧ರ ವೈಯಕ್ತಿಕ ಸತ್ಯಾಗ್ರಹ ಬಂದೇಬಿಟ್ಟಿತು. ನರಸಿಂಹ ದಾಬಡೆಯವರಿಗೆ ಈ ಸತ್ಯಾಗ್ರಹದಲ್ಲಿ ಧುಮುಕಬೇಕೆಂಬ ಆಶೆ. ಆದರೆ ಅದಕ್ಕೆ ಗಾಂಧೀಜಿಯವರ ಅನುಮತಿ ಬೇಕಾಗಿತ್ತು. ಅಂಥ ಸಂದರ್ಭ ಒದಗಿಯೂ ಬಂತು. ಧಾರವಾಡ ಪ್ರಾಂತದ ಸತ್ಯಾಗ್ರಹಿಗಳ ಯಾದಿ ತೆಗೆದುಕೊಂಡು ಗಾಂಧೀಜಿಯವರ ಹತ್ತಿರ ಹೋಗಿ ಸತ್ಯಾಗ್ರಹಿಗಳ ಯಾದಿಗೆ ಅವರ ಒಪ್ಪಿಗೆ ತೆಗೆದುಕೊಂಡು ಬರುವ ಜವಾಬ್ದಾರಿ ದಾಬಡೆಯವರಿಗೇ ಬಂತು. ಗಾಂಧೀಜಿಯವರನ್ನು ಸ್ವತಃ ಕಂಡು ಅವರಿಂದ ಪ್ರಾಂತೀಯ ಚಳುವಳಿಗಾರರ ಯಾದಿಗೆ ಒಪ್ಪಿಗೆ ಪಡೆಯುತ್ತಲೇ ತಾವೂ ಈ ಚಳುವಳಿಯಲ್ಲಿ ಭಾಗವಹಿಸಲು ಗಾಂಧೀಜಿಯವರ ಅನುಮತಿ ಪಡೆದು ಉತ್ಸಾಹದಿಂದಲೇ ಧಾರವಾಡಕ್ಕೆ ಬಂದರು ದಾಬಡೆ.

ಧಾರವಾಡಕ್ಕೆ ಬಂದವರೇ ಸುತ್ತಲಿನ ಹಳ್ಳಿಗಳನ್ನು ಸುತ್ತಿ ಯುದ್ಧ ಹಾಗೂ ಬ್ರಿಟಿಷರ ವಿರುದ್ಧ ಜನರನ್ನು ಹುರಿದುಂಬಿಸತೊಡಗಿದರು. ಆಗ ಧಾರವಾಡ ಹತ್ತಿರದ ಮನ್ಸೂರ ಗ್ರಾಮದಲ್ಲಿ ಭಾಷಣ ಮಾಡಿದ್ದಕ್ಕಾಗಿ ೧೦.೫.೧೯೪೧ರಂದು ದಾಬಡೆಯವರನ್ನು ಬಂಧಿಸಲಾಯಿತು. ಅವರು ವಿಚಾರಣಾಧೀನ ಕೈದಿಯಾಗಿ ಲಾಕಪ್ಪಿನಲ್ಲಿದ್ದಾಗ ಅವರ ತಂದೆ ಬಂದು ಮಗನನ್ನು ನೋಡಿಹೋಗಿ ಹಾಸಿಗೆ ಹಿಡಿದವರು 'ನರಸಿಂಹ' ಎಂದು ಬಡಬಡಿಸುತ್ತಲೇ ಪ್ರಾಣಬಿಟ್ಟರು. ಮುಂದೆ ೧೬.೬.೪೧ ರಂದು ದಾಬಡೆಯವರಿಗೆ ಮೂರು ತಿಂಗಳು ಸಶ್ರಮ ಶಿಕ್ಷೆಯಾಗಿ ಬೆಳಗಾವಿಯ ಹಿಂಡಲಗಾ ಜೈಲಿಗೆ ಕಳಿಸಿದರು. ಜೈಲಿಗೆ ಹೋಗುವಾಗ ಶಕುಂತಲಾ ಹಾಗೂ ಪುಟ್ಟ ಮಗನನ್ನು ಬಾಡಿಗೆ ಮನೆಯಲ್ಲಿ ಬಿಟ್ಟುಹೋದರು. ಜೈಲಿನಲ್ಲಿ ಮೂರು ತಿಂಗಳು ಶಿಕ್ಷೆ ಪೂರೈಸಿ ೧೫.೯.೪೧ ರಂದು ಧಾರವಾಡಕ್ಕೆ ಬಂದಾಗ ಹೆಂಡತಿ ಬಡತನ, ಒಂಟಿತನದ ನೋವು ಅನುಭವಿಸಲಾಗದೆ ಬಾಗಲಕೋಟೆಯ ತಮ್ಮ ಅಣ್ಣನ ಮನೆಗೆ ಹೋಗಿದ್ದರು. ಹೋಗುವಾಗ ಮಗುವಿನ ಅನಾರೋಗ್ಯದ ಸುದ್ದಿ ಬಿಟ್ಟುಹೋಗಿದ್ದರು. ನರಸಿಂಹ ದಾಬಡೆ ಮಗುವನ್ನು ನೋಡಲು ಬಾಗಲಕೋಟೆಗೆ ಧಾವಿಸುವಷ್ಟರಲ್ಲಿ ಮಗು ಅನಾರೋಗ್ಯದಿಂದ ಸತ್ತುಹೋಗಿತ್ತು. ತಂದೆಯ ಸಾವಿನ ನೋವಿನೊಂದಿಗೆ ಜೈಲು ಸೇರಿದರೆ ಬಿಡುಗಡೆಯಾದಾಗ ಕಡೆಗಾಲದಲ್ಲಿ ಮಗನ ಮುಖವನ್ನು ನೋಡದೆ ಅವನನ್ನು ಕಳೆದುಕೊಂಡಿದ್ದರು.

೧೯೪೨ ಸ್ವಾತಂತ್ರ್ಯ ಸಂಗ್ರಾಮದ ಉತ್ತುಂಗದ ವರ್ಷ. ಆಗಸ್ಟ್ ೮ರ ರಾತ್ರಿ 'ಭಾರತ ಬಿಟ್ಟು ತೊಲಗಿ' ಚಳುವಳಿಯ ಗೊತ್ತುವಳಿ ಸ್ವೀಕಾರವಾಗಿ ದೇಶದಾದ್ಯಂತ ಮಿಂಚಿನ ಸಂಚಾರವಾಯಿತು. ಅಂದೇ ರಾತ್ರಿ ಬಹುತೇಕ ಮುಖಂಡರನ್ನು ಬಂಧಿಸಲಾಯಿತು. ಕರ್ನಾಟಕದಿಂದ ಹೋದ ಕಾಂಗ್ರೆಸ್ ಕಾರ್ಯಕರ್ತರು, ನಾಯಕರೆಲ್ಲ ಭೂಗತರಾದರು. ಆ ಭೂಗತರಲ್ಲಿ ನರಸಿಂಹ ದಾಬಡೆಯವರೂ ಇದ್ದರು. ನಾಲ್ಕು ದಿನದಲ್ಲಿ ಬರುವೆನೆಂದು ತುಂಬು ಬಸುರಿ ಹೆಂಡತಿ ಶಕುಂತಲೆಗೆ ಹೇಳಿ ಬಂದಿದ್ದರು ದಾಬಡೆ. ಆದರೆ ಮುಂಬೈಗೆ ಬಂದಮೇಲೆ ಎಲ್ಲರೂ ಭೂಗತರಾದರು. ಆಗಲೂ ಸಂಘಟನೆ, ಸಂಪರ್ಕದ ಕೆಲಸ ದಾಬಡೆಯವರದು. ಮುಂಬೈ, ಪುಣೆ, ಬೆಳಗಾಂ, ಧಾರವಾಡ, ಗದಗ, ಹೊಸಪೇಟೆ, ಬಳ್ಳಾರಿ ಹೀಗೆ ಎಲ್ಲೆಂದರಲ್ಲಿ ಪೊಲೀಸರ ಕಣ್ಣಿಗೆ ಮಣ್ಣೆರಚಿ ತಿರುಗಿದರು. ಭೂಗತರಾಗಿಯೇ ಧಾರವಾಡಕ್ಕೆ ಬಂದಾಗ ರಾತ್ರಿ ಬೇರೆ ಒಬ್ಬರ ಮನೆಗೆ ಹೆಂಡತಿಯನ್ನು ಕರೆಸಿದರು. ಮಗಳು ಭಾರತಿಯನ್ನು ಪ್ರಥಮ ಬಾರಿಗೆ ಆಗಲೇ ನೋಡಿದ್ದು, ಹುಟ್ಟಿ ೫ ತಿಂಗಳಾಗಿತ್ತು. ಅಂದು ರಾತ್ರಿ ತನ್ನ ಮತ್ತು ಕೂಸಿನ

**ವಿಶ್ವದಲ್ಲಿ ಎಲ್ಲಿದ್ದೇವೆ?**

ಕ್ಯಾಸಿಯೋ ಕಂಪೆನಿ ಒಂದು ವಿಶಿಷ್ಟವಾದ ಗಡಿಯಾರವನ್ನು ತಯಾರಿಸಿದೆ. ೧೩೮ ಗ್ರಾಂ. ತೂಕದ ಈ ಗಡಿಯಾರದಲ್ಲಿ ವಿಶ್ವದ ಅನೇಕ ಮಾಹಿತಿಗಳನ್ನು ತುಂಬಲಾಗಿದೆ. ಈ ಕೈಗಡಿಯಾರ ವಿಶ್ವದ ಮೊತ್ತ ಮೊದಲ ಜಿ. ಪಿ. ಎಸ್. (ಗ್ಲೋಬಲ್ ಪೊಸಿಷನಿಂಗ್ ಸಿಸ್ಟಮ್) ಗಡಿಯಾರವಾಗಿದೆ.ನಮ್ಮ ಭೂಮಿಯನ್ನು ಸುತ್ತುತ್ತಿರುವ ೨೭ ಜಿ.ಪಿ.ಎಸ್. ಕೃತಕ ಉಪಗ್ರಹಗಳ ಸಹಾಯದಿಂದ, ಆ ಗಡಿಯಾರವನ್ನು ಧರಿಸಿರುವವ ವಿಶ್ವದ ಯಾವ ಜಾಗದಲ್ಲಿ ನಿಂತಿದ್ದಾನೆ ಎಂಬುದನ್ನು ಕರಾರುವಾಕ್ಕಾಗಿ (ಗಡಿಯಾರದಲ್ಲಿ) ತೋರಿಸುತ್ತದೆ.

- ಕೈವಾರ ಗೋಪಿನಾಥ್

ಅತಂತ್ರ ಬದುಕು, ಜನರಾಡುವ ಕೊಂಕುನುಡಿ, ಅಸಹಾಯಕತೆಗಳ ಕುರಿತು ಶಕುಂತಲಾ ಹೇಳಿದಾಗ ದಾಬಡೆಯವರು ಹೆಂಡತಿಗೆ ತೋರಿಸಿದ ದಾರಿಯೆಂದರೆ ಅವಳೂ ಸತ್ಯಾಗ್ರಹ ಮಾಡಿ ಜೈಲು ಸೇರುವುದು. ಶಕುಂತಲಾ ಹಾಗೆ ಮಾಡಿ ಪುಟ್ಟಕೂಸು ಭಾರತಿಯೊಂದಿಗೇ ನಾಲ್ಕು ತಿಂಗಳು ಬೆಳಗಾವಿ ಜೈಲಿನಲ್ಲಿ ಶಿಕ್ಷೆ ಅನುಭವಿಸಿದರು.

ಊರೂರು ಸುತ್ತುತ್ತಿದ್ದಾಗ ೧೯.೧.೧೯೪೪ರಂದು ಧಾರವಾಡದಲ್ಲಿ ದಾಬಡೆ ಪೊಲೀಸರ ಕೈಗೆ ಸಿಕ್ಕಿಬಿದ್ದರು. ಮತ್ತೆ ಎರಡು ವರ್ಷ ಜೈಲು, ೫೦೦ ರೂ. ದಂಡ. ಪರಿಣಾಮ, ಅಂದಿನ ಮಹಾರಾಷ್ಟ್ರದ ಏಸಾಪುರ ಜೈಲಿನಲ್ಲಿ ಒಂದು ವರ್ಷ, ಬೆಳಗಾವಿ ಜೈಲ್‌ನಲ್ಲಿ ಒಂದು ವರ್ಷ ನಾಲ್ಕು ತಿಂಗಳು ಸಶ್ರಮ ಶಿಕ್ಷೆ ಅನುಭವಿಸಿ ಬಂದರು.

ತನ್ನ ಬದುಕಿನ ಮಹತ್ವದ ಸಮಯವನ್ನು ದೇಶಕ್ಕಾಗಿ, ದೇಶದ ಸ್ವಾತಂತ್ರ್ಯಕ್ಕಾಗಿ ಭೂಗತ ಹೋರಾಟದಲ್ಲಿ, ಸಂಘಟನೆಯಲ್ಲಿ, ಜೈಲು ಶಿಕ್ಷೆಯಲ್ಲಿ ಕಳೆದ, ೮೫ ವರ್ಷದ ನರಸಿಂಹ ದಾಬಡೆ ತಮ್ಮ ಅಭಿಪ್ರಾಯಗಳನ್ನು 'ಹೊಸತು' ಜೊತೆ ಹಂಚಿಕೊಂಡಿದ್ದಾರೆ :

**ಹೊಸತು** : ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದಾಗ ನಿಮ್ಮ ಕನಸಿನ ಭಾರತ ಹೇಗಿತ್ತು?

**ದಾಬಡೆ** : ಬಹಳ ಸುಂದರವಾದ ಕನಸುಗಳಿದ್ದವು. ನಾನು ಹಳ್ಳಿಗಳಲ್ಲಿ ಭಾಷಣ ಮಾಡುವಾಗ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕ ಮೇಲೆ ಹಸಿವು-ಬಡತನ ಇರುವುದಿಲ್ಲ, ನಿರುದ್ಯೋಗ ಇರುವುದಿಲ್ಲ; ಹೆಂಡ- ಸಾರಾಯಿಯನ್ನು ಸಂಪೂರ್ಣ ತೊಲಗಿಸಲಾಗುತ್ತದೆ, ಭಾರತ ಸಂಪೂರ್ಣ ಗಾಂಧೀ ತತ್ವದ ಮೇಲೆ ನಡೆಯುತ್ತದೆ ಎಂದು ಆತ್ಮವಿಶ್ವಾಸದಿಂದ ಹೇಳುತ್ತಿದ್ದೆವು. ಆದರೆ ನಮ್ಮ ಕನಸುಗಳೆಲ್ಲ ನುಚ್ಚುನೂರಾಗಿವೆ.

**ಹೊ** : ನಿಮ್ಮ ಕನಸು ನುಚ್ಚು ನೂರಾಗಲು ಏನು ಕಾರಣ ಎನ್ನಿಸುತ್ತದೆ ?

**ದಾ** : ಸ್ವಾರ್ಥ ರಾಜಕಾರಣಿಗಳು. ಗಾಂಧೀ ಹೆಸರು ಹೇಳಿ ಬದುಕುತ್ತಾರೆ. ಇವರಾರಿಗೂ ಗಾಂಧೀಜಿ ಬಗ್ಗೆಯಾಗಲೀ ಅವರ ತತ್ವಗಳ ಬಗ್ಗೆಯಾಗಲೀ ಏನೇನೂ ಗೌರವವಿಲ್ಲ. ನಾಟಕ ಮಾಡುತ್ತಾರೆ. ಬ್ರಿಟೀಷರ ಕಾಲಕ್ಕಿಂತ ಇಂದು ಸಾರಾಯಿ ಹೆಚ್ಚಾಗಿದೆ. ಗಾಂಧೀಜಿಯವರ ಗ್ರಾಮಸ್ವರಾಜ್ಯದ ಕನಸನ್ನು ತಿಪ್ಪೆಗೆಸೆದಿದ್ದಾರೆ. ಇಂಥ ರಾಜಕಾರಣಿಗಳೇ ಇದಕ್ಕೆಲ್ಲ ಕಾರಣ.

**ಹೊ** : ಎಂಥ ರಾಜಕಾರಣ ಇರಬೇಕೆಂಬುದು ನಿಮ್ಮ ಅಭಿಪ್ರಾಯ ?

**ದಾ** : ಪ್ರಾಮಾಣಿಕತನ ಬೇಕು. ಇವರೆಲ್ಲ ಮೋಸಗಾರರು. ಕಾಂಗ್ರೆಸ್, ಬಿ.ಜೆ.ಪಿ., ದಳ ಎಲ್ಲಾ ಮೋಸಗಾರರೇ. ಇವರ್‍ಯಾರಿಂದಲೂ ಉದ್ಧಾರ ಸಾಧ್ಯವಿಲ್ಲ. ಅದಕ್ಕೇ ನಾನು ಸ್ವಾತಂತ್ರ್ಯಾನಂತರ ಯಾವ ರಾಜಕೀಯ ಪಕ್ಷವನ್ನೂ ಸೇರಲಿಲ್ಲ. ನಾನು ರಾಜಕೀಯ ಪಕ್ಷಗಳಲ್ಲಿ ವಿಶ್ವಾಸ ಕಳೆದುಕೊಂಡಿದ್ದೇನೆ.

**ಹೊ** : ಅಂದರೆ ನಿರಾಶರಾಗಿದ್ದೀರಾ ?

**ದಾ** : ಇಲ್ಲ, ನಿರಾಶೆ ಇಲ್ಲ. ನನಗೆ ಈಗಲೂ ಚಳುವಳಿ ಹೋರಾಟಗಳ ಮೇಲೆ ವಿಶ್ವಾಸವಿದೆ. ಆದರೇನು ಮಾಡುವುದು, ನನ್ನ ವಯಸ್ಸು ಸಂಘಟನೆ ಮಾಡಲು ಪೂರಕವಾಗಿಲ್ಲ.



*ಶ್ರೀಮತಿ ಶಕುಂತಲಾ ದಾಬಡೆಯವರೊಂದಿಗೆ*

**ಹೊ** : ನೀವು ಗಾಂಧೀವಾದಿಗಳು. ಅಂದು ಗಾಂಧೀಜಿಯನ್ನು ಕೊಂದ ತತ್ವದವರೇ ಇಂದು ದೇಶದ ಆಡಳಿತಕ್ಕೆ ಬಂದಿದ್ದಾರೆ. ನಿಮಗೇನೆನ್ನಿಸುತ್ತದೆ?

**ದಾ** : ಅದೆಲ್ಲ ಹಳೇ ಮಾತು. ಒಳ್ಳೇ ಕೆಲಸ ಮಾಡಿದರೆ ನಾನು ಬೆಂಬಲಿಸುತ್ತೇನೆ. ಆದರೆ ಇವರ್‍ಯಾರೂ ಒಳ್ಳೇ ಕೆಲಸ ಮಾಡುತ್ತಿಲ್ಲ.

**ಹೊ** : ಇಂದು ಕೋಮುವಾದ ತಾಂಡವವಾಡುತ್ತಿದೆ. ಇದಕ್ಕೆ ನಿಮ್ಮ ಪ್ರತಿಕ್ರಿಯೆ ಏನು?

**ದಾ** : ಸ್ವಾತಂತ್ರ್ಯ ಚಳುವಳಿಯಲ್ಲಿ ಎಲ್ಲ ಕೋಮು-ಜಾತಿಯ ಜನರಿದ್ದೆವು. ದೇಶದ ಸ್ವಾತಂತ್ರ್ಯ ಕ್ಕಾಗಿ ಎಲ್ಲರೂ ಹೋರಾಡಿದ್ದಾರೆ. ೧೯೨೧ರಲ್ಲಿ ಧಾರವಾಡದಲ್ಲಿ ಹಿಂದೂ-ಮುಸ್ಲಿಮರೆಲ್ಲ ಸೇರಿ ಸಾರಾಯಿ ವಿರುದ್ಧ ಹೋರಾಟ ನಡೆಸಿದ್ದಾರೆ. ಧಾರವಾಡದ ಜಖಿಣೆ ಭಾವಿ ಹತ್ತಿರ ಚಳುವಳಿಗಾರರ ಮೇಲೆ ಬ್ರಿಟೀಷ್ ಸರಕಾರ ಗುಂಡು ಹಾರಿಸಿತು. ಆಗ ಮೂರು ಜನ ಸತ್ತರು. ಅವರು ಮೂರು ಜನ ಮುಸಲ್ಮಾನರೇ ಆಗಿದ್ದರು. ೧೮ ಜನ ಹಿಂದೂಗಳನ್ನು ಬಂಧಿಸಿ ಜೈಲಿಗೆ ಹಾಕಲಾಯಿತು. ಹೀಗಿದ್ದಾಗ ಇಂದು ಕೋಮುವಾದದ ಹೆಸರಿನಲ್ಲಿ ರಾಜಕಾರಣ ಮಾಡುವುದು ರಾಷ್ಟ್ರದ್ರೋಹ.

**ಹೊ** : ೧೯೩೦ರ ಸ್ವದೇಶಿ ವಸ್ತು ಪ್ರದರ್ಶನದಲ್ಲಿ ನೀವು ಸ್ವಯಂಸೇವಕರಾಗಿದ್ದಿರಿ. ಈಗ ವಿಶ್ವ ವ್ಯಾಪಾರ ಸಂಘಟನೆ ಹೆಸರಿನಲ್ಲಿ ಬಹುರಾಷ್ಟ್ರೀಯ ಕಂಪನಿಗಳು ನಮ್ಮ ಮಾರುಕಟ್ಟೆಯನ್ನು ಆಕ್ರಮಿಸಿವೆ. ನಿಮ್ಮ ...

**ದಾ** : ಹೌದು. ನಾನೂ ನೋಡಿದ್ದೇನೆ ... ಬರೀ ವಿದೇಶಿ ಸರಕುಗಳ ಜಾಹಿರಾತುಗಳೇ ... ಎಲ್ಲದಕ್ಕೂ ಅಮೇರಿಕ, ಇಂಗ್ಲೆಂಡ್ ಕಡೆಗೇ ನೋಡುತ್ತಿದ್ದಾರೆ. ಬೆಂಗಳೂರಿನ ನೀರು ಸರಬರಾಜಿಗೂ ಇವರಿಗೆ ವಿದೇಶಿ ಕಂಪನಿಗಳೇ ಬೇಕು ! ಇದರಿಂದ ನಮ್ಮ ಸ್ವದೇಶಿ-ಸ್ವರಾಜ್ಯದ ಕಲ್ಪನೆ ನಾಶವಾಗಿ ಹೋಗಿದೆ. ನಮ್ಮ ಉದ್ಯೋಗಗಳು ನಾಶವಾಗಿವೆ. ನಾವು ಗಳಿಸಿದ ಸ್ವಾತಂತ್ರ್ಯ ಮತ್ತೆ ಹಾಳಾಗಿಹೋಗಿದೆ.

**ಹೊ** : ಹಾಗಾದರೆ ಮುಂದಿನ ದಾರಿ ಏನು ?

**ದಾ** : ಹೋರಾಟ ಮಾಡಬೇಕು. ನಮ್ಮ ರಾಜಕಾರಣಿಗಳ ವಿರುದ್ಧ, ಬಹುರಾಷ್ಟ್ರೀಯ ಕಂಪನಿಗಳ ವಿರುದ್ಧ ಹೋರಾಟ ಮಾಡಬೇಕು. ಪರಿಣಾಮಕಾರಿಯಾದ ಸಂಘಟನೆ ಮಾಡಬೇಕು. ಅಂಥ ಕೆಲಸವನ್ನೀಗ ಅಣ್ಣಾ ಹಜಾರೆ ಮಾಡುತ್ತಿದ್ದಾರೆ.

**ಹೊ** : ನೀವು ಸ್ವಾತಂತ್ರ್ಯಯೋಧರ ಸಂಘದ ನಾಯಕರು. ನೀವೇ ಯಾಕೆ ಇಂಥ ಸಂಘಟನೆ ಆರಂಭಿಸಬಾರದು.

**ದಾ** : ನಮ್ಮ ಸಂಘ ಅಷ್ಟು ಕ್ರಿಯಾಶೀಲವಾಗಿಲ್ಲ. ಹೆಚ್ಚಿನ ಸದಸ್ಯರಿಗೆ ವಯಸ್ಸಾಗಿದೆ. ನನಗೂ ಈಗ ಎಂಭತ್ತೈದು ವರ್ಷ. ಸಂಘಟನೆ ಕೆಲಸ ಕಷ್ಟ. ನೀವು ಯುವಕರ್‍ಯಾರಾದರೂ ಇಂಥ ಸಂಘಟನೆ ಮಾಡಿದರೆ ಖಂಡಿತ ನಾನು ನಿಮ್ಮ ಜೊತೆ ಬರುತ್ತೇನೆ. ನನ್ನ ಉಸಿರಿರುವವರೆಗೂ ಹೋರಾಟ ಮಾಡುತ್ತೇನೆ. ಆದರೆ ಅದು ರಾಜಕೀಯೇತರ ಹೋರಾಟವಾಗಿರಬೇಕು. ರಾಜಕಾರಣಿಗಳು ಸ್ವಾರ್ಥಿಗಳು, ಅವರು ಸಂಘ ಒಡೆಯುತ್ತಾರೆ. ನನಗೆ ಈ ರಾಜಕೀಯ ಪಕ್ಷಗಳಲ್ಲಿ ಎಳ್ಳಷ್ಟೂ ವಿಶ್ವಾಸವಿಲ್ಲ.

**ಹೊ** : ಮತ್ತೇನನ್ನಾದರೂ ಹೇಳಬೇಕೆನ್ನಿಸುತ್ತದೆಯೇ?

**ದಾ** : ಒಂದು ವಿಷಯ ಮುಖ್ಯವಾದದ್ದು. ನೀವು ಪತ್ರಿಕೆಗಳವರು ಬರೀ ನಮ್ಮ ಬಗ್ಗೆ ಬರೆಯುತ್ತೀರಿ. ನಾವು ಹೋರಾಟದಲ್ಲಿದ್ದಾಗ ನಮ್ಮ ಹೆಂಡಂದಿರು, ತಾಯಂದಿರು ಹೊರಗೆ ಪಟ್ಟ ಕಷ್ಟ, ಜನರಿಂದ ಬಂದ ಬಿರುಮಾತು, ಇವರ ಸಹನೆ ಇದನ್ನೆಲ್ಲ ಬರೆಯಬೇಕು. ನಾವು ಜೈಲಿನಲ್ಲಿ ರಾಜಕೀಯ ಖೈದಿಗಳಾಗಿ ನಿಶ್ಚಿಂತೆಯಿಂದಿದ್ದೆವು. ಆದರೆ ಅವರ ಕಷ್ಟ ಹೇಳಲಸಾಧ್ಯ. ಅಷ್ಟೇ ಅಲ್ಲ, ಎಷ್ಟೋ ಜನ ಹೆಣ್ಣು ಮಕ್ಕಳು ಸ್ವತಃ ಚಳುವಳಿ ಮಾಡಿ ಜೈಲು ಶಿಕ್ಷೆ ಅನುಭವಿಸಿದ್ದಾರೆ. ಅವರೆಲ್ಲರ ಬಗ್ಗೆಯೂ ಬರೆಯಿರಿ. ನನ್ನ ಹೆಂಡತಿ ಈಗಿಲ್ಲ. ಆದರೆ ನಾನು ಜೈಲಿನಲ್ಲಿದ್ದಾಗ, ಭೂಗತನಾಗಿದ್ದಾಗ ಅವಳು ಪಟ್ಟ ಪಾಡಿನ ಮುಂದೆ ನನ್ನ ಹೋರಾಟ ಏನೂ ಅಲ್ಲ. ಇಂಥ ಸಾವಿರಾರು ಜನ ಮಹಿಳೆಯರಿದ್ದಾರೆ. ಅವರ ಬಗ್ಗೆ ಬರೆಯಿರಿ. ○○

*(ಶ್ರೀಮತಿ ಶಕುಂತಲಾ ಅವರನ್ನು ಕುರಿತು ಮುಂದಿನ ಸಂಚಿಕೆಯಲ್ಲಿ)*

ಡಾ॥ ಸಿದ್ದನಗೌಡ ಪಾಟೀಲ

## ಕಾಶ್ಮೀರದಲ್ಲಿ 'ಚುನಾವಣೆ'

ಇತ್ತೀಚಿನ ಚುನಾವಣೆಯಲ್ಲಿ ನಮ್ಮ ಸೈನ್ಯದ ಶಕ್ತಿ ತೀರ್ಪುಗಾರನಾಗಿ ವರ್ತಿಸಿತು; ಆಟದಲ್ಲಿ 'ಅಂಪೈರ್' ಇರುವಂತೆ. ಆದರೆ ಪ್ರಜಾಪ್ರಭುತ್ವದ ಪದ್ಧತಿಯಲ್ಲಿ ನಿಷ್ಠೆಯುಳ್ಳವರು ನಮ್ಮ ಮಿಲಿಟರಿಯ ಈ ರೀತಿಯ ಮಧ್ಯಪ್ರವೇಶವನ್ನು ಮಾನ್ಯ ಮಾಡಿಲ್ಲ. ಯಾರು ಗೆಲ್ಲಬೇಕೆಂದು ಅವರೇ ತೀರ್ಮಾನಿಸಿಬಿಟ್ಟಿದ್ದರು. ಇಂತಹ ಖಾಕಿ ಅಧಿಕಾರಿಗಳ ತೀರ್ಮಾನವಾದ ನಂತರ ಚುನಾವಣೆಯು ನಡೆಯಿತು. ಪರಸ್ಪರ ವಿರೋಧಿಗಳಾಗಿದ್ದ ಬಿಜೆಪಿ ಮತ್ತು ನ್ಯಾಷನಲ್ ಕಾನ್‌ಫರೆನ್ಸ್ ಇಬ್ಬರೂ ಆಮೇಲೆ ನವದೆಹಲಿಯಲ್ಲಿ ರಾತ್ರೋರಾತ್ರಿ ಕೈಕುಲುಕಿ ಒಂದಾಗಿಬಿಟ್ಟರು.

*- ಹರೀಶ್ ಖರೆ (ದಿ ಹಿಂದು, ನವೆಂಬರ್ ೩, ೧೯೯೯)*

## ಅದೇ ಸಿ.ಟಿ.ಬಿ.ಟಿ. ಸಹಿ!

*ಪ್ಯಾಟ್ರಿಕ್ ಮೊಯ್ನಿಹಾನ್ ನಮ್ಮಲ್ಲಿ ಅಮೆರಿಕದ ರಾಯಭಾರಿಯಾಗಿದ್ದರು. ನಮ್ಮ ದೇಶದ ಶ್ರೇಯೋಭಿಲಾಷಿಯಂತೆ, ತಾತ್ವಿಕರಂತೆ, ಅವರು ಅಮೆರಿಕದ ಶಾಸನ ಸಭೆಯ ಸದಸ್ಯರನ್ನುದ್ದೇಶಿಸಿ ಸಿ.ಟಿ.ಬಿ.ಟಿ.ಗೆ ಅಮೆರಿಕ ಸಹಿ ಹಾಕಬೇಕೆಂದು ಸಮರ್ಥಿಸಿ ಮಾತನಾಡುತ್ತಿದ್ದಾರೆ. ಅವರು ಹೇಳುತ್ತಾರೆ: ''ಭಾರತದ ಕೆಲವು ಅಣ್ವಸ್ತ್ರ ಪ್ರಯೋಗಗಳು ವಿಫಲವಾಗಿವೆ. ನಾವು ಈಗ ಅವರನ್ನು ಸಿ.ಟಿ.ಬಿ.ಟಿ.ಗೆ ಒಪ್ಪಿಸದಿದ್ದಲ್ಲಿ, ಅವರು ಪುನಃ ಪ್ರಯೋಗ ಮಾಡಿಯಾರು.'' ಈ ಸುದ್ದಿ ನಿಜವಾದರೆ, ಇದು ಮತ್ತಷ್ಟು ಆತಂತಕಾರಿ. ನಮ್ಮಲ್ಲಿ ನಂಬಲರ್ಹವಾದ ಅಣ್ವಸ್ತ್ರಗಳು ಇಲ್ಲವೆಂದ ಹಾಗೆ ಆಗುತ್ತದೆ. ಪಾಕಿಸ್ತಾನದಲ್ಲಿ ಅವರ ಸಶಸ್ತ್ರಪಡೆಯವರ ನಿಯಂತ್ರಣದಲ್ಲಿ, ನಂಬಲರ್ಹವಾದ ಅಣ್ವಸ್ತ್ರಗಳು ಇರಬಹುದು. ಅವರು ಯಾರ ಅಂಕೆಗೂ ಒಳಪಟ್ಟವರಲ್ಲ. ಇದೆಂಥ ಪರಿಸ್ಥಿತಿಗೆ ನಾವು ಸಿಕ್ಕಿಕೊಂಡೆವು! ಇದಕ್ಕೆ ಯಾರು ಕಾರಣರು ?*

## ಸ್ವೀಜ್ಜಿಯ ಅಂತಃಕರಣ

ಪುರೋಗಾಮಿಗಳಾಗಿ ಪ್ರಾರಂಭವಾಗಿ ಮುಂದೆಯೂ ಹಾಗೇ ಉಳಿಯಬೇಕೆಂಬ ಉದ್ದೇಶವಿರುವ ಬಹಳ ಮಂದಿಯನ್ನು ಕಂಡಿದ್ದೇನೆ. ನಿಜ ಜೀವನದ ಒತ್ತಾಯಗಳು ಎದುರಾದಾಗ ಕೆಲಕಾಲ ಬಲವಾಗಿ ಎದುರಿಸುತ್ತಾರೆ. ಆದರೆ ಕ್ರಮೇಣ ಅದು ಅಸಾಧ್ಯವಾದ ಸನ್ನಿವೇಶ ಎನಿಸಿಬಿಡುತ್ತದೆ ಅವರಿಗೆ. ಒತ್ತಡಗಳು ಹತ್ತುಹಲವು ಕಡೆಗಳಿಂದ ಬರುತ್ತವೆ. ಆಗ ಅವರೇನು ಮಾಡುತ್ತಾರೆ ? ಅವಕಾಶಗಳು ದಕ್ಕಿದತ್ತ ವಾಲುತ್ತಾರೆ. ಆಮೇಲೆ ಅವರ ಅಭಿಪ್ರಾಯಗಳನ್ನೂ ಮೌಲ್ಯಗಳನ್ನೂ ಹೊಸ ರೀತಿಯಲ್ಲಿ ವ್ಯಾಖ್ಯಾನಿಸಿಕೊಳ್ಳುವುದು ಅವರಿಗೆ ಕಷ್ಟವಾಗುವುದಿಲ್ಲ. ಅವರ ರಾಜಕೀಯವೂ ಅವಕಾಶಗಳಿಗೆ ಅನುಗುಣವಾಗಿ ರೂಪುಗೊಳ್ಳುತ್ತದೆ. ನನ್ನ ಬಗ್ಗೆಯೇ ಕೆಲವೇಳೆ ಹಾಗೆನ್ನಿಸುತ್ತದೆ. ನನಗೆ ಸ್ವತಂತ್ರವಾದ ಆದಾಯ ಇರದಿದ್ದರೆ ನಾನು ಹೀಗಿರುವಂತೆಯೇ ಇರುತ್ತಿದ್ದೆನೇ ಎಂಬ ಸಂಶಯ ಉಂಟಾಗುವುದುಂಟು. ನಾನೇನೂ 'ಹೀರೋ' ಅಲ್ಲವಲ್ಲ !

*- ಪಾಲ್ ಸ್ವೀಜಿ (೧೯೯೯ರ ಒಂದು ಸಂದರ್ಶನದಲ್ಲಿ ಹೇಳಿದ್ದು) - ಇದರ ಮೇಲೆ ವ್ಯಾಖ್ಯಾನ ಅನಗತ್ಯವಾಗಿದೆ. ನಮ್ಮನ್ನು ನಾವೇ ತೂಗಿನೋಡಿಕೊಂಡರೆ ಸಾಕು.*

## ಸಂಶೋಧನೆ ಯಾರಿಗಾಗಿ

'ಸ್ವಾವಲಂಬನೆ' ಎನ್ನುವುದು ನಮ್ಮ ರಾಷ್ಟ್ರದ ಪ್ರಗತಿಗೆ ಸಂಬಂಧಪಟ್ಟ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ವೈಜ್ಞಾನಿಕ ಚಟುವಟಿಕೆಗಳಿಗೆಲ್ಲಾ ಆಧಾರವಾಗಿದ್ದ, ಸ್ಫೂರ್ತಿ ನೀಡುತ್ತಿದ್ದ, ಮೌಲ್ಯವಾಗಿದ್ದ, ಕಾಲವೊಂದಿತ್ತು. ಅದು ಸರಿಸುಮಾರು ೧೯೬೦ರ ದಶಕ. ಜಾಗತೀಕರಣ ಮತ್ತು ಉದಾರೀಕರಣಗಳಿಗೆ ಶರಣಾಗತನಾಗಿ ಭಾರತ ತನ್ನತನವನ್ನು ಕಳೆದುಕೊಳ್ಳುತ್ತಿರುವ ಇಂದಿನ ಕಾಲಘಟ್ಟದಲ್ಲಿ ನಮ್ಮ ಹೆಮ್ಮೆಯ ಕುರುಹುಗಳಾಗಿದ್ದ ಹೆಚ್ಚಿನ ರಾಷ್ಟ್ರೀಯ ಸಂಶೋಧನಾ ಸಂಸ್ಥೆಗಳು ಈ ಪ್ರಕ್ರಿಯೆಗೆ ಬಲಿಯಾಗಿ ನಗಣ್ಯವಾಗುತ್ತಿರುವುದು ಒಂದು ದುರಂತವೆಂದರೆ ತಪ್ಪಾಗಲಾರದು. ಭಾರತೀಯ ಸಮಾಜ ವಿಜ್ಞಾನ ಸಂಶೋಧನಾ ಸಂಸ್ಥೆ ಇದಕ್ಕೆ ಒಂದು ಸೂಕ್ತ ಉದಾಹರಣೆ. ವಿಶ್ವಬ್ಯಾಂಕ್, ವಿಶ್ವ ಸಂಸ್ಥೆಯ ಏಜೆನ್ಸಿಗಳು, ಫೋರ್ಡ್, ರಾಕ್‌ಫೆಲರ್ ಸಂಸ್ಥೆಗಳು ದೇಣಿಗೆ ಕೊಡುವುದು ಮಾತ್ರವೇ ಅಲ್ಲ, ನಮ್ಮ ಸಂಶೋಧನಾ ಸಂಸ್ಥೆಗಳ ಕಾರ್ಯಸೂಚಿ, ಕಾರ್ಯವೈಖರಿ ಹೇಗಿರಬೇಕು, ಎತ್ತ ಸಾಗಬೇಕು ಎಂಬುದನ್ನು ನಿರ್ಧರಿಸಹೊರಟಿವೆ. ಸರಕಾರದ ಅಧಿಕಾರಿಗಳೂ ಈ ಸಂಸ್ಥೆಗಳ ಆಂತರಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡಿ ವಾತಾವರಣವನ್ನು ಮತ್ತಷ್ಟು ಕಲುಷಿತಗೊಳಿಸುತ್ತಿದ್ದಾರೆ.

*- ಹರ್ಷ್ ಸೇಥಿ*

*-ನಮ್ಮ ರಾಷ್ಟ್ರದ ಎಲ್ಲ ಕ್ಷೇತ್ರಗಳಲ್ಲಿಯೂ ತಮ್ಮ ಕರಾಳಬಾಹುಗಳನ್ನು ಚಾಚುತ್ತಿರುವ ವಿಶ್ವಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಮತ್ತಿತರ ಜಾಗತಿಕ ಮಟ್ಟದ ಬಹುರಾಷ್ಟ್ರೀಯ ಕಂಪನಿಗಳ ಮೂಲ ಉದ್ದೇಶ ಭಾರತದ ಸ್ವಾತಂತ್ರ್ಯ ಮತ್ತು ಸಮಗ್ರತೆಯನ್ನು ಕಬಳಿಸುವುದು. ಈ ವಸಾಹತುಶಾಹಿ ಪಿತೂರಿಗಳ ವಿರುದ್ಧ ಜನಾಭಿಪ್ರಾಯ ಮೂಡಿಸುವುದು ಇಂದಿನ ಸಂದರ್ಭದಲ್ಲಿ ನಮ್ಮೆಲ್ಲರ ತುರ್ತಿನ ಜವಾಬ್ದಾರಿ ಎನ್ನುತ್ತಾರೆ ಹರ್ಷ್ ಸೇಥಿ ಕಳಕಳಿಯಿಂದ.*

## ಹಸಿವು-ಬಡತನ

''ಭಾರತದಲ್ಲಿ 'ಹಸಿರು ಕ್ರಾಂತಿ' ಆಗಿದೆ. ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಸಾಕಷ್ಟು ಸ್ವಾವಲಂಬನೆ ಗಳಿಸಲಾಗಿದೆ. ಆದರೆ ಇಡೀ ಆಫ್ರಿಕಾದ ಉಪಸಹಾರಾ ಪ್ರದೇಶದಲ್ಲಿ ಹಸಿವಿನಿಂದ ಬಳಲುತ್ತಿರುವ 18 ಕೋಟಿ ಜನರಿಗೆ ಹೋಲಿಸಿದರೆ ನಮ್ಮ ದೇಶದಲ್ಲಿ 20 ಕೋಟಿಗೂ ಮೀರಿದಷ್ಟು ಜನರು ಸಾಕಷ್ಟು ಕೂಳಿಲ್ಲದೆ ನರಳುತ್ತಿದ್ದಾರೆ.'' – *ಇದು ಜಾಗತಿಕ ಮಟ್ಟದಲ್ಲಿ ಆಹಾರದ ಕೊರತೆಯಿರುವ ದೇಶಗಳ ಪರಿಸ್ಥಿತಿಯನ್ನು ಕುರಿತು ವಿಶ್ವ ಆಹಾರ ಮತ್ತು ಕೃಷಿ ಸಂಘಟನೆ ಪ್ರಕಟಿಸಿದ ವರದಿಯ ಒಂದು ಭಾಗ.*

*ಸ್ವಾತಂತ್ರ್ಯಗಳಿಸಿದಾಗಿನಿಂದಲೂ ಬಡತನ, ಅನಕ್ಷರತೆ, ಕ್ಷಾಮ ಮತ್ತು ನಿರುದ್ಯೋಗ ಹಾಗೂ ಇನ್ನಿತರ ಸಾಮಾಜಿಕ ಮತ್ತು ಆರ್ಥಿಕ ಪೀಡೆಗಳು ನಮ್ಮ ದೇಶವನ್ನು ಕಿತ್ತು ತಿನ್ನುತ್ತಲೇ ಇವೆ. ರಾಜಕೀಯ ಪಕ್ಷಗಳು, ರಾಷ್ಟ್ರೀಯ ನಾಯಕರು, ಚುನಾವಣಾ ಪ್ರಣಾಳಿಕೆಗಳು ಈ ಬಗ್ಗೆ ಬಡಬಡಿಸುತ್ತ ಬಂದಿರುವುದಕ್ಕೆ ನಮ್ಮ ಕಿವಿಗಳು ಒಗ್ಗಿಹೋಗಿವೆ. ಆದ್ದರಿಂದ ಇಂತಹ ವರದಿಗಳು ಅಚ್ಚರಿಯನ್ನೇನೂ ಮೂಡಿಸುವುದಿಲ್ಲ. ಆದರೆ ಅಚ್ಚರಿ ಎಂದರೆ, 'ಹಸಿರು ಕ್ರಾಂತಿ', 'ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಸ್ವಾವಲಂಬನೆ' ಎಂಬೆಲ್ಲ ಹೆಗ್ಗಳಿಕೆಗಳ ತೋಳಿನಲ್ಲಿ ಮೆರೆಯುವ ನಮ್ಮ ಸ್ವತಂತ್ರ ಭಾರತ ಕಳೆದ 52 ವರ್ಷಗಳಲ್ಲಿ ಸ್ಥಾಪಿಸಿರುವ 'ಪ್ರಗತಿ'ಯ ಲಾಭ ಎತ್ತ ಹರಿದಿದೆ ಎಂದು ಆಲೋಚಿಸುವ ಗೋಜಿಗೆ ಹೋಗಿಲ್ಲ ಎನ್ನುವುದು. ಅಂದರೆ, ಈ ಎಲ್ಲ ಸಾಧನೆಗಳನ್ನು ತಮ್ಮದಾಗಿಸಿಕೊಂಡವರು ಮೇಲ್ವರ್ಗದ ಜನರು ಮಾತ್ರ ಎನ್ನುವುದು ನಿರ್ವಿವಾದ.*

ಸಾಹಿತ್ಯದಲ್ಲಿ ನೊಬೆಲ್ ಪ್ರಶಸ್ತಿ ವಿಜೇತರು

# ಥಿಯೊಡರ್ ಮಾಮ್‌ಸೆನ್

*ಸಾಹಿತ್ಯ ಪ್ರಕಾರದಲ್ಲಿ ೧೯೯೯ರ ನೊಬೆಲ್ ಪ್ರಶಸ್ತಿ ಜರ್ಮನಿಯ ಗುಂತರ್ ಗ್ರಾಸ್‌ಗೆ ಲಭಿಸಿರುವುದು ಸರಿಯಷ್ಟೇ. ಅದನ್ನು ಪಡೆದ ಮೊಟ್ಟಮೊದಲ ಜರ್ಮನ್ ಲೇಖಕನ ಪರಿಚಯ ಇಲ್ಲಿದೆ.*

ಲಿಂಗದೇವರು ಹಳೆಮನೆ

ಎರಡನೇ ಸಾಹಿತ್ಯದ ನೊಬೆಲ್ ಪ್ರಶಸ್ತಿ ಪಡೆದವರು ಜರ್ಮನಿಯ ಖ್ಯಾತ ಲೇಖಕ ಮತ್ತು ವಿದ್ವಾಂಸ ಥಿಯೊಡರ್ ಮಾಮ್‌ಸೆನ್. ಇವರ ಪೂರ್ಣ ಹೆಸರು ಕ್ರಿಸ್ಟಿಯನ್ ಮಥಾಯಿಸ್ ಥಿಯೊಡರ್ ಮಾಮ್‌ಸೆನ್. ಇದು ಜರ್ಮನಿಗೆ ಸಂದ ಪ್ರಥಮ ಸಾಹಿತ್ಯಿಕ ನೊಬೆಲ್ ಪ್ರಶಸ್ತಿ. ನೊಬೆಲ್ ಪ್ರಶಸ್ತಿ ಪ್ರಾರಂಭವಾದ ೧೯೦೧ರಲ್ಲೇ ಇಬ್ಬರು ಜರ್ಮನ್ ವಿಜ್ಞಾನಿಗಳು ನೊಬೆಲ್ ಪ್ರಶಸ್ತಿಗಳಿಸಿದ್ದರು. ಡಬ್ಲ್ಯು.ಸಿ. ರೊಂಟ್‌ಗೆನ್ ಅವರು ಭೌತಶಾಸ್ತ್ರದಲ್ಲಿ ಮತ್ತು ಇ.ಎ. ಫಾನ್ ಬೆರ್ಹಿಂಗ್‌ರವರು ವೈದ್ಯಕೀಯ ಶಾಸ್ತ್ರದಲ್ಲಿ ಪ್ರಶಸ್ತಿ ಪಡೆದುಕೊಂಡಿದ್ದರು. ೧೯೦೨ರಲ್ಲಿ ಥಿಯೊಡರ್ ಮಾಮ್‌ಸೆನ್‌ಗೆ ಸಾಹಿತ್ಯದಲ್ಲಿ ನೊಬೆಲ್ ಪ್ರಶಸ್ತಿ ಬಂದುದರ ಜೊತೆಗೇ ಅವರ ದೇಶದವರೇ ಆದ ಇ. ಫಿಷರ್ ಅವರಿಗೆ ರಸಾಯನ ಶಾಸ್ತ್ರದಲ್ಲಿ ನೊಬೆಲ್ ಬಹುಮಾನ ದೊರಕಿತು. ಹೀಗಾಗಿ ನೊಬೆಲ್ ಪ್ರಶಸ್ತಿ ಪ್ರತಿಷ್ಠಾಪನೆಗೊಂಡ ಎರಡು ವರ್ಷದಲ್ಲೇ, ಪ್ರತಿಷ್ಠಾಪನೆಗೊಂಡ ಐದು ವಿಷಯಗಳ ಪ್ರಶಸ್ತಿಗಳಲ್ಲಿ ನಾಲ್ಕು ವಿಷಯಗಳ ಪ್ರಶಸ್ತಿಗಳನ್ನು ಜರ್ಮನಿಯ ಪ್ರತಿಭಾವಂತರು ತಮ್ಮ ದೇಶಕ್ಕೆ ತಂದುಕೊಟ್ಟರು. ಶಾಂತಿಗಾಗಿ ಇರುವ ನೊಬೆಲ್ ಪ್ರಶಸ್ತಿ ಮಾತ್ರ ಆ ದೇಶಕ್ಕೆ ಇಲ್ಲಿಯವರೆಗೂ ದೊರೆತಿಲ್ಲವೆಂಬುದು ಗಮನಾರ್ಹ ವಿಷಯ.

ಥಿಯೊಡರ್ ಮಾಮ್‌ಸೆನ್‌ಗೆ ನೊಬೆಲ್ ಪ್ರಶಸ್ತಿ ದೊರಕಿದ್ದು ಅವರ ಎಂಭತ್ತೈದನೆ ವಯಸ್ಸಿನಲ್ಲಿ. ಬಹಳಷ್ಟು ವರ್ಷಗಳವರೆಗೆ, ಇದೊಂದು ದಾಖಲೆಯಾಗಿಯೇ ಉಳಿದಿತ್ತು. ೮೫ನೇ ವಯಸ್ಸಿನಲ್ಲಿ ನೊಬೆಲ್ ಪ್ರಶಸ್ತಿ ಪಡೆದ ಮಾಮ್‌ಸೆನ್, ಆ ಪ್ರಶಸ್ತಿಯಿಂದ ದೊರಕಿದ ಕೀರ್ತಿ ಮತ್ತು ಸಂಪತ್ತುಗಳನ್ನು ಅನುಭವಿಸುವುದಕ್ಕೆ ಬಹಳ ಕಾಲ ಬದುಕುಳಿಯಲಿಲ್ಲ. ಪ್ರಶಸ್ತಿ ಬಂದ ಒಂದು ವರ್ಷ ತುಂಬುವುದರ ಒಳಗಾಗಿ ಅವರು ನಿಧನ ಹೊಂದಿದರು.

ಥಿಯೊಡರ್ ಮಾಮ್‌ಸೆನ್ ಹುಟ್ಟಿದ್ದು ಜರ್ಮನಿಯ ಗಾರ್ಡಿಂಗ್ ಎಂಬ ಪಟ್ಟಣವೊಂದರಲ್ಲಿ, ೧೮೧೭ರ ನವೆಂಬರ್ ೩೦ರಂದು. ಇವರು ತಮ್ಮ ಪ್ರಥಮ ಹಂತದ ಶಿಕ್ಷಣವನ್ನು ಕೈಲ್ ಎಂಬ ಪಟ್ಟಣದಲ್ಲಿ ಮುಗಿಸಿದರು. ಕ್ರಮೇಣ ಇವರ ಆಸಕ್ತಿ ರೋಮನ್ ಕಾನೂನಿನ ಕಡೆಗೆ ತಿರುಗಿತು. ೧೮೪೩ರಲ್ಲಿ ಡೇನಿಷ್ ಸರ್ಕಾರದಿಂದ ಇವರಿಗೆ ವಿದ್ಯಾರ್ಥಿ ವೇತನ ದೊರಕಿತು. ಅದರಿಂದಾಗಿ ಇಟಲಿಯಲ್ಲಿ ಉನ್ನತ ಶಿಕ್ಷಣ ಮಾಡಲು ಹೋದರು. ೧೮೪೮ರಲ್ಲಿ ಅತ್ಯಂತ ಚಿಕ್ಕ ವಯಸ್ಸಿನಲ್ಲಿ ಲೀಪ್ಜಿಗ್ ವಿಶ್ವವಿದ್ಯಾಲಯದಲ್ಲಿ ಸಿವಿಲ್ ಕಾನೂನಿನ ಪ್ರಾಧ್ಯಾಪಕರಾಗಿ ನೇಮಕಗೊಂಡರು. ಆದರೆ ಕೆಲವು ರಾಜಕೀಯ ಕಾರಣಗಳಿಂದಾಗಿ ೧೮೫೦ರಲ್ಲಿ ಅವರನ್ನು ಆ ಹುದ್ದೆಯಿಂದ ತೆಗೆಯಲಾಯಿತು. ಎರಡು ವರ್ಷಗಳ ನಂತರ ಅವರು ಜೂರಿಕ್ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ನೇಮಕಗೊಂಡರು. ಆದರೆ ಮಾಮ್‌ಸೆನ್ ಅಲ್ಲಿಯೂ ಬಹಳ ಕಾಲ ನೆಲೆ ನಿಲ್ಲಲಿಲ್ಲ. ೧೮೫೮ರಲ್ಲಿ ತನ್ನ ಸ್ವಂತ ದೇಶ ಜರ್ಮನಿಗೆ ವಾಪಸಾದರು. ಅಲ್ಲಿಂದ ಮುಂದೆ ಹೆಚ್ಚೂ ಕಡಿಮೆ ಅವರ ಓಡಾಟ ಒಂದು ನಿಲುಗಡೆಗೆ ಬಂದಂತಾಯಿತು. ಅವರು ತಮ್ಮ ಅಧ್ಯಯನ ಮತ್ತು ಬರವಣಿಗೆಯ ಕಡೆ ಗಮನ ಕೇಂದ್ರೀಕರಿಸಿದರು. ಅನೇಕ ವರ್ಷಗಳವರೆಗೆ ಅವರು ಪ್ರಷ್ಯನ್ ಪಾರ್ಲಿಮೆಂಟಿನ ಸದಸ್ಯರಾಗಿದ್ದರು. ತಮ್ಮ ಅಗಾಧ ವಿದ್ವತ್ತು, ತೀಕ್ಷ್ಣತರ್ಕ ಮತ್ತು ಅನೇಕ ಬರಹಗಳಿಂದ ಇಡೀ ವಿದ್ವತ್‌ಲೋಕವನ್ನೇ ಚಕಿತಗೊಳಿಸಿದ್ದ ಮಾಮ್‌ಸೆನ್ ೧೯೦೩ರ ನವೆಂಬರ್ ೧ರಂದು ಚಾರ್ಲಟೆನ್‌ಬರ್ಗ್‌ನಲ್ಲಿ ನಿಧನ ಹೊಂದಿದರು.

ಥಿಯೊಡರ್ ಮಾಮ್‌ಸೆನ್‌ಗೆ ಸ್ವೀಡಿಷ್ ರಾಯಲ್



ಅಕಾಡೆಮಿ ಸಾಹಿತ್ಯದಲ್ಲಿ ನೊಬೆಲ್ ಪ್ರಶಸ್ತಿ ಪ್ರಕಟಿಸಿದಾಗ ಯಾವುದೇ ವ್ಯತಿರಿಕ್ತ ಪ್ರತಿಕ್ರಿಯೆಗಳು ಕೇಳಿಬರಲಿಲ್ಲ. ಬದಲಿಗೆ ಇಡೀ ಯೂರೋಪಿನಲ್ಲಿ ಒಂದು ರೀತಿಯ ಸಂತೃಪ್ತಿಯ ಮನೋಭಾವ ಕಂಡುಬಂದಿತು. ಇಡೀ ಯೂರೋಪಿನಲ್ಲಿ ಅವರ ಜನಪ್ರಿಯತೆ ಅಷ್ಟರ ಮಟ್ಟಿಗೆ ಬೆಳೆದಿತ್ತು. ಸ್ವೀಡಿಷ್ ಅಕಾಡೆಮಿ ಪ್ರಶಸ್ತಿ ಪ್ರಕಟಿಸಿದ್ದು ಅವರ ''ಎ ಹಿಸ್ಟರಿ ಆಫ್ ರೋಮ್'' ಎಂಬ ಪುಸ್ತಕಕ್ಕೆ. ಈ ಕೃತಿ ಮುಖ್ಯವಾಗಿ ಐತಿಹಾಸಿಕ ಬರವಣಿಗೆ. ಇದನ್ನು ನಾಲ್ಕು ಸಂಪುಟಗಳಲ್ಲಿ ಮಾಮ್‌ಸೆನ್ ೧೮೫೬ರಲ್ಲಿ ಪ್ರಕಟಿಸಿದ್ದರು. ಇದರಿಂದ ಪ್ರಶಸ್ತಿಯ ಆಯ್ಕೆಯ ನಿಯಮಗಳಲ್ಲೇ ಕೆಲವು ಮೂಲಭೂತ ಬದಲಾವಣೆಗಳಾದದ್ದನ್ನು ಗಮನಿಸಬೇಕು. ಮೊದಲನೆಯದಾಗಿ ಸ್ವೀಡಿಷ್ ಅಕಾಡೆಮಿ 'ಸಾಹಿತ್ಯ' ಎನ್ನುವ ಪದಕ್ಕೆ ಒಂದು ವಿಶಾಲಾರ್ಥದ ವ್ಯಾಖ್ಯಾನ ಕೊಡುವ ಪ್ರಯತ್ನ ಮಾಡಿತು. ಇತಿಹಾಸದ ಬರವಣಿಗೆಯನ್ನೂ ಸಾಹಿತ್ಯದ ಚೌಕಟ್ಟಿನಲ್ಲಿ ಸೇರಿಸುವುದರ ಮೂಲಕ ಶಕ್ತ ಬರವಣಿಗೆಗೆ ಒಂದು ಸೃಜನಶೀಲತೆಯ ಆಯಾಮವನ್ನು ತಂದುಕೊಟ್ಟಿತು. ಎರಡನೆಯದಾಗಿ, ಸಾಹಿತ್ಯಕ್ಕೆ ನೀಡುವ ನೊಬೆಲ್ ಪ್ರಶಸ್ತಿಯನ್ನು ಲೇಖಕನ ಇಡೀ ಜೀವನದ ಸಾಧನೆಯನ್ನು ಗಮನಿಸಿ ಪುರಸ್ಕೃತಗೊಳಿಸಬೇಕು, ಬರೀ ಒಂದು ಕೃತಿಯನ್ನು ನೋಡಿ ಅಲ್ಲ ಎಂಬುದು. ಆಲ್‌ಫ್ರೆಡ್ ನೊಬೆಲ್ ತನ್ನ ಉಯಿಲಿನಲ್ಲಿ ''ಹಿಂದಿನ ವರ್ಷ''ದ ಶ್ರೇಷ್ಠ ಕೃತಿಯನ್ನು ಗಮನದಲ್ಲಿಟ್ಟುಕೊಂಡು ಪ್ರಶಸ್ತಿ ನೀಡಬೇಕೆಂದು ಸೂಚಿಸಿದ್ದ. ಅವನ ಈ ಸೂಚನೆ ಪ್ರಶಸ್ತಿ ಪ್ರಾರಂಭವಾದ ಎರಡನೇ ವರ್ಷವೇ ಉಲ್ಲಂಘಿತವಾಗಿತ್ತು. ನೊಬೆಲ್ ನೀಡಿದ ಸೂಚನೆಯನ್ನಷ್ಟೇ ಗಮನದಲ್ಲಿಟ್ಟುಕೊಂಡು ಪ್ರಶಸ್ತಿ ನೀಡಿದರೆ ಅನೇಕ ಮಹಾನ್ ಲೇಖಕರು ಪ್ರಶಸ್ತಿಯಿಂದ ವಂಚಿತರಾಗುತ್ತಾರೆಂಬುದು ರಾಯಲ್ ಅಕಾಡೆಮಿಯ ಅಭಿಮತವಾಗಿತ್ತು.

ಥಿಯೊಡರ್ ಮಾಮ್‌ಸೆನ್‌ಗೆ ಅಪಾರ ಜೀವನಾನುಭವವಿತ್ತು. ಬಹಳ ದೀರ್ಘ ಪ್ರಯಾಣದ ಅನುಭವಗಳಿದ್ದವು. ಜ್ಞಾನದ ಅನೇಕ ಕ್ಷೇತ್ರಗಳಲ್ಲಿ ಆಳವಾದ ತಿಳುವಳಿಕೆ ಇತ್ತು. ಅವರ ಅತ್ಯಂತ ಆಪ್ತ ಹಾಗು ಆಸಕ್ತಿಯ ಕ್ಷೇತ್ರಗಳೆಂದರೆ, ಇತಿಹಾಸ, ಕಾನೂನು ಮತ್ತು ಪುರಾತತ್ವ ಶಾಸ್ತ್ರ. ಈ ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಆದರೆ, ಇವೆಲ್ಲಕ್ಕೆ ಕಳಶವಿಟ್ಟಂತೆ ಅವರ ಹೆಸರು ಇಡೀ ಯೂರೋಪಿನಲ್ಲಿ ಅಜರಾಮರವಾಗಿರುವುದು ಅವರ ಮೇರುಕೃತಿ ''ಎ ಹಿಸ್ಟರಿ ಆಫ್ ರೋಮ್''ನಿಂದಾಗಿ.

೧೮೫೪ರಿಂದ ೧೮೫೬ರವರೆಗಿನ ದೀರ್ಘ ಅವಧಿಯಲ್ಲಿ ನಾಲ್ಕು ಸಂಪುಟಗಳಲ್ಲಿ ಮೂಡಿಬಂದ ''ಎ ಹಿಸ್ಟರಿ ಆಫ್ ರೋಮ್'' ಸಮಕಾಲೀನ ಯೂರೋಪ್ ಇತಿಹಾಸ ತಜ್ಞರ ಮೇಲೆಲ್ಲಾ ಮಾಂತ್ರಿಕ ಪ್ರಭಾವ ಬೀರಿತು. ಈ ಕೃತಿ ಪ್ರಾಚೀನ ಕಾಲದ ರೋಮ್ ಇತಿಹಾಸವನ್ನು ಪುನರ್ ಸೃಷ್ಟಿಸುತ್ತದೆ. ಅಲ್ಲಿಯವರೆಗೆ ಹೆಚ್ಚೂ ಕಡಿಮೆ ವಿಸ್ಮೃತಿಗೆ ಸಂದಿದ್ದ ರೋಮ್‌ನ ಇತಿಹಾಸ ಮಾಮ್‌ಸೆನ್‌ರ ಗ್ರಹಿಕೆಯಲ್ಲಿ ಹೊಸದೊಂದು ರೂಪ ತಾಳಿ ಹೊರಬಂದಿದೆ. ಈ ಕೃತಿ ಬರೀ ರೋಮ್‌ನ ಇತಿಹಾಸವನ್ನಷ್ಟೆ ಹೇಳುವುದಿಲ್ಲ. ಇಡೀ ಇಟಲಿಯ ಇತಿಹಾಸವನ್ನೂ ಹೇಳುತ್ತದೆ. ರೋಮ್ ಮತ್ತು ರೋಮನ್ನರು ಇಟಲಿಯ ಒಂದು ಭಾಗವಾಗಿದ್ದರೂ ಅವರು ತಮ್ಮ ಸಂಸ್ಕೃತಿ ಮತ್ತು ಪ್ರಾಬಲ್ಯತೆಯಿಂದಾಗಿ ಇಡೀ ದೇಶವನ್ನೇ ಬೆಚ್ಚಿಬೆರಗಾಗಿಸಿದವರು. [illegible]

([illegible])

# ಸಾವಯವ ಗೊಬ್ಬರ

ಎಸ್. ಎಸ್. ಕಟಗಿಹಳ್ಳಿಮಠ

ರೈತರು ತಮ್ಮ ಜಮೀನುಗಳಲ್ಲಿ ಫಲವತ್ತತೆಯನ್ನು ಹೆಚ್ಚಿಸಲು ಸಾವಯವ ಗೊಬ್ಬರಗಳ ಸೂಕ್ತ ಬಳಕೆಯನ್ನು ತಿಳಿಯುವುದು ಅವಶ್ಯ. ರೈತನು ರಾಸಾಯನಿಕ ಗೊಬ್ಬರ ಹಾಗೂ ಸಾವಯವ ಗೊಬ್ಬರಗಳ ಬಳಕೆಯ ವಾದವಿವಾದಗಳ ಅಡ್ಡರಸ್ತೆಯಲ್ಲಿ ನಿಂತಂತಾಗಿದೆ. ಪರಿಸರವಾದಿಗಳು ರಾಸಾಯನಿಕ ಗೊಬ್ಬರಗಳ ಬಳಕೆಯಿಂದ ನೆಲ, ಜಲ, ವಾಯು ಹಾಗೂ ಆಹಾರ ಮಾಲಿನ್ಯವಾಗುವುದೆಂಬ ವಾದವನ್ನು ಪ್ರಬಲವಾಗಿ ಮಂಡಿಸುತ್ತಿದ್ದಾರೆ.

ಇದರಲ್ಲಿ ಸತ್ಯಾಂಶವಿದೆ. ಸದ್ಯದ ಪರಿಸ್ಥಿತಿಯಲ್ಲಿ ರಾಸಾಯನಿಕ ಗೊಬ್ಬರಗಳ ಬೆಲೆಯು ಗಗನಕ್ಕೇರಿದೆ. ಅಲ್ಲದೆ ಅವುಗಳ ಕೊರತೆಯೂ ಇದೆ. ಚಿಕ್ಕ ಹಿಡುವಳಿದಾರ ರೈತರಂತೂ ಈ ರಾಸಾಯನಿಕ ಗೊಬ್ಬರಗಳನ್ನು ಕೊಳ್ಳುವ ಆರ್ಥಿಕ ಭದ್ರತೆಯನ್ನು ಹೊಂದಿಲ್ಲ. ನಮ್ಮಲ್ಲಿ ಅಂತಹ ರೈತರೇ ಹೆಚ್ಚು.

ಇಂದು ಅನೇಕ ಸಾವಯವ ಗೊಬ್ಬರಗಳ ಬೆಲೆಯೂ ಹೆಚ್ಚಾಗಿದೆ. ಎಲ್ಲ ರೈತರಿಗೂ ಬೇಕಾಗುವಷ್ಟು ಸಾವಯವ ಗೊಬ್ಬರಗಳು ಲಭ್ಯವಿಲ್ಲವೆಂದರೆ ತಪ್ಪಾಗಲಾರದು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಸೃಷ್ಟಿ ದೇವತೆಯು ಕಸವನ್ನು ರಸವನ್ನಾಗಿ ಮಾಡು ಎಂದು ರೈತರನ್ನು ಕೈಬೀಸಿ ಕರೆಯುತ್ತಿದ್ದಾಳೆ. ಅದನ್ನು ಎಲ್ಲ ರೈತರೂ, ಕೃಷಿತಜ್ಞರೂ, ಕೃಷಿ ವಿಸ್ತರಣಾ ಸಿಬ್ಬಂದಿಯವರೂ ಮತ್ತು ಸಮಾಜದ ಇನ್ನುಳಿದ ಘಟಕಗಳ ಜನರೆಲ್ಲರೂ ತಿಳಿದುಕೊಳ್ಳುವುದು ವಿಹಿತ.

ಈಗ ನಮ್ಮ ಹಳ್ಳಿಗಳಲ್ಲಿ ಕೊಟ್ಟಿಗೆ ಗೊಬ್ಬರ (ಸಗಣಿಗೊಬ್ಬರ)ವನ್ನು ತಯಾರು ಮಾಡುವ ಪದ್ಧತಿಯು ಕೂಡ ಸರಿಯಾಗಿರುವುದಿಲ್ಲ. ರೈತರು ತಮ್ಮ ಮನೆಯ ಸಮೀಪ ಅಥವಾ ಹಳ್ಳಿಯ ಸುತ್ತಲೂ ಖಾಲಿ ಇರುವ ಪ್ರದೇಶಗಳಲ್ಲಿ ಕೊಟ್ಟಿಗೆಯಿಂದ ತಂದ ದನಗಳ ಸಗಣಿ ಹಾಗೂ ಗಂಜಲುಗಳನ್ನು ತಗ್ಗಿನಲ್ಲಿ ತುಂಬುತ್ತಾ ಹೋಗುತ್ತಾರೆ. ಮಳೆ ಬಂದಾಗ ಈ ಗೊಬ್ಬರದ ಗುಂಡಿಗಳಲ್ಲಿ ನೀರು ನಿಂತುಬಿಡುತ್ತದೆ. ಅನೇಕ ರೈತರು ಮತ್ತು ಲೇಖಕರು ಮಾತನಾಡುವಾಗ 'ಕೊಳೆತ' ಗೊಬ್ಬರವೆಂದು ಶಬ್ದ ಪ್ರಯೋಗ ಮಾಡುತ್ತಾರೆ. ಆದರೆ ಗೊಬ್ಬರವು "**ಕೊಳೆಯಬಾರದು; ಅದು ಕಳಿಯಬೇಕು.**" ಉದಾಹರಣೆಗೆ ಹೇಳುವುದಾದರೆ ಉಪ್ಪಿನಕಾಯಿ ತಯಾರು ಮಾಡುವುದರಲ್ಲಿ ಉಪ್ಪಿನಕಾಯಿಯು ಕಳಿಯಬೇಕು. ಆಗ ಅದು ರುಚಿ ಕೊಡುತ್ತದೆ. ಆರೋಗ್ಯಕ್ಕೂ ಒಳ್ಳೆಯದು. ಅದೇ ಉಪ್ಪಿನಕಾಯಿ ಕೊಳೆತರೆ ಅದರಲ್ಲಿ ರುಚಿಯೂ ಇರುವುದಿಲ್ಲ, ಆರೋಗ್ಯಕರವೂ ಅಲ್ಲ. ಇದೇ ರೀತಿಯಲ್ಲಿ ಗೊಬ್ಬರವೂ ಗೊಬ್ಬರದ ಗುಂಡಿಗಳಲ್ಲಿ ಚೆನ್ನಾಗಿ ಕಳಿಯಬೇಕು, ಕೊಳೆಯಬಾರದು. ಕಳಿತ ಗೊಬ್ಬರದಲ್ಲಿ ಫಲವತ್ತತೆಯ ಅಂಶವು ಹೆಚ್ಚಾಗಿರುತ್ತದೆ. ನಮ್ಮ ರೈತರು ಕೊಟ್ಟಿಗೆ ಗೊಬ್ಬರವನ್ನು ಕಳಿಯುವ ರೀತಿಯಲ್ಲಿ ತಯಾರು ಮಾಡುವುದನ್ನು ಕಲಿಯಬೇಕು.

ನಮ್ಮ ರೈತರ ಕಣ, ಹೊಲ, ಗದ್ದೆ, ತೋಟಗಳಲ್ಲಿ ಅನೇಕ ಸಾವಯವ ಪದಾರ್ಥಗಳು, ಅಂದರೆ, ಬತ್ತದ ಹುಲ್ಲು, ರಾಗಿ ಹುಲ್ಲು, ನವಣೆ ಹುಲ್ಲು ಇತ್ಯಾದಿ ಸಿಗುತ್ತವೆ. ಜೋಳದ ದಂಟುಗಳು, ತುಂಬೆ, ಗರಿಕೆ ಇವುಗಳನ್ನು ಮತ್ತು ಬೀಜ ಕಟ್ಟಿದ ಹುಲ್ಲು ಕಳೆಗಳನ್ನು, ಪಾರ್ಥೇನಿಯಂ ಕಳೆಯನ್ನು ಬಿಟ್ಟು, ಉಳಿದ ಎಲ್ಲಾ ಹುಲ್ಲು ಕಳೆಗಳನ್ನೂ ತೆಗೆಸಿದಾಗ ಕೂಡಿಟ್ಟು ಕಾಂಪೋಸ್ಟ್ ಮಾಡುವ ಕಲೆಯನ್ನೂ ಕಲಿಯಲೇಬೇಕಾದ ಕಾಲ ಈಗ ಬಂದಿದೆ. ಹೊಲದಲ್ಲಿದ್ದ ಹೊಂಗೆ, ಬೇವು, ಎಕ್ಕೆ, ಲೆಕ್ಕೆ ಇನ್ನೂ ಅನೇಕ ಗಿಡಗಳ ಸೊಪ್ಪು, ಎಲೆಗಳನ್ನು ಕತ್ತರಿಸಿ ಕಾಂಪೋಸ್ಟ್ ಮಾಡಲು ಉಪಯೋಗಿಸಬೇಕು. ಎಷ್ಟೋ ಕಡೆ ಬೇಲಿಗಳ ಮೇಲೆ ಹಸುರಿನ ಬಳ್ಳಿಗಳು ಹಬ್ಬಿರುತ್ತವೆ. ರಸ್ತೆಯಲ್ಲಿಯೂ ಚಾಚಿ ಬಂದಿರುತ್ತವೆ. ಇವನ್ನು ಕಿತ್ತು ಕಾಂಪೋಸ್ಟ್ ಮಾಡಬಹುದು. ಹೊಲ, ತೋಟ, ಗದ್ದೆಗಳಲ್ಲಿ ಸಿಗುವ ಆದರೆ ಮಾನವನ ಉಪಯೋಗಕ್ಕೆ ಅರ್ಹವಲ್ಲದ ತರಕಾರಿ ಹಣ್ಣು ಹಂಪಲುಗಳನ್ನು ಕೂಡ ಕಾಂಪೋಸ್ಟ್ ಮಾಡಲು ಉಪಯೋಗಿಸಬೇಕು. ಇದರಿಂದ ತಕ್ಕಮಟ್ಟಿಗಾದರೂ ಸಾವಯವ ಗೊಬ್ಬರಗಳ ಕೊರತೆಯು ಕಡಿಮೆಯಾಗುತ್ತದೆ. ಇದರಂತೆಯೇ ಹೆಚ್ಚಿಗೆ ಫಲವತ್ತಾದ ಎರೆಹುಳದ ಕಾಂಪೋಸ್ಟ್ ತಯಾರು ಮಾಡುವುದು ಹೆಚ್ಚು ಲಾಭದಾಯಕ.

ಒಂದು ಮುಷ್ಟಿ ಮಣ್ಣನ್ನು ಪರೀಕ್ಷಿಸಿದಾಗ ಅದರಲ್ಲಿ ಕೋಟ್ಯಾನುಕೋಟಿ ಅಣುಜೀವಿಗಳು ಇರುವುದು ಕಂಡುಬರುತ್ತದೆ. ಈ ಮಣ್ಣಿನಲ್ಲಿರುವ ಅಣುಜೀವಿಗಳು ಫಲವತ್ತತೆಯನ್ನು ಕಾಯಲು, ಮಣ್ಣಿನ ರಚನೆ ಸುಧಾರಿಸಲು ಮತ್ತು ಮಣ್ಣಿನ ನೇಯ್ಗೆಯನ್ನು ಅಂದವಾಗಿಸಲು ಬಹಳ ಸಹಾಯಕವಾಗುತ್ತವೆ.

ಜಮೀನಿನಲ್ಲಿ ಎರಡು ಅಡಿ ಆಳದವರೆಗಿನ ಮಣ್ಣೇ ಅದರ ಮಾಂಸಖಂಡ ಮತ್ತು ರಕ್ತ ತುಂಬಿದ ವಸ್ತು. ಕೃಷಿಗೆ ಈ ಮಣ್ಣೇ ಪ್ರಶಸ್ತವಾದುದು. ಮಳೆ ಬಂದಾಗ ಮಳೆ ನೀರು ಈ ಮಣ್ಣನ್ನು ಕೊಚ್ಚಿಕೊಂಡು ಹೋದರೆ ಭೂಮಿಯು ಬಡವಾಗುತ್ತದೆ; ಭೂಮಿಯಲ್ಲಿ ತೇವಾಂಶವೂ ಇಲ್ಲದಂತಾಗುತ್ತದೆ. ಆದುದರಿಂದ ನಾವು ಸಾವಯವ ಗೊಬ್ಬರಗಳನ್ನು ಜಮೀನಿನ ಮಣ್ಣಿನಲ್ಲಿ ಬೆರೆಸಿ ಅದರ ಫಲವತ್ತತೆಯನ್ನು ಹೆಚ್ಚಿಸಬೇಕು. ಜಮೀನು ಸಮಮಟ್ಟ ಇಲ್ಲದಾಗ ದೊಡ್ಡ ಮಳೆಯಿಂದಾಗಿ ಫಲವತ್ತಾದ ಮಣ್ಣಲ್ಲದೆ ಆ ಮಣ್ಣಿನಲ್ಲಿ ಬೆರೆಸಿದ ಅತಿಮಹತ್ವದ ಫಲವತ್ತತೆ ಹೆಚ್ಚಿಸುವ ಗೊಬ್ಬರವೂ ಕೂಡ ಕೊಚ್ಚಿಹೋಗುತ್ತದೆ.

**ಆದುದರಿಂದ ನಮ್ಮ ರೈತರು ಮೊದಲು ಒಡ್ಡುಗಳನ್ನು ಹಾಕಿಕೊಂಡು, ಜಮೀನನ್ನು ಮಟ್ಟ ಮಾಡಿ, ಆಕಾಶದಿಂದ ಬಿದ್ದ ಒಂದು ಹನಿ ನೀರೂ ಮತ್ತು ಅದರ ಜೊತೆಗೆ ನಮ್ಮ ಹೊಲದಲ್ಲಿಯ ಕಣವೂ ಕೂಡ ಕೊಚ್ಚಿಹೋಗದಂತೆ ನೋಡುವುದು ಅತಿ ಮುಖ್ಯ.** ಇವೆಲ್ಲವೂ ಕೃಷಿ ಉತ್ಪತ್ತಿ ಹೆಚ್ಚು ಮಾಡಲು ಬಹಳ ಸಹಾಯಕ. ಫಲವತ್ತತೆಯನ್ನು ಹೆಚ್ಚಿಸಲು ಕೆಳಗೆ ಕಾಣಿಸಿರುವ ಸಾವಯವ ಗೊಬ್ಬರಗಳನ್ನು ಬಳಸಬಹುದು: ಕಳಿತ ಕೊಟ್ಟಿಗೆ ಗೊಬ್ಬರ, ಚೆನ್ನಾಗಿ ಕಳಿತ ಕಾಂಪೋಸ್ಟ್ ಗೊಬ್ಬರ, ಎರೆ ಹುಳದ ಕಾಂಪೋಸ್ಟ್, ಕೋಳಿಯ ಗೊಬ್ಬರ, ಕುದುರೆ, ಕತ್ತೆಯ ಗೊಬ್ಬರ, ಮಾನವನ ಮಲದ ಗೊಬ್ಬರ (ಇದನ್ನೇ ಬಂಗಾರದ ಗೊಬ್ಬರ ಎನ್ನುತ್ತಾರೆ); ಎಲುಬಿನ ಪುಡಿಯ ಗೊಬ್ಬರ, ಮೀನಿನ ಗೊಬ್ಬರ, ಎಣ್ಣೆ ಕಾಳುಗಳ ಹಿಂಡಿಯ ಗೊಬ್ಬರ, ಇತ್ಯಾದಿ. ಬೇವಿನ ಹಿಂಡಿ, ಹೊಂಗೆ ಹಿಂಡಿ, ಕಡಲೆಕಾಯಿ ಹಿಂಡಿ ಮುಂತಾದವು ಕೂಡ ಜಮೀನಿಗೆ ಹೆಚ್ಚು ಫಲವತ್ತತೆ ಕೊಡುತ್ತವೆ.

ಇದರ ಜೊತೆಗೆ ಗ್ಲಿಸೀಡಿಯಾ (ಗೊಬ್ಬರದ ಗಿಡ) ಎಲೆಗಳನ್ನು ಹಾಗೂ ಹೊಂಗೆ ಗಿಡದ ಎಲೆಗಳನ್ನು ಬಳಸಬಹುದು. ಈ ಹಸಿರೆಲೆ ಗೊಬ್ಬರಗಳಿಂದ ಫಲವತ್ತತೆ ಹೆಚ್ಚಾಗುವುದಲ್ಲದೆ ಮಣ್ಣಿನ ರಚನೆಯು ಉತ್ತಮಗೊಳ್ಳುತ್ತದೆ ಹಾಗೂ ಮಣ್ಣು ತೇವಾಂಶ ಹಿಡಿಯುವ ಶಕ್ತಿಯನ್ನು ಹೊಂದುತ್ತದೆ. ಇತ್ತೀಚಿನ ದಿವಸಗಳಲ್ಲಿ ಅಣುಜೀವಿ ಗೊಬ್ಬರಗಳ ಬಳಕೆ ಬಂದಿದೆ. ಇದು ಅತಿ ಲಾಭದಾಯಕ. ಈ ಅಣುಜೀವಿ ಗೊಬ್ಬರಗಳು ಬೆಳೆಗಳ ಬೇರುಗಳ ಮೇಲೆ ಗಂಟು ಕಟ್ಟಿಕೊಂಡು ವಾತಾವರಣದಲ್ಲಿರುವ ಸಾರಜನಕವನ್ನು ಹೀರಿ ಭೂಮಿಯ ಫಲವತ್ತತೆಯನ್ನು ಹೆಚ್ಚಿಸುತ್ತವೆ. ಇದಕ್ಕೆ ಸಾರಜನಕ ಸ್ಥಿರೀಕರಣ ಎನ್ನುತ್ತಾರೆ.

ಕಟಗಿಹಳ್ಳಿ ಮಠ ಎಸ್. ಎಸ್.

### ಎರಡೇ ಪಕ್ಷಗಳ ಪ್ರಜಾಪ್ರಭುತ್ವ

*ನೀನು ಅಧಿಕಾರಕ್ಕೆ*
*ಬಂದರೆ,*
*ನನಗೂ-ಲಾಭ*
*ನಾನು ಗೆದ್ದರೆ,*
*ನಿನಗೂ-ಲಾಭ*
*ಮತ್ತೇಕೆ*
*ನಮ್ಮಿಬ್ಬರಲ್ಲಿ*
*ದ್ವೇಷ ?!*

– ಎಂ. ದತ್ತಾತ್ರೇಯ

# ಕೆಲವು ಅಂಕಿ ಅಂಶಗಳು

* ವಿಶ್ವದಲ್ಲಿನ ೬೦,೦೦೦ ಮೂಲ ಕಂಪೆನಿಗಳು, ವಿಶ್ವದಾದ್ಯಂತ ಸುಮಾರು ಐದುಲಕ್ಷ ಮರಿ ಕಂಪೆನಿಗಳನ್ನು ತೆರೆದಿವೆ. ಮೂಲ ಕಂಪೆನಿಗಳ ಸಿಂಹ ಪಾಲು ಮುಂದುವರಿದ ಪಾಶ್ಚಿಮಾತ್ಯ ರಾಷ್ಟ್ರಗಳದ್ದು ಮತ್ತು ಅದರಲ್ಲೂ ಮುಖ್ಯಪಾಲು ಅಮೆರಿಕದ್ದು. ಮರಿ ಕಂಪೆನಿಗಳಲ್ಲಿ ಪಾಲುದಾರರು ಸ್ಥಳೀಯ ಹಿರಿಯ ಉದ್ದಿಮೆದಾರರು.
* ೧೯೮೦-೧೯೯೦ರ ದಶಕದಲ್ಲಿ ವಿಶ್ವದ ಅತಿ ಹಿರಿಯ ಬಂಡವಳಿಗ ಕಂಪೆನಿಗಳು ಮಹತ್ತರ ಪ್ರಮಾಣದಲ್ಲಿ ತಮ್ಮ ಬಂಡವಾಳವನ್ನು ವಿಶ್ವದಾದ್ಯಂತ ರಫ್ತು ಮಾಡಿದವು. ೧೯೯೦-೨೦೦೦ದ ದಶಕದಲ್ಲಿ ಇದೇ ಕೆಲಸ ಇನ್ನೂ ದೊಡ್ಡ ಪ್ರಮಾಣದಲ್ಲಿ ನಡೆದಿದೆ. ಕಳೆದ ಶತಮಾನದ ಕೊನೆಯ ಶತಮಾನದ ಪ್ರವೃತ್ತಿಗಳು ವಸಾಹತುಗಳಿಗಾಗಿ ಸ್ಪರ್ಧೆಗೆ ದಾರಿಮಾಡಿಕೊಟ್ಟು ಯುದ್ಧ ಪ್ರತಿಯುದ್ಧದಲ್ಲಿ ಪರಿಣಮಿಸಿದವು. ಈ ಶತಮಾನದಲ್ಲಿ ಆರ್ಥಿಕ ನೀತಿ-ಒತ್ತಡ- ವ್ಯಾಪಾರ-ದಿಗ್ಬಂಧನ ಮುಂತಾದ ಪರೋಕ್ಷ-ಪ್ರತ್ಯಕ್ಷ ರೀತಿಯಲ್ಲಿ, ಗ್ಯಾಟ್, ಅಂಕ್ಟಾಡ್ ಮತ್ತು ವಿಶ್ವ ವ್ಯಾಪಾರಿ ಸಂಘಟನೆ ಮೂಲಕ ಊಹಿಸಲೂ ಸಾಧ್ಯವಿಲ್ಲದ ಮಹತ್ಪ್ರಮಾಣದಲ್ಲಿ ಆರ್ಥಿಕ ಅತಿಕ್ರಮಣ ನಡೆದಿದೆ.
* ಬಂಡವಾಳವನ್ನು ಬೇರೆ ದೇಶಗಳಲ್ಲಿ ಹೂಡುವುದು ವ್ಯಾಪಾರ ವಿನಿಮಯದ ಪ್ರಕ್ರಿಯೆಗಿಂತ ಗುಣಾತ್ಮಕವಾಗಿ ಭಿನ್ನವಾದುದು. ಪರದೇಶದ ಹಣವನ್ನೂ ಆತಿಥೇಯ ದೇಶದಲ್ಲಿ ಬಂಡವಾಳವಾಗಿ ಹೂಡಿ, ಉತ್ಪಾದಿಸಿ, ಲಾಭವನ್ನು ಸ್ವದೇಶಕ್ಕೆ ಕೊಂಡೊಯ್ಯುವ ಪ್ರಕ್ರಿಯೆ ಇದು. (ಇದರ ಪರಿಣಾಮ ಸಾಧುವೇ ಅಸಾಧುವೇ ಎಂಬ ಚರ್ಚೆ ವಿಸ್ತಾರವಾದುದು. ಇಲ್ಲಿ ಅದರ ಉದ್ದೇಶವಿಲ್ಲ).
* ಅಮೆರಿಕಾದಂತಹ ದೇಶಗಳಿಂದ ದೇಶದೇಶಗಳಿಗೆ ರಫ್ತಾಗಿ ಹೂಡಲ್ಪಟ್ಟ ಬಂಡವಾಳದ ಪ್ರಮಾಣ ಹೀಗಿದೆ.

| | |
|---|---|
| ೧೯೭೦-೭೯ | ೨೨ ಬಿಲಿಯನ್ ಡಾಲರ್ |
| ೧೯೮೦-೮೫ | ೫೧ ಬಿಲಿಯನ್‌ಡಾಲರ್ |
| ೧೯೮೬-೯೦ | ೧೫೫ " |
| ೧೯೯೮ | ೬೪೪ " |
| ೧೯೯೯(ಪೂರ್ವಾರ್ಧ) | ೫೪೪ " |

(೧ ಬಿ. ಡಾಲರ್ = ೨೫೦೦ ಕೋಟಿ ರೂ.)

* ಅಮೆರಿಕದ ಮೂಲ ಬಂಡವಾಳದಿಂದ ವಿದೇಶಗಳಲ್ಲಿ ಸ್ಥಾಪಿತವಾದ ಮರಿ ಕಂಪೆನಿಗಳ ವ್ಯಾಪಾರ ವಹಿವಾಟು... ೧೧,೦೦೦ ಬಿಲಿಯನ್ ಡಾಲರ್‌ಗಳು. ಇದೇ ಕಾಲದಲ್ಲಿ ವಿಶ್ವದ ರಫ್ತು ವ್ಯವಹಾರ... ೬,೦೦೦ ಬಿಲಿಯನ್ ಡಾಲರ್‌ಗಳು.

(ಅಂದರೆ ಈ ಕಂಪೆನಿಗಳ ಉತ್ಪಾದನೆಯಲ್ಲಿ ಸುಮಾರು ೪,೦೦೦ ಬಿಲಿಯನ್ ಡಾಲರಷ್ಟು ವ್ಯವಹಾರ ಆತಿಥೇಯ ದೇಶದಲ್ಲೇ ನಡೆದಿದೆಯೆಂದು ಊಹಿಸಬಹುದೇ ? ಅಮೆರಿಕದ ಕಂಪೆನಿಗಳ ಈ ವ್ಯವಹಾರದ ಲಾಭ ಸುಮಾರು ೪೦೦ ಬಿಲಿಯನ್ ಡಾಲರುಗಳಿರಬಹುದೇ ? ಅಮೆರಿಕದ ಬಂಡವಾಳದ ರಫ್ತಿನಲ್ಲಿ ಸುಮಾರು ಶೇ. ೬೦ರಷ್ಟು ಯೂರೋಪಿನ ರಾಷ್ಟ್ರಗಳಿಗೆ ಹೋಗುತ್ತದೆ. ಆ ಲೆಕ್ಕದಲ್ಲಿ ಶೇ. ೪೦ರಷ್ಟು ಲಾಭ, ಅಂದರೆ ಸುಮಾರು ೧೬೦ ಬಿಲಿಯನ್ ಡಾಲರ್‌ಗಳು, ಮಿಕ್ಕ ಬೆಳೆಯುತ್ತಿರುವ ಮತ್ತು ಹಿಂದುಳಿದ ರಾಷ್ಟ್ರಗಳಿಂದ ಬಂದ ವಾರ್ಷಿಕ ಲಾಭವೆನ್ನಬಹುದು.

* ಏಷ್ಯದ ರಾಷ್ಟ್ರಗಳಿಗೆ ಬಂದ ಬಂಡವಾಳ

| | |
|---|---|
| ೧೯೯೭ | ೧೭೩ ಬಿಲಿಯನ್ ಡಾಲರ್‌ಗಳು |
| ೧೯೯೮ | ೧೬೬ ಬಿಲಿಯನ್ ಡಾಲರ್‌ಗಳು |

ಭಾರತಕ್ಕೆ ಬಂದಿರುವುದು ವಾರ್ಷಿಕ ಸರಾಸರಿ ೫ ಬಿಲಿಯನ್ ಮಾತ್ರ.

★ ಭಾರತ ಸರ್ಕಾರದ ವಾರ್ಷಿಕ ಬಜೆಟ್ ವಹಿವಾಟು ಸುಮಾರು ಮೂರು ಲಕ್ಷ ಕೋಟಿ ರೂಪಾಯಿಗಳು. ಅಂದರೆ, ಸುಮಾರು ೧೨ ಬಿಲಿಯನ್ ಡಾಲರಿನಷ್ಟು.

ಮುಂದುವರಿದ ದೇಶಗಳು ಅಭಿವೃದ್ಧಿಶೀಲ ದೇಶಗಳಲ್ಲಿ ತಾವು ಹೂಡುತ್ತಿರುವಷ್ಟು ಅಥವಾ ಅದಕ್ಕೂ ಮಿಕ್ಕ ಲಾಭಾಂಶವನ್ನು ಹೊರಗೆ ತೆಗೆದುಕೊಂಡು ಹೋಗುತ್ತಿವೆ. ಹಾಗೂ ವಿಶ್ವದ ಮುಂದುವರಿದ ಆರ್ಥಿಕ ವ್ಯವಸ್ಥೆಯು ವಿಶ್ವದ ಆರ್ಥಿಕ ವ್ಯವಸ್ಥೆಯ ಮೇಲೆ ತನ್ನ ಕಪಿಮುಷ್ಟಿಯನ್ನು ಸಾಧಿಸಿದೆ. ಇದರಿಂದ ಬಿಡಿಸಿಕೊಳ್ಳಲು ಅಗತ್ಯ ಕ್ರಮಗಳನ್ನು ಅನುಸರಿಸಬೇಕಾಗಿದೆ. ಮುಂದುವರಿದ ರಾಷ್ಟ್ರಗಳು ನಮ್ಮಂತಹ ದೇಶಗಳಿಂದ ಕೊಂಡೊಯ್ಯುವ ಲಾಭವು ಶೋಷಣೆಯೇ ಅಲ್ಲವೇ? ಇದನ್ನು ಸವಿಸ್ತಾರವಾಗಿ ಚರ್ಚಿಸಬೇಕು. ಈ ಚರ್ಚೆಗೆ ಕೆಲವು ಸಾಮಾನ್ಯ ವಿಷಯಗಳನ್ನು ಗಮನದಲ್ಲಿರಿಸಿಕೊಳ್ಳಬೇಕಾಗುತ್ತದೆ.

ಎಲ್ಲ ದೇಶಗಳೂ ಕೇವಲ ರಫ್ತು ಮಾತ್ರ ಮಾಡುತ್ತಿರಲು ಸಾಧ್ಯವಿಲ್ಲ; ಆಮದೂ ಮಾಡಿಕೊಳ್ಳಬೇಕು. ಪ್ರತಿಯೊಬ್ಬರಲ್ಲೂ ಮತ್ತೊಬ್ಬರಿಗೆ ಬೇಕಾಗುವಂತಹ ಸರಕು ಇರಬೇಕು. ಅವರಿಗೆ ಎಷ್ಟು ಆಮದು ಬೇಕೋ ಅಷ್ಟಾದರೂ ಇಂಥ ಸರಕುಗಳ ರಫ್ತು ಆಗಬೇಕು. ಹಾಗೆ ಆಗದಿದ್ದಾಗ ಬಹುಸಂಖ್ಯೆಯ ರಾಷ್ಟ್ರಗಳು ಸಾಲಗಾರರೇ ಆಗಿಬಿಡುತ್ತಾರೆ. ಹಾಗಾದಾಗ ವಿದೇಶಗಳ ಹಿಡಿತವು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಮೇಲೆ ದೊಡ್ಡ ಹೊರೆಯಾಗುತ್ತದೆ. ಉದಾಹರಣೆಗೆ, ಅಮೆರಿಕಾದವರು ಕೊಟ್ಟದ್ದನ್ನೆಲ್ಲಾ ಕೊಂಡುಕೊಳ್ಳೋಣ. ಪ್ರತಿಯಾಗಿ ನಮ್ಮಲ್ಲಿ ಏನಿದೆಯೋ ತೆಗೆದುಕೊಂಡು ಹೋಗಿ ಎನ್ನೋಣ. ಆಗ ಏನಾಗಬಹುದು ? ಅವರು ನಮ್ಮ ಕಲ್ಲು-ಮುಳ್ಳು ಕೊಂಡು ಹೋಗುತ್ತಾರೇನು ? ಅಂದರೆ, ನಮ್ಮ ಸಂಪತ್ತು ನಮಗೇ ದಕ್ಕುವುದಿಲ್ಲ.

ಮುಕ್ತವಾದ ವ್ಯಾಪಾರ ಎಂಬುದನ್ನು ಮೊದಲಿಗೆ ಆಧುನಿಕ ಅರ್ಥಶಾಸ್ತ್ರದ ಪಿತಾಮಹನೆನಿಸಿದ ಮಾರ್ಷಲ್ ಎಂಬುವವನು ಉಪಯೋಗಿಸಿದ್ದು. ಭೌತಶಾಸ್ತ್ರದ ಚಲನೆಯ ತತ್ವದಲ್ಲಿ, ಯಾವ ಅಡಚಣೆಯೂ ಇಲ್ಲದೆ ವಸ್ತು ಚಲಿಸುತ್ತಿದ್ದರೆ ಅದು ಚಲಿಸುತ್ತಲೇ ಇರುತ್ತದೆ ಎಂದ ಹಾಗೆ ಇದರರ್ಥ. ಅಂದರೆ ಮುಕ್ತ ವ್ಯಾಪಾರದಿಂದ ಎಲ್ಲರಿಗೂ ಲಾಭವೇ ಉಂಟಾಗುತ್ತದೆಂಬ ಸೂಚನೆ ಇದರಲ್ಲಿದೆ. ಆದರೆ ಇದಕ್ಕೆ ಪೂರ್ವಭಾವಿಯಾಗಿ ಮುಕ್ತವಾದ ಪೈಪೋಟಿ ಇರಬೇಕು; ಕೇಳಿದ ಸರಕುಗಳನ್ನು ಕೇಳಿದ ಜಾಗದಲ್ಲಿ, ಕೇಳಿದಾಗ ಕೇಳಿದಷ್ಟು ಸಿಗುತ್ತದೆ ಎಂಬ ಷರತ್ತು ಇರಬೇಕಾಗುತ್ತದೆ. ಅದು ನಿಜಕ್ಕೂ ಸಾಧ್ಯವಾಗಿದೆಯೇ? ಜಪಾನ್ ಅಥವಾ ಅಮೆರಿಕಾ ಕೇಳಿದಷ್ಟು ಟೀ, ಕಾಫಿ, ಅಥವಾ ರೇಷ್ಮೆಯನ್ನು ನಾವು ಒದಗಿಸಬಲ್ಲೆವೆ? ಪ್ರಯೋಗಶಾಲೆಯ ಒಳಗೆ ಸಿದ್ಧಾಂತಗಳನ್ನು ಅಭ್ಯಸಿಸುವುದು ಬೇರೆ, ವ್ಯವಹಾರದಲ್ಲಿ ಅದನ್ನು ಆಗುಮಾಡುವುದು ಬೇರೆ. ನೈಜ ಪ್ರಪಂಚದಲ್ಲಿ ಯಾವೊಂದೂ ಮುಕ್ತವಲ್ಲವೆಂಬುದು ಶತಸ್ಸಿದ್ಧ.

ಉದಾರೀಕರಣದ ಭರಾಟೆಯಲ್ಲಿ ನಮ್ಮ ರಾಷ್ಟ್ರದ ಪಕ್ಷಿ ನವಿಲು, ಎಲ್ಲೋ ಮೋಡ ಗುಡುಗಿತೆಂದು ರೆಕ್ಕೆ ಬಿಚ್ಚಿ ಕುಣಿದದ್ದೂ ಕುಣಿದದ್ದೇ ! ಆದರೆ ಇಲ್ಲಿಯವರೆಗೆ ದೊರೆತ ವಿದೇಶಿ ಬಂಡವಾಳ ಕೇವಲ ೫-೬ ಬಿಲಿಯನ್ ಡಾಲರ್. ಆದರೆ ಎಲ್ಲರಿಗೂ ಕಂಡದ್ದು ಬೆತ್ತಲೇ ಪೃಷ್ಠ! ಇದು ಪಂಚತಂತ್ರದ ಒಂದು ಶ್ಲೋಕ. ನಮ್ಮ ಈ ಪರಿಸ್ಥಿತಿಗೆ ಒಂದು ಮುಖ್ಯ ಕಾರಣವಂತೂ ಭಾರತೀಯ ಖಾಸಗೀ ಉದ್ದಿಮೆದಾರರ ಸಾಮರ್ಥ್ಯದ ಕೊರತೆ ಎಂಬುದರಲ್ಲಿ ಸಂದೇಹವಿಲ್ಲ, ಏಕೆಂದರೆ, ಉದಾರೀಕರಣ ಬಂದಮೇಲೆ ಸುಮಾರು ನಲವತ್ತು ಸಾರ್ವಜನಿಕ ವಹಿವಾಟುಗಳು ಲಾಭಮಾಡುತ್ತಿವೆ. ದೇಶದ ಶೇ. ೫-೬ ಉತ್ಪಾದನೆಯ ವಾರ್ಷಿಕ ದರಕ್ಕೆ ಇವರೇ ಕಾರಣರು. ಮಿಕ್ಕವರು ಸ್ವಲ್ಪಮಟ್ಟಿಗೆ ಕಂಪ್ಯೂಟರ್ ಜನ ಮತ್ತು ಕೃಷಿ ವಲಯದವರು. ಖಾಸಗೀ ಉದ್ಯಮದವರು ಖಂಡಿತ ಅಲ್ಲ. ಅವರಲ್ಲಿ ಉದ್ಯೋಗೀಕರಣ ಕೂಡ ನಿಷೇಧಾತ್ಮಕವಾದುದೆಂದು ವರದಿಯಾಗಿದೆ. ಇಂಥ ಖಾಸಗಿಯವರನ್ನೂ ವಿದೇಶಿ ಬಂಡವಳಿಗರು ಬಡಿದು ಮುಕ್ಕುವ ಸಾಧ್ಯತೆಯಿದೆ. ಅದಕ್ಕೆಂದೇ ಈ ಜನ ಪುನಃ ಸರ್ಕಾರದ ಕೃಪೆ ಬೇಡುತ್ತಿದ್ದಾರೆ ! ಇಲ್ಲಿಯವರೆಗೆ ಇವರು ಮರ್ಯಾದೆ ಕೊಡದ ಕಾರ್ಮಿಕ ಸಂಘಗಳನ್ನೂ ಸ್ವಯಂಸೇವಕ ಸರ್ಕಾರೇತರ ಸಂಘಗಳವರನ್ನೂ ಬೇಡುತ್ತಿದ್ದಾರೆ: ನೀವು ಸಿಯಾಟಲ್‌ನ ವಿಶ್ವವ್ಯಾಪಾರ ಸಂಸ್ಥೆಯ ಸಮಾರಂಭಕ್ಕೆ ಹೋಗಿ ಭಾರತದ ಪರವಾಗಿ ಪ್ರತಿಭಟಿಸಿ, ಎಂದು. **ವಿಷಯ:** ಕಾರ್ಮಿಕ ಸಂಬಂಧ ಕಟ್ಟಳೆಗಳನ್ನು ಅಂತರರಾಷ್ಟ್ರೀಯ ಮಟ್ಟದಲ್ಲಿ ಹೇರುವುದು ಸಲ್ಲ! ಅಂತರರಾಷ್ಟ್ರೀಯ ಮಟ್ಟದಲ್ಲಿ ಪರಿಸರ ಕಾನೂನು ಹೇರುವುದು ಸಲ್ಲ ಎಂದು ! ಭಾರತದ ಉದ್ಯಮಿಗಳು ಸಮಾಜವಾದವನ್ನು ಎತ್ತಿಹಿಡಿಯುವ ಕಾಲ ಬರುವುದೋ ಎಂದು ನೆನಸಿದರೇ ನಡುಕ ಉಂಟಾಗುತ್ತದೆ.

-ಕೌಟಿಲ್ಯ

ಸೂಫಿಸಂತರ ಕತೆಗಳು - ೨

# ಮೂರು ಮೀನುಗಳು

ಕನ್ನಡಕ್ಕೆ : ಬಿ. ಗಂಗಾಧರಮೂರ್ತಿ

ಒಂದು ಹಳ್ಳಿ. ಅಲ್ಲೊಂದು ಸುಮಾರಾದ ಕೆರೆ ಇತ್ತು. ಬಹಳಕಾಲದ ಹಿಂದೆ ಆ ಕೆರೆಯಲ್ಲಿ ಮೂರು ಮೀನುಗಳು ವಾಸಿಸುತ್ತಿದ್ದವು. ಒಂದು ಜಾಣ ಮೀನು, ಇನ್ನೊಂದು ಅರೆ-ಜಾಣ ಮೀನು. ಮತ್ತೊಂದು ದಡ್ಡ ಮೀನು. ಎಲ್ಲಾ ಕೆರೆಕುಂಟೆಗಳಲ್ಲೂ ಇರುವ ಮೀನುಗಳ ಹಾಗೆಯೇ ಇವುಗಳೂ ಅಲ್ಲಿ ಜೀವನ ಸಾಗಿಸುತ್ತಿದ್ದವು. ಒಂದು ದಿನ ಒಬ್ಬ ಮನುಷ್ಯನು ಬಲೆಯನ್ನು ಹೆಗಲಿಗೆ ತೂಗಿಸಿಕೊಂಡು ಕೆರೆಯನ್ನು ಸಮೀಪಿಸತೊಡಗಿದ. ನೀರೊಳಗೆ ಹಾಯಾಗಿ ಹರಿದಾಡುತ್ತಿದ್ದ ಜಾಣ ಮೀನು ಸೂಕ್ಷ್ಮವಾಗಿ ಇದನ್ನು ಗಮನಿಸಿತು. ಬಲೆ ಬೀಸಿ ಮೀನುಗಳನ್ನು ಬಾಚಿ ಕೊಂಡೊಯ್ಯುವ ಬೆಸ್ತರ ಕತೆಗಳನ್ನು ಅದು ಕೇಳಿ ತಿಳಿದಿತ್ತು. ಅವನನ್ನು ಕಂಡಕೂಡಲೆ ಅವೆಲ್ಲ ಪಕ್ಕನೆ ನೆನಪಿನಲ್ಲಿ ಹೊಳೆಯತೊಡಗಿದವು. ಆಪತ್ತನ್ನು ಸೃಷ್ಟಿಸುವ ಬೆಸ್ತರ ಅಲ್ಪಸ್ವಲ್ಪ ಪರಿಚಯವೂ ಆ ಜಾಣ ಮೀನಿಗಿತ್ತು. ಅದರ ಬುದ್ಧಿಯು ಅನಾಯಾಸವಾಗಿ ಚುರುಕುಗೊಂಡು ಅದು ಕೂಡಲೆ ಕಾರ್ಯೋನ್ಮುಖವಾಯ್ತು.

''ತುಂಬಿರುವ ಈ ಕೆರೆಯಲ್ಲಿ ಎಲ್ಲಿ ನೋಡಿದರೂ ನೀರೇ ನೀರು. ಅಡಗಿಕೊಳ್ಳಲು ಕಲ್ಲುಗಳೂ ಇಲ್ಲ. ಬಂಡೆಗಳೂ ಇಲ್ಲ. ಪೊಟರೆಗಳೂ ಇಲ್ಲ. ನನಗೆ ಇನ್ನು ಉಳಿಗಾಲವಿಲ್ಲ. ನಾನು ಸತ್ತಹಾಗೆ ನಟಿಸಬೇಕು. ಅದೊಂದೇ ಉಳಿದಿರುವ ದಾರಿ'' ಎಂದು ಕೊಂಡಿತು. ಬೆಸ್ತನು ಬಲೆಯನ್ನು ಪದರ ಪದರವಾಗಿ ಬಿಡಿಸಿಕೊಳ್ಳ ತೊಡಗಿದ. ಇನ್ನೇನು ಬೀಸುವ ಸಿದ್ಧತೆ ಮಾಡಿಕೊಳ್ಳುತ್ತಿದ್ದಾನೆ. ಆ ಜಾಣ ಮೀನು ಕಾಲಹರಣ ಮಾಡದೆ ತನ್ನ ಶಕ್ತಿಯನ್ನೆಲ್ಲಾ ಒಟ್ಟುಗೂಡಿಸಿ ನೀರಿನಿಂದ ಚಿಮ್ಮಿ ಮೇಲಕ್ಕೆ ಜಿಗಿದು ದಡದ ಮೇಲಿದ್ದ ಅವನ ಕಾಲಿನ ಬಳಿ ತೊಪ್ಪೆಂದು ಬಿದ್ದಿತು. ತನ್ನ ಕಾಲಿನ ಬಳಿಗೇ ಬಂದು ಬಿದ್ದ ಮೀನನ್ನು ಕಂಡು ಅವನಿಗೆ ಆಶ್ಚರ್ಯವಾಗತೊಡಗಿತು. ಜಾಣ ಮೀನು ಉಸಿರು ಬಿಗಿಹಿಡಿದು ಸತ್ತಂತೆ ನಟಿಸುತ್ತ ಬಿದ್ದಿತ್ತು. ಬೆಸ್ತ ನೋಡಿದ. ಅದು ಪುಟಿಯದೆ ಹೊರಳಾಡದೆ ಬಿದ್ದಿತ್ತು. ಮೀನು ನಿಜಕ್ಕೂ ಸತ್ತುಹೋಗಿದೆ ಎಂದು ಭಾವಿಸಿದ ಅವನು ಅದನ್ನು ಬೆರಳಲ್ಲಿ ಎತ್ತಿ ನೀರೊಳಕ್ಕೆ ಬಿಸಾಡಿ ತನ್ನ ಕೆಲಸದಲ್ಲಿ ಮಗ್ನನಾದ. ನೀರಿನ ಆಸರೆಗೆ ಬಿದ್ದ ಜಾಣ ಮೀನು ಗರಿಮೂಡಿದಂತೆ ಚೇತರಿಸಿಕೊಂಡು ಸದುವಿನೊಳಗಿಂದ ಕೆರೆಯೊಳಕ್ಕೆ ಸೇರಿ ಜೀವ ಉಳಿಸಿಕೊಂಡಿತು.

ಸದುವಿನೊಳಗೆ ಹೊರಳುತ್ತಾ ನೀರಿಗೆ ಮರಳಿ ತಳ ಸೇರಲು ಪ್ರಯಾಸಪಡುತ್ತಿದ್ದ ಜಾಣ ಮೀನನ್ನು ಅಷ್ಟೇನೂ ಬುದ್ಧಿವಂತನಲ್ಲದ ಎರಡನೆ ಮೀನು ಗಮನಿಸುತ್ತಿತ್ತು. ಅದು ಏಕೆ ಹಾಗೆ ಮಾಡಿತು ಎಂಬುದು ಇದಕ್ಕೆ ಹೊಳೆಯಲಿಲ್ಲ. ಈ ಅರೆ-ಜಾಣ ಮೀನು ಜಾಣ ಮೀನಿನ ಬಳಿಗೆ ಹೋಗಿ ನಡೆದದ್ದೇನು ಎಂದು ವಿಚಾರಿಸತೊಡಗಿತು. ಚುರುಕು ಬುದ್ಧಿಯ ಆ ಜಾಣ ಮೀನು ಬೆಸ್ತನಿಂದ ತನಗೊದಗಿದ ಆಪತ್ತನ್ನು ತಿಳಿಸಿ, ''ನಿನಗೂ ಆ ಆಪತ್ತು ಇದೆ. ಅದರಿಂದ ಪಾರಾಗುವುದು ಕಷ್ಟವೇನಲ್ಲ. ನಾನು ನಟಿಸಿದಂತೆ ನೀನೂ ನಟಿಸು. ಸತ್ತ ಮೀನೆಂದು ತಿಳಿದು ನನ್ನನ್ನು ಅವನು ನೀರಿಗೆಸೆದುಬಿಟ್ಟ. ನಿನ್ನನ್ನೂ ಹಾಗೇ ಎಸೆದು ಬಿಡು ತ್ತಾನೆ,'' ಎಂದಿತು.

ಹಿಂದು-ಮುಂದು ಯೋಚಿಸದ ಅರೆ -ಜಾಣ ಮೀನು



ತಾನೂ ನೀರಿನಿಂದ ಜಿಗಿದು ಬೆಸ್ತನ ಕಾಲ ಬಳಿ ಬಿದ್ದಿತು. 'ಮೀನುಗಳು ಹೀಗೆ ನೀರಿಂದ ಜಿಗಿದು ಕಾಲಿನ ಬಳಿ ಬೀಳುತ್ತಿರುವುದು ಸೋಜಿಗದ ಸಂಗತಿಯಾಗಿದೆಯಲ್ಲಾ' ಎಂದುಕೊಳ್ಳತೊಡಗಿದ ಅವನು. ಹಾಗೆ ಯೋಚಿಸು ತ್ತಿರುವಂತೆಯೇ ಆ ಮೀನು ಇನ್ನೂ ಉಸಿರಾಡುತ್ತಿದೆ ಎಂಬುದು ಅವನ ಗಮನಕ್ಕೆ ಬಂತು. ಆ ಅರೆ-ಜಾಣ ಮೀನು ಸತ್ತಂತೆ ನಟಿಸುವುದೆಂದರೆ ಉಸಿರನ್ನು ಬಿಗಿಹಿಡಿಯಬೇಕು ಎಂಬುದನ್ನು ಮರೆತುಬಿಟ್ಟಿತ್ತು. ಮೀನಿಗೆ ಇನ್ನೂ ಜೀವವಿದೆ ಎಂಬುದನ್ನು ಅರಿತ ಬೆಸ್ತನು ಅದನ್ನು ಹಿಡಿದು ಸೊಂಟಕ್ಕೆ ಸುತ್ತಿ ಕಟ್ಟಿದ್ದ ಚೀಲದೊಳಕ್ಕೆ ತುರುಕಿದ.

ನಂತರ ಅವನು ಕೆರೆಗಿಳಿದು ನೀರಲ್ಲಿ ದೃಷ್ಟಿನೆಟ್ಟು ಚಲಿಸುತ್ತ ಮೀನುಗಳಿಗಾಗಿ ಹುಡುಕಾಟ ಮುಂದುವರೆಸಿದ. ಆದರೆ ಈ ಕೆರೆಯ ಮೀನುಗಳು ಹೀಗೆ ನೀರಿನಿಂದ ಜಿಗಿದು ಚಿಮ್ಮಿ ತನ್ನ ಕಾಲಿನ ಬಳಿಗೇ ಬಂದು ಬೀಳುವ ವಿಚಿತ್ರ ಸಂಗತಿಯು ಅವನನ್ನು ವಿಹ್ವಲಗೊಳಿಸಿತ್ತು. ಆ ಗಲಿಬಿಲಿಯಲ್ಲಿ ಅವನು ಚೀಲದ ಮುಚ್ಚಿಕೆ ಹಾಕುವುದನ್ನು ಮರೆತುಬಿಟ್ಟಿದ್ದ. ಚೀಲದೊಳಗೆ ಏದುಸಿರು ಬಿಡುತ್ತ ಪಟಪಟ ಒದ್ದಾಡುತ್ತಿದ್ದ ಅರೆ-ಜಾಣ ಮೀನಿಗೆ ಬೆಸ್ತನ ಮರೆವು ವರವಾಗಿ ಪರಿಣಮಿಸಿತು. ಚೀಲದೊಳಗೆ ಚಿಮ್ಮುತ್ತ ಪುಟಿಯುತ್ತ ಚೀಲದ ಬಾಯಿಂದ ಜಾರಿಕೊಂಡು ಅದು ಮರಳಿ ನೀರಿಗೆ ಜಿಗಿದುಬಿಟ್ಟಿತ್ತು. ನೀರಿಗೆ ಬಿದ್ದದ್ದೇ ತಡ ವೇಗವಾಗಿ ಈಜುತ್ತಾ ಜಾಣ ಮೀನಿನಂತೆ ತಾನೂ ನೀರಿನ ತಳ ಸೇರಿ ನಿಟ್ಟುಸಿರು ಬಿಡುತ್ತಾ ಅದೂ ಜೀವ ಉಳಿಸಿಕೊಂಡಿತು.

ತಾನು ನಟಿಸಿ ಜೀವ ಉಳಿಸಿಕೊಂಡ ಕತೆಯನ್ನು ಮೊದಲನೆಯ ಮೀನು ಮೂರನೆಯ ಮೀನಿಗೂ ಹೇಳಿತು. ಎರಡನೆಯ ಮೀನು ಕೂಡ ತಾನು ಬದುಕಿ ಬಂದ ಸಾಹಸದ ಕತೆಯನ್ನು ಹೇಳಿ ಎಚ್ಚರದಿಂದಿರಲು ಹೇಳಿತು. ಎರಡು ಮೀನುಗಳು ತಿಳಿಯಹೇಳಿದರೂ ಆ ಮಂದಬುದ್ಧಿಯ ಮೀನಿಗೆ ಏನೊಂದೂ ಅರ್ಥವಾಗಲಿಲ್ಲ. ಅವು ಮತ್ತೊಮ್ಮೆ ತಮ್ಮ ಅನುಭವವನ್ನು ಎಳೆ ಎಳೆಯಾಗಿ ಬಿಡಿಸಿ ಹೇಳುವ ಪ್ರಯತ್ನ ಮಾಡಿದವು. ಸತ್ತಂತೆ ನಟಿಸುವುದೆಂದರೆ ಉಸಿರಾಟ ನಿಲ್ಲಿಸಿ ಬಿದ್ದುಕೊಂಡಿರಬೇಕು ಎಂಬ ಎಚ್ಚರಿಕೆಯ ಮಾತನ್ನು ಮತ್ತೆ ಮತ್ತೆ ಒತ್ತಿ ಹೇಳಿದವು. ''ಬಿಡಿ, ಬಿಡಿ. ನನಗೆ ಈಗೆಲ್ಲವೂ ತಿಳಿದಿದೆ. ಧನ್ಯವಾದಗಳು'' ಎಂದು ಹೇಳುತ್ತ ಹೇಳುತ್ತಲೇ ಆ ದಡ್ಡ ಮೀನು ನೀರಿಂದ ಜಿಗಿದು ದಡಸೇರಿದ್ದ ಬೆಸ್ತನ ಬಳಿ ಬಿದ್ದಿತು. ಕೈಗೆ ಸಿಕ್ಕಿದ ಎರಡು ಮೀನುಗಳನ್ನೂ ಕಳೆದುಕೊಂಡ ಅವನು ಖಿನ್ನನಾಗಿದ್ದ. ಈ ಮೀನು ಬಂದು ಬಿದ್ದ ಕೂಡಲೆ ಅದಕ್ಕೆ ಜೀವವಿದೆಯೋ ಇಲ್ಲವೋ ಎಂದು ಯೋಚಿಸುವ ಗೋಜಿಗೆ ಹೋಗದೆ ಅದನ್ನು ಹಿಡಿದು ಚೀಲದೊಳಕ್ಕೆ ತುರುಕಿದ. ಚೀಲದ ಮುಚ್ಚಿಕೆ ಹಾಕುವುದನ್ನು ಮಾತ್ರ ಈ ಬಾರಿ ಮರೆಯಲಿಲ್ಲ.

ತನಗೆ ಕೈಕೊಟ್ಟು ನೀರು ಸೇರಿದ ಎರಡು ಮೀನುಗಳಿಗೆ ಛಲ ಹಿಡಿದು ಅವನು ಮತ್ತೆ ಮತ್ತೆ ಬಲೆ ಬೀಸಿದ. ಆದರೆ ಆ ಎರಡು ಮೀನುಗಳು ತಳಸೇರಿಕೊಂಡು ಪ್ರಾಣಾಪಾಯ ದಿಂದ ತಪ್ಪಿಸಿಕೊಂಡಿದ್ದವು.

ಕೊನೆಗೂ ಛಲವು ಕೈಗೂಡದೆ ಬೇಸತ್ತ ಬೆಸ್ತರವನು ಮನೆಗೆ ವಾಪಾಸಾಗಲು ತೀರ್ಮಾನಿಸಿದ. ಹಾದಿಯಲ್ಲಿ ಚೀಲದೊಳಗಿನ ಮೀನಿನ ನೆನಪಾಯಿತು. ಮುಚ್ಚಿಕೆ ತೆಗೆದು ಕಣ್ಣಾಡಿಸಿದ. ಮಂದ ಬುದ್ಧಿಯ ದಡ್ಡ ಮೀನಿನ ಉಸಿರಾಟ ನಿಂತುಹೋಗಿತ್ತು. ಮೀನನ್ನು ಸವಿಯಲು ತನಗಾಗಿ ಮನೆಯಲ್ಲಿ ಕಾಯುತ್ತಿರುವ ಬೆಕ್ಕಿನ ನೆನಪು ಸುಳಿದಾಡಿತು. ತನ್ನ ಪ್ರೀತಿಯ ಬೆಕ್ಕಿಗೆ ಈ ದಿನ ನಿರಾಶೆಯಾಗದು ಎಂದುಕೊಂಡು ಹೆಜ್ಜೆ ಹಾಕತೊಡಗಿದ. - ಹುಸೇನ್

ಗಂಗಾಧರ ಮೂರ್ತಿ ಬಿ.
ನಂ. [illegible] 'ಪಲ್ಲವಿ', ಕಾರೇಕಲ್ಲಹಳ್ಳಿ, [illegible]

೩ ಮೇ ೧೯೭೫ ಹೌರಾ (ಪಶ್ಚಿಮ ಬಂಗಾಳ) ಜೇಲು. ಅಲ್ಲಿ ೨೨ ವರ್ಷ ಪ್ರಾಯದ ವಿದ್ಯಾರ್ಥಿ ಹಾಗೂ 'ನಕ್ಸಲೀಯ' ಹೋರಾಟಗಾರ ಪ್ರಬೀರ್ ರಾಯ್ ಚೌಧರಿ. ಸಂಗಾತಿಗಳಿಗೆ ಅವನು ಪ್ರಿಯ 'ಪಖಿ'. ಜೇಲು ಪೋಲೀಸರಿಂದ ಅವನ ಕಗ್ಗೊಲೆ.

ಪಖಿ ಹೋರಾಟದಲ್ಲಿ ತೊಡಗಿದ್ದು ಏತಕ್ಕಾಗಿ? 'ಸ್ವಾತಂತ್ರ್ಯ ಹೋರಾಟಗಾರರ' ಪಿಂಚಣಿ ಪಡೆಯಲೆಂದೇ?

ಕಲ್ಕತ್ತದ ಪ್ರೆಸಿಡೆನ್ಸಿ ಜೇಲಿನಲ್ಲಿ ಬಂಧಿಸಲ್ಪಟ್ಟಿದ್ದ ಅವನ ಸಂಗಾತಿಗಳು ಕಗ್ಗೊಲೆಯ ಸುದ್ದಿಯನ್ನು ತಿಳಿದಾಗ ಬಂದೀಖಾನೆಯ ಗೋಡೆಯ ಮೇಲೆ - ಅವರಿಗೆ ಕಾಗದ, ಪೆನ್ನು ಲಭ್ಯವಿರಲಿಲ್ಲವಾದ್ದರಿಂದ - ಪಖಿಗೆ ಒಂದು ಚರಮ ಗೀತವನ್ನು ಬರೆದರು :

## 'ಪಖಿ'ಯ ಪರ

ತೆಪ್ಪನಿರಿ!
ಮಲಗಿರುವನಿಲ್ಲಿ ನನ್ನ ತಮ್ಮ
ನಿಲ್ಲದಿರಿ ಅವನ ಬಳಿ
ಮಂಕು ಮೋರೆ ಮಾಡಿ ನೊಂದ ಮನವ ತಾಳಿ:
ಅವನು ಅವನೇ - ನಲಿದಾಡುವವ.
ಮುಚ್ಚದಿರಿ ಪುಷ್ಪ ರಾಶಿಯಲ್ಲಿ ಅವನ ಶವ.
ಹೂವಿಗೆ ಹೂಗಳ ಕೂಡಿದರೇನು ಫಲ?

ನಿಮಗೆ ಆದಾಗುವುದಾದರೆ
ಅವನ ಹೂಳಿಬಿಡಿ - ನಿಮ್ಮಂತಃಕರಣದಲ್ಲಿ.
ಕಾಣುವಿರಿ ನೀವಾಗ
ಹೃದ್ಯಮಯದ ಆ ಹಕ್ಕಿ ಚಿಲಿಪಿಲಿಗುಟ್ಟಿದಾಗ
ಎಚ್ಚರಾಗುವ ನಿಮ್ಮ ಸುಪ್ತಾತ್ಮವ.
ನಿಮಗೆ ಆದಾಗುವುದಾದರೆ
ಹರಿಯಬಿಡಿ - ಒಂದಿಷ್ಟು ಕಂಬನಿಯ
ಹಾಗೂ - ನಿಮ್ಮ ಧಮನಿ ಧಮನಿಯ.

## ನಿನಗ ಅದ ತಿಳೀತೊ ಹ್ಯಾಂಗ

ನನಗ ಅನಿಸಿತ್ತ ಯಾವತ್ತ
ಹಿಂಗ ನನಗನಿಸಿತ್ತ ಯಾವತ್ತ : ಸಾಕಪಾ
ಸೀದಾ ನಾಕ ಮಾತ - ಹೇಳೂದೆಲ್ಲಾ ಹೇಳಾಕ.
ಜಗತ್ತ ಹೀಂಗೆಲ್ಲ ಐತೆಂತ ನಾ ಹೇಳಿದರ ತೀರೀತ
ಎಲ್ಲಾರ ಎದೀಯೂ ಒಡದೊಡದ ಹೋದೀತ
ಮತ್ತಸೆಡ್ಡ ಹೊಡದ
ನಿನಗ ನೀ ನಿಲುವಲ್ಯೊ
ಖರೇ ನಿನ ಬೆನ್ನ ಮಂಣಾದೀತ
ನಿನಗ ಅದ ತಿಳೀತೂ ಹ್ಯಾಂಗ

**ಬರ್ಟೋಲ್ಟ್ ಬ್ರೆಖ್ಟ್** (ಕೊನೆಯ ಕವನಗಳು ೧೯೫೩-೫೬)

**ಕನ್ನಡಕ್ಕೆ** : ಎಸ್. ಗುರುದತ್
ನಂ.೬, 'ಶ್ರೀನಿವಾಸ', ಜವರಯ್ಯ ಗಾರ್ಡನ್ ಬಡಾವಣೆ, ಗಂಗಮ್ಮ ದೇವಸ್ಥಾನದ ಹತ್ತಿರ, ೩ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-೨೮

## ನಮ್ಮ ದೇಶ ಭಾರತ

ನಮ್ಮ ದೇಶ
ಭಾರತ ।
ಹಾಡಿರೆಲ್ಲ
ಹಿಗ್ಗುತ ॥

ಚೆನ್ನ ದೇಶ
ಭಾರತ ।
ಹೊನ್ನ ದೇಶ
ಭಾರತ ॥
ಅನ್ನ ದೇಶ
ಭಾರತ ।
ವಿಶ್ವ ಕೋಶ
ಭಾರತ ॥

ತ್ಯಾಗ ಭೂಮಿ
ಭಾರತ ।
ವಿಶ್ವಪ್ರೇಮಿ
ಭಾರತ ॥

**ನಾರಾಯಣ ರೈ ಕುಕ್ಕುವಳ್ಳಿ**
'ನಿತಿನಾ' ನುಳಿಯಾಲು, ನಿಡ್ಪಳ್ಳಿ,
ಪುತ್ತೂರು - 574 259

ಯುಗಯುಗಗಳ ಹಣೆ ಬರಹವ ಒರೆಸಿ
ಮನ್ವಂತರಗಳ ಭಾಗ್ಯವ ತೆರೆಸಿ
ರೆಕ್ಕೆಯ ಬೀಸುತ ಚೇತನಗೊಳಿಸಿ
ಹೊಸಗಾಲದ ಹಸುಮಕ್ಕಳ ಹರಸಿ
ಹಕ್ಕಿ ಹಾರುತಿದೆ ನೋಡಿದಿರಾ?
- ದ. ರಾ. ಬೇಂದ್ರೆ



## ಹಕ್ಕಿ ಮತ್ತು ಮಗು

ಮಗು : ಹಕ್ಕಿ ಹಕ್ಕಿ
ಮಳೆ ಬಂತು

ಹಕ್ಕಿ : ಬರಲಿ ಬರಲಿ
ಮೀಯಬೇಕು

ಮಗು : ಮಿಂದರೆ ಥಂಡಿ
ಬರದೆ ನಿನಗೆ ?

ಹಕ್ಕಿ : ಗದ್ದೆ ನೆಟ್ಟಿ
ಹೆಂಗಳ ನೋಡು

ಮಗು : ಅವರಿಗೆ ಗುರುಬು
ಸಾಕೇ ಸಾಕು

ಹಕ್ಕಿ : ನನಗೆ ರೆಕ್ಕೆ
ಪುಕ್ಕ ಉಂಟು

ಮಗು : ಅವರ ಹಾಡು
ಚಿಚ್ಚಗೆ ನೋಡ

ಹಕ್ಕಿ : ನನ್ನ ಹಾಡ
ನೀನೂ ಕೇಳು

ಆರ್. ವಿ. ಭಂಡಾರಿ
ಆರೆಅಂಗಡಿ-೫೮೧೪೩೦. ಉತ್ತರ ಕನ್ನಡ

(೩೨ನೇ ಪುಟದಿಂದ)

ಇದನ್ನು ಪ್ರತಿಪಾದಿಸುತ್ತಾ ಕ್ರಿ.ಪೂ. ೧೮೦೦ರ ಇಟಲಿ ಮತ್ತು ೧೯ನೇ ಶತಮಾನದ ಜರ್ಮನಿ ಹಾಗೂ ಯೂರೋಪಿನ ಮಧ್ಯದ ಸಾಮ್ಯತೆಗಳನ್ನು ಸ್ಥಾಪಿಸುತ್ತಾರೆ. ಇವರ ಈ ಕೃತಿಯಲ್ಲಿ ರೋಮನ್ ಸಂಸ್ಕೃತಿಯ ಹುರಿಯಾಳುಗಳಾದ ಸಿಸಿರೋ, ಹ್ಯಾನಿಬಾಲ್, ಸೀಸರ್ ಮುಂತಾದವರು ಮೈದುಂಬಿ ಚಿತ್ರಣಗೊಂಡಿದ್ದಾರೆ. ಅವರ ಚಿತ್ರಣವನ್ನು ಓದುತ್ತಿದ್ದರೆ ನಮ್ಮ ಆಪ್ತರ ಚಿತ್ರಣವನ್ನು ಓದಿದ ಅನುಭವವಾಗುತ್ತದೆ ಎಂದು ವಿಮರ್ಶಕರು ಹೇಳಿದ್ದಾರೆ. ಇಂದಿಗೂ ಆ ಕೃತಿಯ ಅನೇಕ ಭಾಗಗಳು ಯೂರೋಪಿನ ಅನೇಕ ದೇಶಗಳಲ್ಲಿ ಜನರ ಬಾಯಲ್ಲಿ ನಲಿದಾಡುತವೆ ಎಂಬುದನು ಕೇಳಿದಾಗ ಆ ಕೃತಿಯ ಜನಪ್ರಿಯತೆ ಎಷ್ಟು ಎಂಬುದನ್ನು ಊಹಿಸಿಕೊಳ್ಳಬಹುದು.

ಈ ಕೃತಿ ಐತಿಹಾಸಿಕ ಘಟನೆಗಳಷ್ಟನ್ನೇ ದಾಖಲು ಮಾಡಿಲ್ಲ, ರೋಮನ್ನರ ಧಾರ್ಮಿಕ, ಸಾಂಸ್ಕೃತಿಕ ವಿವರಗಳನ್ನೂ ಜನರ ಜೀವನ ರೀತಿಯನ್ನೂ ಸಾಂದ್ರವಾಗಿ ಕಟ್ಟಿಕೊಡುತ್ತದೆ. ಇದೆಲ್ಲವನ್ನೂ ಮಾಮ್‌ಸೆನ್ ಅತ್ಯಂತ ಕಲಾತ್ಮಕವಾಗಿ ಅಭಿವ್ಯಕ್ತಿಸಿದ್ದಾರೆ ಎಂದೇ ಈ ಕೃತಿಯನ್ನು ಸೃಜನಶೀಲ ಎಂದು ಪರಿಗಣಿಸಲಾಗಿದೆ. ಇತಿಹಾಸದಂಥ ವಸ್ತುವನ್ನು ಆರಿಸಿಕೊಂಡು ಅದಕ್ಕೆ ಸೃಜನಶೀಲತೆಯ ಮೆರಗುಕೊಟ್ಟು ಅಭಿವ್ಯಕ್ತಿಸಿದ್ದು ಮಾಮ್‌ಸೆನ್‌ರ ಹಿರಿಮೆ. ಅದಕ್ಕೆ ನೊಬೆಲ್ ಪ್ರಶಸ್ತಿ ದೊರೆತದ್ದು ಆ ಕೃತಿಯ ಗರಿಮೆ.

ಸ್ವೀಡಿಷ್ ಅಕಾಡೆಮಿ ಪ್ರಶಸ್ತಿ ಪ್ರದಾನ ಮಾಡುವಾಗ ಮಾಮ್‌ಸೆನ್ ಬಗ್ಗೆ ಹೀಗೆ ಅಭಿಪ್ರಾಯಪಟ್ಟಿದೆ: ''ವಿಶೇಷವಾಗಿ ಅವರ ಮೇರುಕೃತಿ 'ಎ ಹಿಸ್ಟರಿ ಆಫ್ ರೋಮ್'ಗೆ ಸಂಬಂಧಿಸಿದಂತೆ ಹೇಳುವುದಾದರೆ, ಐತಿಹಾಸಿಕ ಬರವಣಿಗೆಯ ಕಲೆಯಲ್ಲಿ ಬದುಕುಳಿದಿರುವ ಮಹಾನ್ ಲೇಖಕ.''

**ಲಿಂಗದೇವರು ಹಳೆಮನೆ**
೨೫೪/ಎ, ೧ನೇ ಫೇಸ್, ಹುಡ್ಕೊ, ಕುವೆಂಪುನಗರ, ಮೈಸೂರು-೫೭೦೦೨೩

# ನವಂಬರ್ ತಿಂಗಳಲ್ಲಿ ಕೇಳಿದ ಪ್ರಶ್ನೆಗೆ ಉತ್ತರ

ಅ,ಕ,ಚ,ಟ,ತ,ಪ ಎಂದು ಹೆಸರಿಸಿ ಆರು ಬಿಂದುಗಳನ್ನು (ಯಾವುದೇ ಮೂರು ಬಿಂದುಗಳು ಒಂದೇ ಸರಳರೇಖೆಯಲ್ಲಿ ಇರದಂತೆ ಗುರುತಿಸಬೇಕು) ಗುರುತಿಸಿ, ಎಲ್ಲ ಎರಡು ಬಿಂದುಗಳನ್ನು ಪರಸ್ಪರ ಸರಳ ರೇಖೆಯಿಂದ ಸೇರಿಸಿದರೆ ಹದಿನೈದು ಬಾಹುಗಳುಳ್ಳ ಆಕೃತಿಯು ಬರುತ್ತದೆ. ಎರಡು ಬಣ್ಣ ಉಪಯೋಗಿಸಿ ಹದಿನೈದು ಬಾಹುಗಳನ್ನು 'ಬಣ್ಣಿ'ಸಬಹುದಾದ, ಒಂದಕ್ಕಿಂತ ಒಂದು ಭಿನ್ನವಾದ ೩೨೭೬೮ ಬಗೆಗಳಿವೆ. ಆದ್ದರಿಂದ ಆ ಎಲ್ಲ ಚಿತ್ರಗಳನ್ನು ಬಿಡಿಸಿ ಅವಲೋಕಿಸಿ ಪ್ರತಿಯೊಂದು ಚಿತ್ರದಲ್ಲಿಯೂ ಒಂದು ಕೆಂಪು ತ್ರಿಭುಜ ಅಥವಾ ಒಂದು ನೀಲಿ ತ್ರಿಭುಜ ಇರುತ್ತದೆ ಎಂದು ತೀರ್ಮಾನಿಸುವುದು ಕಷ್ಟ ಸಾಧ್ಯ!

ಮೇಲಿನ ಪ್ರಶ್ನೆಗೂ ನಾವು ಅಕ್ಟೋಬರ್ ಸಂಚಿಕೆಯಲ್ಲಿ ಕೇಳಿದ್ದ ಪ್ರಶ್ನೆಗೂ ತಾರ್ಕಿಕ ಅನುರೂಪತೆ ಇದೆ ಎಂಬುದನ್ನು ಗಮನಿಸಬೇಕು. ಇವೆರಡೂ ಪ್ರಶ್ನೆಗಳ ತಾರ್ಕಿಕ ಅನುರೂಪತೆಯನ್ನು ಸ್ಪಷ್ಟಪಡಿಸಲು ಮತ್ತು ಎರಡನೆಯ ಪ್ರಶ್ನೆಯ ಉತ್ತರವನ್ನು ಮೊದಲನೇ ಪ್ರಶ್ನೆಯ ಉತ್ತರದಿಂದ (ನವಂಬರ್ ಸಂಚಿಕೆ, ಪು-೪೫) ಸಮರ್ಥಿಸಿಕೊಳ್ಳಲು, ಒಂದು 'ಪದಕೋಶ'ವನ್ನು ಕೆಳಗೆ ಕೊಟ್ಟಿದ್ದೇವೆ. ಇದನ್ನು ಉಪಯೋಗಿಸಿ ಎರಡನೆ ಪ್ರಶ್ನೆಯ ಉತ್ತರವನ್ನು ಸಮರ್ಥಿಸಿಕೊಳ್ಳಬಹುದು.

**'ಪದಕೋಶ'**

| ಪ್ರಶ್ನೆ:೧ | ಪ್ರಶ್ನೆ:೨ |
|---|---|
| ೧) ಅ,ಕ,ಚ,ಟ,ತ,ಪ ಸಮಿತಿಯ ಆರು ಸದಸ್ಯರು | ೧) ಅ,ಕ,ಚ,ಟ,ತ,ಪ ಗುರುತಿಸಿದ ಆರು ಬಿಂದುಗಳು |
| ೨) ಉದಾ: 'ಅ' ಮತ್ತು 'ಕ' ಪರಸ್ಪರ ಮಿತ್ರರು | ೨) ಉದಾ: 'ಅ' ಮತ್ತು 'ಕ' ಬಿಂದುಗಳನ್ನು ನೀಲಿ ಬಣ್ಣದ ರೇಖೆಯಿಂದ ಸೇರಿಸಲಾಗಿದೆ. |
| ೩) 'ಅ' ಮತ್ತು 'ಕ' ಪರಸ್ಪರ ವಿರೋಧಿಗಳು | ೩) 'ಅ' ಮತ್ತು 'ಕ' ಬಿಂದುಗಳನ್ನು **ಕೆಂಪು** ಬಣ್ಣದ ರೇಖೆಯಿಂದ ಸೇರಿಸಲಾಗಿದೆ. |
| ೪) ಉದಾ: ಪ್ರಶ್ನೆಗೆ ಉತ್ತರ; ಕ,ಟ,ಚ ಮೂವರೂ ಪರಸ್ಪರ ಮಿತ್ರರು ಇತ್ಯಾದಿ | ೪) ಉದಾ: ಪ್ರಶ್ನೆಗೆ ಉತ್ತರ : ಕ,ಟ,ಚ ಬಿಂದುಗಳನ್ನು ಪರಸ್ಪರ ಸೇರಿಸುವ ರೇಖೆಗಳಿಂದುಂಟಾಗುವ ತ್ರಿಭುಜದ ಬಣ್ಣ ನೀಲಿ ಇತ್ಯಾದಿ |

**ಮುಖ್ಯವಾಗಿ ಗಮನಿಸಿ :** ಆರು ಬಿಂದುಗಳಿಗೆ ಬದಲಾಗಿ ಐದು ಬಿಂದುಗಳನ್ನು ಪರಸ್ಪರ ಸೇರಿಸಿದಾಗ ಹತ್ತು ಭುಜಗಳ ಆಕೃತಿ ಬರುತ್ತದೆ. ಎರಡು ಬಣ್ಣಗಳನ್ನು ಉಪಯೋಗಿಸಿ ಬಣ್ಣಿಸಿದರೆ ಪರಸ್ಪರ ವಿಭಿನ್ನವಾದ ೧೦೨೪ ಚಿತ್ರಗಳು ಬರುತ್ತವೆ. ಆದರೆ ಈ ಬಾರಿ ಆ ಎಲ್ಲ ಚಿತ್ರಗಳಲ್ಲೂ ಒಂದೇ ಬಣ್ಣದ ತ್ರಿಭುಜ ಇರಲೇಬೇಕೆಂದಿಲ್ಲ! ಇದನ್ನೇ ಹೀಗೆ ಹೇಳಬಹುದು : ಐದು ಸದಸ್ಯರಿರುವ ಸಮಿತಿಯಲ್ಲಿ, ಅದನ್ನು ಹೇಗೇ ಘಟಿಸಿದರೂ ಪರಸ್ಪರ ಮೂವರು ಮಿತ್ರರು ಅಥವಾ ಪರಸ್ಪರ ಮೂವರು ವಿರೋಧಿಗಳು ಇರಲೇಬೇಕೆಂಬ ಅಗತ್ಯವಿಲ್ಲ.

ಈಗ ಇದೇ ತೆರದ ಇನ್ನೊಂದು ಪ್ರಶ್ನೆ;

ಹದಿನೆಂಟು ಅಥವಾ ಇದಕ್ಕಿಂತ ಹೆಚ್ಚಿನ ಸಂಖ್ಯೆಯ ಸದಸ್ಯರಿರುವ ಯಾವುದೇ ಸಮಿತಿಯಲ್ಲಿ ಪರಸ್ಪರ ನಾಲ್ವರು ಮಿತ್ರರು ಅಥವಾ ಪರಸ್ಪರ ನಾಲ್ವರು ವಿರೋಧಿಗಳಿರುತ್ತಾರೆ ಎಂದು ತೋರಿಸಿ ಮತ್ತು ೧೮ ಈ ಅರ್ಥದಲ್ಲಿ ಕನಿಷ್ಠ ಎಂದು ತೋರಿಸಿ.

ಈ ಪ್ರಶ್ನೆಯ ಉತ್ತರವನ್ನು ನಾವು ಓದುಗರಿಗೇ ಬಿಟ್ಟಿದ್ದೇವೆ. ಮೇಲಿನ ಪ್ರಶ್ನೆಗಳ ಜಿಜ್ಞಾಸೆ, ಬರೀ ವಿನೋದದ ದಾರಿ ಎಂದು ತಿಳಿಯಬಾರದು. ಈ ಪ್ರಶ್ನೆಗಳಿಂದ ಪ್ರೇರಿತವಾದ ಅನೇಕ ಸಂಕೀರ್ಣ ಸಮಸ್ಯೆಗಳು ಕಾಂಬಿನೆಟೋರಿಯಲ್ ಅನಾಲಿಸಿಸ್ (combinatorial analysis) ಎಂಬ ಗಣಿತ ಪ್ರಕಾರದ ಒಂದು ಮುಖ್ಯ ಅಧ್ಯಾಯವಾದ Ramsey theory ಎಂಬ ಹೆಸರಿನಿಂದ ಈಗಲೂ ಗಣಿತಶಾಸ್ತ್ರಜ್ಞರ ಸಂಶೋಧನಾ ಸಾಮಗ್ರಿಯಾಗಿದೆ. ಇಂತಹ ಗಣಿತ ಪ್ರಕಾರಗಳು ಕಂಪ್ಯೂಟರ್ ವಿಜ್ಞಾನ, ಜೀವ ವಿಜ್ಞಾನಗಳಲ್ಲಿ ಉಪಯುಕ್ತತೆಯನ್ನು ಕಂಡುಕೊಂಡಿವೆ.

**ಈ ತಿಂಗಳ ಪ್ರಶ್ನೆ :** ಕೆಳಗಿನ ಪ್ರಶ್ನೆಯು ಸಾಕಷ್ಟು ಹಳೆಯದು. ಇಂತಹ ಪ್ರಶ್ನಾ ಪ್ರಕಾರವು ಕೊನೆಯ ಪಕ್ಷ ಕ್ರಿ.ಶ. ೧೬೦೦ರಷ್ಟು ಹಳೆಯದೆನ್ನಲಾಗುತ್ತದೆ.

ಮೂರು ಜೊತೆ ದಂಪತಿಗಳು ಒಂದು ನದಿಯನ್ನು, ಒಂದು ಪಾತ್ರದಿಂದ ಇನ್ನೊಂದು ಪಾತ್ರಕ್ಕೆ, ಒಂದು ದೋಣಿಯಲ್ಲಿ ದಾಟಬೇಕಾಗಿದೆ. ಅಂಬಿಗ ಇಲ್ಲ, ದೋಣಿಯಲ್ಲಿ ಒಮ್ಮೆಗೆ ಇಬ್ಬರಿಗಿಂತ ಹೆಚ್ಚು ಮಂದಿ ನದಿಯನ್ನು ಹಾಯುವಂತಿಲ್ಲ. ಅಲ್ಲದೆ, ದಂಪತಿಗಳಲ್ಲಿದ್ದ ಮೂವರು ಗಂಡಸರೂ ಅಪ್ಪಟ ಮನುವಾದಿಗಳು. ಪತಿ ಜೊತೆಯಲ್ಲಿಲ್ಲದಾಗ ಪರಪುರುಷ ಇರುವ ಯಾವುದೇ ಗುಂಪಿನಲ್ಲಿ ಆತನ ಪತ್ನಿ ಇರುವುದು ಸ್ತ್ರೀ ಧರ್ಮಕ್ಕೆ ವಿರೋಧವೆಂದು ದೃಢವಾಗಿ ನಂಬಿದ್ದವರು. ಹಾಗಾಗಿ ಈ ಪಾತ್ರದಲ್ಲಾಗಲಿ, ಆ ಪಾತ್ರದಲ್ಲಾಗಲಿ, ದೋಣಿಯಲ್ಲಾಗಲಿ ಪತಿ ಇಲ್ಲದೇ ಇರುವಾಗ ಆತನ ಪತ್ನಿ ಪರಪುರುಷರಿರುವ ಗುಂಪಿನಲ್ಲಿ ಇರುವಂತಿಲ್ಲ.

ಈ ಎಲ್ಲ ನಿಬಂಧನೆಗಳೊಡನೆ ಮೂರೂ ಜೊತೆ ದಂಪತಿಗಳು ನದಿಯನ್ನು ದಾಟಲು ಸಾಧ್ಯವಾಯಿತೆ? (ದೋಣಿ ನಡೆಸಲು ಆರು ಮಂದಿಗೂ ಬರುತ್ತದೆ ಎಂದುಕೊಳ್ಳಿ). ಹಾಗಿದ್ದರೆ, ಒಂದು ಪಾತ್ರದಿಂದ ಇನ್ನೊಂದು ಪಾತ್ರಕ್ಕೆ ಮಾಡುವ ಪ್ರತಿ ದೋಣಿ ಪ್ರಯಾಣವನ್ನು ಒಂದೊಂದಾಗಿ ಎಣಿಸಿದಾಗ ಬೇಕಾಗುವ ಕನಿಷ್ಠ ಪ್ರಯಾಣಗಳ ಸಂಖ್ಯೆ ಎಷ್ಟು?

ಮೂರು ಜೊತೆಯ ಬದಲು, ನಾಲ್ಕು ಜೊತೆ ದಂಪತಿಗಳಿದ್ದರೆ ಪ್ರಶ್ನೆಗೆ ಉತ್ತರವೇನು?

## ವ್ಯಾಸರಾಯ ಬಲ್ಲಾಳ ಅಭಿನಂದನಾ ಸಮಾರಂಭ

ಕನ್ನಡ ಸಾರಸ್ವತ ಲೋಕದ ಶ್ರೇಷ್ಠ ಕಾದಂಬರಿಕಾರರಲ್ಲೊಬ್ಬರೂ ಹಿರಿಯರೂ ಆದ ಶ್ರೀ ವ್ಯಾಸರಾಯ ಬಲ್ಲಾಳರವರಿಗೆ ಎಪ್ಪತ್ತೈದು ತುಂಬಿದ ಸಂದರ್ಭದಲ್ಲಿ ಅವರನ್ನು ಅಭಿನಂದಿಸಿ, ಗೌರವಿಸುವುದು ಕನ್ನಡಿಗರಾದ ನಮ್ಮ ಕರ್ತವ್ಯ. ಸುಮಾರು ಮೂರು ದಶಕಗಳು ಮುಂಬಯಿಯಲ್ಲಿದ್ದು ಕನ್ನಡ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದು, ತಮ್ಮ ಸತ್ವಪೂರ್ಣ ಕಾದಂಬರಿಗಳು, ಕತೆಗಳು ಹಾಗೂ ವಿಚಾರಪೂರ್ಣ ಲೇಖನಗಳ ಮೂಲಕ ಕನ್ನಡ ನಾಡಿನ ಜನಮನವನ್ನು ಶ್ರೀ ವ್ಯಾಸರಾಯಬಲ್ಲಾಳರು ಆಕರ್ಷಿಸಿದ್ದಾರೆ. ಈ ಹಿರಿಯ ಸಾಹಿತಿಯ ಕೃತಿಗಳು ಮತ್ತು ವ್ಯಕ್ತಿತ್ವ ಕುರಿತು ಲೇಖನಗಳನ್ನೊಳಗೊಂಡ ಗ್ರಂಥವೊಂದನ್ನು ಪ್ರಕಟಿಸಿ ಅವರಿಗೆ ಅರ್ಪಿಸಿ ಗೌರವಿಸುವ ಕಾರ್ಯಕ್ರಮ ಹಾಕಿಕೊಂಡಿದೆ.

ಸಮಾರಂಭ ಡಿಸೆಂಬರ್ 26, 1999 ಭಾನುವಾರ ಬೆಂಗಳೂರಿನ ಯವನಿಕಾ ಸಭಾಂಗಣದಲ್ಲಿ ಜರುಗುತ್ತದೆ. ಮಧ್ಯಾಹ್ನ 3 ಗಂಟೆಗೆ ವ್ಯಾಸರಾಯ ಬಲ್ಲಾಳರ ಕೃತಿಗಳನ್ನು ಕುರಿತ ವಿಚಾರ ಸಂಕಿರಣ, ಅನಂತರ ಸಂಜೆ 6ಕ್ಕೆ ಅಭಿನಂದನಾ ಕಾರ್ಯಕ್ರಮ, ಗ್ರಂಥಸಮರ್ಪಣೆ.

ಇದಕ್ಕೆ ಮುನ್ನ ಡಿಸೆಂಬರ್ 25, 1999 ಶನಿವಾರ ಬೆಳಗ್ಗೆ 10.30ಕ್ಕೆ ಶ್ರೀ ವ್ಯಾಸರಾಯ ಬಲ್ಲಾಳರೊಂದಿಗೆ ಸಂವಾದ ಕಾರ್ಯಕ್ರಮ ಏರ್ಪಡಿಸಲಾಗಿದೆ.

*ಆಸಕ್ತರು ವಿವರಗಳಿಗೆ* : ಕಾರ್ಯದರ್ಶಿ, ವ್ಯಾಸರಾಯ ಬಲ್ಲಾಳ ಅಭಿನಂದನಾ ಸಮಿತಿ, ನವಕರ್ನಾಟಕ ಪ್ರಕಾಶನ, ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001 ಇವರನ್ನು *ಸಂಪರ್ಕಿಸಬೇಕಾಗಿ ಕೋರುತ್ತೇವೆ.*

# ಯಕ್ಷಗಾನಕ್ಕೀಗ ಇಳಿತದ ಕಾಲ?

*ಸಮುದ್ರಕ್ಕೆ ಉಬ್ಬರ-ಇಳಿತಗಳಿರುವ ಹಾಗೆ ಕಲೆಗೂ ಉಬ್ಬರವಿಳಿತಗಳಿದ್ದರೆ ಯಕ್ಷಗಾನ ಕಲೆಗೀಗ ಇಳಿತದ ಕಾಲ ಎನ್ನಬಹುದೇನೋ!*

ಕರಾವಳಿ ಹಾಗೂ ಮಲೆನಾಡಿನ ರಕ್ತಗತ ಕಲೆಯಾಗಿ ಪ್ರಸಿದ್ಧಿಗೆ ಬಂದ ಪಡುವಲಪಾಯ ಯಕ್ಷಗಾನ ಕಳೆದ ಎರಡು ದಶಕದಲ್ಲಿ ಅತಿ ಹೆಚ್ಚು ಸಂಖ್ಯೆಯ ಅತಿರಥ-ಮಹಾರಥ ಕಲಾವಿದರುಗಳಿಂದ ಮೆರೆಯಿತು. ಶಿವರಾಮ ಕಾರಂತರ ನೇತೃತ್ವದಲ್ಲಿ ಸೀಮೋಲ್ಲಂಘನ ಮಾಡಿತು. ಈ ನಿಟ್ಟಿನಲ್ಲಿ ಇಲ್ಲಿಯ ಯಕ್ಷಗಾನದ ಪ್ರಮುಖ ಪ್ರಭೇದಗಳಾದ ತೆಂಕುತಿಟ್ಟು ಮತ್ತು ಬಡಗು ತಿಟ್ಟುಗಳಿಗೆ ಕಳೆದ ಮೂರು ದಶಕಗಳು ಸುವರ್ಣಕಾಲ. ರಾಷ್ಟ್ರೀಯ-ಅಂತರರಾಷ್ಟ್ರೀಯ ಖ್ಯಾತಿಯನ್ನು ಕಲಾವಿದರುಗಳು ಪಡೆದುದೇ ಅಲ್ಲದೇ ವ್ಯವಸಾಯದ ದೃಷ್ಟಿಯಿಂದ ಸಾವಿರಾರು ಜನರಿಗೆ ಅನ್ನ ನೀಡಿದ ಪುಣ್ಯ ಯಕ್ಷಗಾನದ್ದಾಯಿತು.

ಈ ಹಿನ್ನೆಲೆಯಲ್ಲಿ ಯಕ್ಷಗಾನಕ್ಕೀಗ ಭರತ ಮುಗಿದು ಇಳಿತದ ಕಾಲವೇ? ಯಕ್ಷಗಾನಾಸಕ್ತರು, ಮುಖ್ಯವಾಗಿ ಪ್ರೇಕ್ಷಕರು ಹಾಗೆಂದೇ ಭಾವಿಸುತ್ತಾರೆ. ಯಕ್ಷಗಾನದ ಈಚಿನ ಬೆಳವಣಿಗೆಯನ್ನು ಸೂಕ್ಷ್ಮವಾಗಿ ಗಮನಿಸುವ ವರಿಗೆಲ್ಲ ಹಾಗೆ ಅನ್ನಿಸದಿರದು.

ದಕ್ಷಿಣ ಕನ್ನಡ ಜಿಲ್ಲೆಯ ಉಜಿರೆಯಲ್ಲಿ ಹತ್ತು ವರ್ಷದ ಹಿಂದೆ ವರ್ಷಕ್ಕೆ ೧೨೦ ರಿಂದ ೧೫೦ ಆಟಗಳಾಗುತ್ತಿದ್ದವು. ಅಂದರೆ ಕರಾವಳಿ-ಮಲೆನಾಡುಗಳಲ್ಲಿ ಯಕ್ಷಗಾನ ಮೇಳಗಳು ಚಾಲನೆಯಲ್ಲಿ ಇರುವುದೇ ಮಳೆಗಾಲ ಕಳೆದ ಮುಂದಿನ ಆರೇಳು ತಿಂಗಳಲ್ಲಿ. ಸುಮಾರು ೧೫೦-೨೦೦ ದಿನಗಳಲ್ಲಿ ೧೫೦ ರಾತ್ರಿಯಾದರೂ ಊರಲ್ಲಿ ಚಂಡೆಯ ಸದ್ದು ಕೇಳಿಬರುತ್ತಿತ್ತು. ಆದರೆ ಈಗ ವರ್ಷಕ್ಕೆ ೨೫-೩೦ ಆಟವಾದರೆ ಹೆಚ್ಚು ಎಂಬುದು ಊರವರ ಅಭಿಪ್ರಾಯ.

ಯಾಕೆ ಹೀಗಾಯ್ತು?

ಕಳೆದ ಒಂದು ದಶಕದಲ್ಲಿ ವ್ಯವಸಾಯೀ ಯಕ್ಷಗಾನ ಮೇಳಗಳೇ ಕಡಿಮೆಯಾಗಿರುವುದನ್ನು ಗಮನಿಸಬೇಕು. ಒಂದು ಕಾಲದಲ್ಲಿ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿ ಕನಿಷ್ಠ ೧೫ ವ್ಯವಸಾಯೀ ಮೇಳಗಳಿದ್ದರೆ ಇಂದು ಲೆಕ್ಕಕ್ಕೆ ಸಿಗುವುದು ಆರೇಳು. ಬಡಗು ತಿಟ್ಟಿನ ಹೃದಯ ನೆಲವಾದ ಉತ್ತರ ಕನ್ನಡದಲ್ಲಿ ಈಗ ಒಂದೂ ವ್ಯವಸಾಯೀ ಮೇಳವೇ ಉಳಿದಿಲ್ಲ. ಉತ್ತರ ಕನ್ನಡದ ಕಲಾವಿದರು ದಕ್ಷಿಣ ಕನ್ನಡದಲ್ಲಿ ಚಾಲನೆಯಲ್ಲಿರುವ ಸಾಲಿಗ್ರಾಮ ಅಥವಾ ಪೆರ್ಡೂರು ಮೇಳಗಳನ್ನೇ ಆಶ್ರಯಿಸಬೇಕಿದೆ. ಉತ್ತರ ಕನ್ನಡದ ಪ್ರತಿಷ್ಠಿತ ಇಡಗುಂಜಿ ಮೇಳ ವ್ಯವಸಾಯದ ವ್ಯಾಖ್ಯೆಯನ್ನೇ ಬದಲಾಯಿಸಿಕೊಂಡು ಆಮಂತ್ರಣಗಳಿದ್ದಾಗ ಮೂರು ತಾಸಿನ ಪ್ರದರ್ಶನ ನೀಡುವ ಗೌರವಸದಸ್ಯರ ತಂಡವಾಗಿ ಉಳಿದಿದೆ.

ವೃತ್ತಿ ಯಕ್ಷಗಾನ ಮೇಳಗಳು ಕಾಣೆಯಾಗಲು ನಾನಾ ಕಾರಣಗಳಿವೆ. ಮೂಲತಃ ಈಗ ಮೇಳ ನಡೆಸುವುದೆಂದರೆ ಹತ್ತು ಲಕ್ಷವಾದರೂ ತೊಡಗಿಸಬೇಕಾದ ಉದ್ಯಮ. ಖರ್ಚಿ, ಟೆಂಟು, ಸ್ಟೇಜು, ವೇಷ-ಭೂಷಣಗಳಿಗಾಗಿ ಹಣ ಸುರಿಯಬೇಕು. ಮುಂಗಡ ಕೊಟ್ಟು ಕಲಾವಿದರನ್ನು ಕಾದಿರಿಸಬೇಕು. ಹಾಗಿದ್ದೂ ಕೈಕೊಡುವ ಅವರ ಬೇಜವಾಬ್ದಾರಿಯನ್ನು ಸಹಿಸಿಕೊಂಡು, ಪ್ರೇಕ್ಷಕರಿಂದ ಬೈಸಿಕೊಳ್ಳಬೇಕು!



ದೊಡ್ಡ ಲಾರಿಯಲ್ಲಿ ರಂಗಸ್ಥಳ-ಟೆಂಟಿನ ಸಾಮಗ್ರಿಯನ್ನು ಪ್ರತೀ ಬೆಳಿಗ್ಗೆ ಒಯ್ದು ಸಂಜೆಯಾಗುವುದರೊಳಗೆ ಆಟಕ್ಕೆ ಬಯಲನ್ನು ಸಿದ್ಧಗೊಳಿಸುವುದು ಭಾರೀ ಕಷ್ಟದ ಕೆಲಸ. ಕೈಕೊಡುವ ಕೆಲಸಗಾರರು, ಸಹಕಾರ ನೀಡದ ಊರ ರಾಜಕೀಯ, ಇವುಗಳ ನಡುವೆ ಒಂದೊಂದು ಊರಲ್ಲೂ ಆಟ ಮಾಡುವುದೊಂದು ಬ್ರಹ್ಮವಿದ್ಯೆ.

ಪ್ರತಿಯೊಂದೂ ದುಡ್ಡಿನಲ್ಲೇ ನಿರ್ಣಯವಾಗುವ ಈ ಕಾಲದಲ್ಲಿ ಸಹಜವಾಗಿಯೇ ಯಕ್ಷಗಾನ ಮೇಳದ ನಿರ್ವಹಣೆಯ ಖರ್ಚು ವಿಪರೀತ ಏರಿ, ಅದರ ಪರಿಣಾಮವಾಗಿ ಆಟದ ಟಿಕೇಟು ದರವೂ ಏರಿತು. ಮೊದಲೆ ಒಂದು ರೂಪಾಯಿ ಕೊಟ್ಟು ನೆಲದ ಟಿಕೇಟು ಪಡೆದು ಮನೆಯಿಂದ ತಂದ ಚಾಪೆ ಹಾಸಿಕೊಂಡು ಕುಳಿತು ಜನರು ಶೇಂಗಾ ತಿನ್ನುತ್ತ ಯಕ್ಷಗಾನ ನೋಡುವ ಕಾಲದಲ್ಲಿ ಯಕ್ಷಗಾನಕ್ಕೆ ವಿಪರೀತ ಪ್ರೇಕ್ಷಕರು. ಜನವರಿಯ ಕಡು ಚಳಿಯ ವೇಳೆ ರಂಗದ ಎದುರು ಹೊದ್ದು ಮಲಗುವ ಪ್ರೇಕ್ಷಕರೂ ಇದ್ದರು. ಅವರು ರಾಕ್ಷಸ ಪಾತ್ರ ಬಂದಾಗಲೋ ಭೀಮ-ಕೌರವರ ಯುದ್ಧ ಆರಂಭವಾದಾಗಲೋ ಎದ್ದು ಕುಳಿತುಕೊಳ್ಳುತ್ತಿದ್ದರು.

**ಡಾ|| ನಿರಂಜನ ವಾನಳ್ಳಿ**

ಆ ಸುಖ ಈಗಿಲ್ಲ. ನೆಲಕ್ಕೂ ಹತ್ತು ರೂಪಾಯಿ ಟಿಕೇಟು ಅಥವಾ ನೆಲವೇ ಇಲ್ಲ. ಯಕ್ಷಗಾನ ಟಿಕೇಟಿನ ದರ ರೂ. ೫೦-೧೦೦-೧೫೦. ಸಹಜವಾಗಿಯೇ ಅಷ್ಟೊಂದು ತೆತ್ತು ಆಟ ನೋಡುವವರ ಕೊರತೆ. ಒಂದೆಡೆಯಾದರೆ ಆಟದಿಂದ ಸಂಗ್ರಹವಾಗುವ ಹಣ, ಮೇಳದ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆಯಂತಾಗಿದೆ. ಹಿಂದೆಲ್ಲ ಮುಗಿಬಿದ್ದು ಯಕ್ಷಗಾನದ ಕಂಟ್ರಾಕ್ಟು ಪಡೆಯುತ್ತಿದ್ದವರು ಒಂದೆರಡು ವರ್ಷ ನಷ್ಟ ಅನುಭವಿಸಿ ಸದ್ದಡಗಿಹೋದರು. ಈಗ ಮೇಳಗಳ ಗುತ್ತಿಗೆ ಪಡೆದು ಊರಿಗೆ ಕರೆಸಿ ಆಟ ಆಡಿಸುವ ಜನಗಳೇ ಇಲ್ಲ. ಇದು ಪ್ರತಿ ಊರಿನಲ್ಲೂ ಆಟಗಳ ಸಂಖ್ಯೆ ಕಡಿಮೆಯಾಗಲು ಕಾರಣ.

ಹಿಂದೆಲ್ಲ ಪ್ರತಿ ಹಳ್ಳಿಯಲ್ಲೂ ಯಕ್ಷಗಾನ ಪ್ರದರ್ಶನಗಳಾಗುತ್ತಿದ್ದರೆ ಇಂದು ಯಕ್ಷಗಾನ ಪಟ್ಟಣಗಳಲ್ಲಿ ಕೇಂದ್ರೀಕೃತಗೊಳ್ಳುತ್ತಿವೆ. ಹಳ್ಳಿಯ ಜನ ಆಟ ನೋಡಲು ಪೇಟೆಗೆ ಬರಬೇಕಾಗಿದೆ.

ಸಮಾಜದ ವಿಷಮ ವಾತಾವರಣ ಯಕ್ಷಗಾನದ ಮೇಲೂ ಪರಿಣಾಮ ಬೀರದೇ ಇಲ್ಲ. ಈಚಿನ ವರ್ಷಗಳಲ್ಲಿ ರಾತ್ರೋರಾತ್ರಿ ಉದ್ಭವಗೊಳ್ಳುವ ಪ್ರೇಕ್ಷಕರ ನಡುವಿನ ಗಲಾಟೆಗಳು, ಸಣ್ಣ ಸಣ್ಣ ವಿಷಯಕ್ಕೆ ಪ್ರೇಕ್ಷಕರ ಪ್ರತಿಭಟನೆಗಳು ಆಟಕ್ಕೆ ಆಗಾಗ ಅಡ್ಡಿಯುಂಟು ಮಾಡುತ್ತವೆ. ಮುಖ್ಯವಾಗಿ ಕರಪತ್ರದಲ್ಲಿ ಹೆಸರು ಮುದ್ರಿಸಿದ ಕಲಾವಿದ ಯಾವುದೋ ವೈಯಕ್ತಿಕ ಕಾರಣಕ್ಕೆ ಅಂದಿನ ಆಟದಲ್ಲಿ ಪಾಲ್ಗೊಳ್ಳುತ್ತಿಲ್ಲವಾದರೆ ಹಣತೆತ್ತ ಪ್ರೇಕ್ಷಕರು ಸುಮ್ಮನಿರುವುದಿಲ್ಲ. ಗಲಾಟೆ ಮಾಡುತ್ತಾರೆ. ಕಲ್ಲು ಹೊಡೆಯುತ್ತಾರೆ.

ಒಂದು ಉದಾಹರಣೆ ನೋಡಿ. ಸುಬ್ರಹ್ಮಣ್ಯ ಧಾರೇಶ್ವರ ಈಗಿನ ಪ್ರಸಿದ್ಧ ಭಾಗವತರು. ಒಂದು ದಿನ ಅಪಘಾತವೊಂದರಲ್ಲಿ ಪೆಟ್ಟಾಗಿ ಆ ರಾತ್ರಿ ಅವರು ಬಾರದ ಸಂದರ್ಭದಲ್ಲಿ ಪ್ರೇಕ್ಷಕರ ಗಲಾಟೆ ಆರಂಭವಾಗಿ. ರಾತ್ರಿ

ಹನ್ನೊಂದು ಗಂಟೆಗೆ ಧಾರೇಶ್ವರ ಭಾಗವತರನ್ನು ಗಾಯಗೊಂಡ ಸ್ಥಿತಿಯಲ್ಲೇ ಕರೆತರಬೇಕಾದ ಸ್ಥಿತಿ ಒಂದು ರಾತ್ರಿ ಬಂದೊದಗಿತ್ತು.

ಅಷ್ಟು ನೋಯುವ ಸ್ಥಿತಿಯಲ್ಲಿದ್ದರೂ ಕಲಾವಿದ ಹೋಗದೇ ಒಪ್ಪಿಕೊಂಡ ಪಾತ್ರ ಮಾಡಲೇಬೇಕು. ತಪ್ಪಿದಾದರೆ ಪ್ರೇಕ್ಷಕರಿಂದ ಏಟು ತಿನ್ನಬೇಕು. ಕಲಾವಿದರ ವೈಯಕ್ತಿಕ ಇಷ್ಟ-ಕಷ್ಟಗಳಿಗೆ ಪ್ರೇಕ್ಷಕರು 'ಕೇರ್' ಮಾಡದ ದಿನಗಳಿಗೆ ಯಕ್ಷಗಾನ ಬಂದು ಮುಟ್ಟಿದೆ. ದುಡ್ಡು ಕೊಟ್ಟ ಪ್ರೇಕ್ಷಕ, ಕಲಾವಿದ ಹೀಗೇ ಕುಣಿಯಬೇಕೆಂದು ನಿರೀಕ್ಷಿಸುತ್ತಾನೆ. ಇನ್ನೂ ಒಂದು ಹೆಜ್ಜೆ ಮುಂದುವರಿದು ಕಲಾವಿದ ಹೀಗೆ ಕುಣಿಯಬೇಕೆಂದು ನಿರ್ದೇಶಿಸುತ್ತಾನೆ. ಬಯಸಿದಂತೆ ಕುಣಿಸುತ್ತಾನೆ - ಕುಣಿಯದಿದ್ದರೆ ಕಳ್ಳ ಬಿದ್ದನೆಂದು ಛೀ..ತೂ.. ಎನ್ನುತ್ತಾನೆ. ಇಂಥ 'ಒತ್ತಡ' ಕಲಾವಿದರ ಮೇಲಿದ್ದರೆ ಸೃಜನಶೀಲ ಪ್ರತಿಭೆ ಅರಳಬಹುದೇ?

ಇಷ್ಟಾಗಿಯೂ ರಾತ್ರಿಯಿಂದ ಬೆಳಗಿನವರೆಗೆ ಯಕ್ಷಗಾನಗಳು ಜನರನ್ನು ಸೆಳೆಯಲು ವಿಫಲವಾಗುತ್ತಿರುವುದು ಯಕ್ಷಗಾನ ಮೇಳಗಳ ಕಲಾವಿದರನ್ನೂ, ಯಜಮಾನರುಗಳನ್ನೂ ಬೆಚ್ಚಿಬೀಳಿಸಿವೆ. ಹಳೆ ಮೇಳಗಳು ದಿವಾಳಿಯಾಗಿವೆ. ಎರಡು-ಮೂರು ಮೇಳಗಳು ಸೇರಿ ಒಂದೇ ಆಗಿವೆ. ಹೊಸ ಆಟದ ಮೇಳಗಳು ಹುಟ್ಟದ ಸ್ಥಿತಿಯನ್ನು ಯಕ್ಷಗಾನ ವ್ಯವಸಾಯೀ ರಂಗಭೂಮಿ ತಲುಪಿದೆ.

ಜನರಿಗೆ ಆಡಿದ್ದೇ ಆಟವನ್ನು ನೋಡಿ ಬೇಸರ ಬಂದಿರಬಹುದೇ ಎಂದು ಹಿಂದೆಲ್ಲ ಯಕ್ಷಗಾನ ರಂಗ ಕಂಡು-ಕೇಳರಿಯದ ಸಾಮಾಜಿಕ ಪ್ರಸಂಗಗಳನ್ನು ಬರೆಸಿ ಆಡಿದ್ದಾಯ್ತು. ದಿನವಿಡೀ ಕೆಲಸಮಾಡಿ ದಣಿದ ಪ್ರೇಕ್ಷಕರಿಗೆ ಮನರಂಜನೆಯೇ ಬೇಕಾದೀತೆಂದು ಕಾಮೆಡಿ ಪ್ರಸಂಗಗಳೂ ಬಂದವು. ಸಿನಿಮಾದ ರೀತಿಯ ಸಂಭಾಷಣೆಗಳೂ ಯಕ್ಷಗಾನ ರಂಗದ ಮೇಲೆ ಕೇಳಬಂದವು.

ಇವೆಲ್ಲ ಹೆಚ್ಚಾಗಿ ನಡೆದದ್ದು ದಕ್ಷಿಣ ಕನ್ನಡದಲ್ಲಿ, ಅದೂ ತೆಂಕುತಿಟ್ಟಿನಲ್ಲಿ. ತೆಂಕುತಿಟ್ಟಿನ ಯಕ್ಷಗಾನ ಅಧೋಗತಿಗಿಳಿಯುತ್ತಿರುವುದನ್ನು ಪ್ರತಿಭಟಿಸಲು ಸುಳ್ಯದ ಯಕ್ಷಗಾನಾಸಕ್ತರು ನೆಲದ ಟೀಕೇಟು ಪಡೆದು, ಎದುರು ಕುಳಿತು ಧಿಕ್ಕಾರ ಕೂಗಿ 'ತೆಂಕುತಿಟ್ಟು ಯಕ್ಷಗಾನ ಹಿತರಕ್ಷಣಾ ವೇದಿಕೆ'ಯನ್ನು ಸ್ಥಾಪಿಸಿದರು. ರಂಗದ ಮೇಲೆ ಏನೇ ಸಾಹಸ ಮಾಡಿದರೂ ಪ್ರೇಕ್ಷಕರನ್ನು ಆಕರ್ಷಿಸಲು ಸೋತ ಮೇಳಗಳು ಜನರನ್ನು ಯಕ್ಷಗಾನೇತರ ಮಾರ್ಗಗಳಿಂದ ಸೆಳೆಯಲಿಕ್ಕೂ ಪ್ರಯತ್ನಿಸಿದವು. ರಂಗದ ಮೇಲೆ ನಿಜವಾದ ಕುದುರೆ ತರುವುದು, ರಂಗದ ಎದುರಿಗೆ ಆನೆ ಬರುವುದು, ಪ್ರೇಕ್ಷಕರಿಗೆಲ್ಲ ಮಧ್ಯರಾತ್ರಿಯ ವೇಳೆ ಉಚಿತ ಚಹಾ ವಿತರಿಸುವುದು - ಜನರನ್ನು ಸೆಳೆಯಲು ಮಾಡಿದ ಇಂಥ ಯಾವ ಸರ್ಕಸ್ಸುಗಳೂ ನಿರೀಕ್ಷಿತ ಯಶಸ್ಸು ನೀಡಿಲ್ಲ. ಯಾವುದೇ ಊರಲ್ಲಿ ಟೆಂಟು ಹಾಕಿದರೂ ಲಾಭದಾಯಕವಾಗಿ ಯಕ್ಷಗಾನ ನಡೆಯುವುದು ಖಂಡಿತವೆಂಬ ದಿನಗಳು ದೂರವಾದವು.

ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲೂ 'ಸ್ಟಾರ್‌ವ್ಯಾಲ್ಯೂ' ಪಡೆದ ಖ್ಯಾತಿಯ ಕಲಾವಿದರುಗಳೆಲ್ಲಾ ಇಳಿವಯಸ್ಸಿನಲ್ಲಿದ್ದಾರೆ. ಭರವಸೆ ಹುಟ್ಟಿಸಿದ ಯುವಕರ್‍ಯಾರೂ ಬಹಳ ಮೇಲ್ಮಟ್ಟಕ್ಕೆ ಏರುವ ಸೂಚನೆಗಳನ್ನು ತೋರುತ್ತಿಲ್ಲ. ಯಕ್ಷಗಾನ ಕಲಾವಿದರುಗಳ ಜನಪ್ರಿಯತೆಯೂ ಕ್ಷಣಿಕವಾಗುತ್ತಿದೆ. ಈ ನಿಟ್ಟಿನಲ್ಲಿ ಮೇಳಕ್ಕೆ ಸೇರಿ ದಿನಾ ರಾತ್ರಿ ಕುಣಿದು ಹಗಲು ಊರಿಂದೂರಿಗೆ ತಿರುಗುವ ವೃತ್ತಿ 'ಅನಿವಾರ್ಯವಾದರೆ ಮಾತ್ರ ಸ್ವೀಕಾರಾರ್ಹವೆಂದು' ಹೊಸಬರಿಗೆ ಅನ್ನಿಸುತ್ತಿದೆ. ಹೀಗಾಗಿ ಒಳ್ಳೆಯ ಕಲಾವಿದರುಗಳು ಬೇರೆ ವೃತ್ತಿ ಹಿಡಿದು ಖುಷಿಗಾಗಿ ಆಗಾಗ ಬಣ್ಣ ಹಚ್ಚುವುದನ್ನೇ ಬಯಸುತ್ತಾರೆ.

ಇವೆಲ್ಲ ಯಕ್ಷಗಾನಕ್ಕೀಗ ಇಳಿತದ ಕಾಲ ಎಂಬ ಸಂದೇಹವನ್ನು ಪುಷ್ಟೀಕರಿಸುವ ಅಂಶಗಳು.

ಡಾ॥ ನಿರಂಜನ ವಾನಳ್ಳಿ
ಪತ್ರಿಕೋದ್ಯಮ ಉಪನ್ಯಾಸಕರು, ಮಾನಸಗಂಗೋತ್ರಿ
ಮೈಸೂರು - ೫೭೦ ೦೦೬.

# ಉಳ್ಳವರ ಒಮ್ಮತದ ರಾಜಕೀಯ: ಮತೀಯವಾದ

ಜಿ. ರಾಜಶೇಖರ

ವಿಮರ್ಶಕ ಐಜಾಜ್ ಅಹ್ಮದ್, ಸಂಘ ಪರಿವಾರಕ್ಕೂ ಫ್ಯಾಸಿಸಂಗೂ ಇರುವ ಸಮಾನ ಗುಣ ಮತ್ತು ವ್ಯತ್ಯಾಸಗಳ ಬಗ್ಗೆ ಬರೆಯುತ್ತ ''ಪ್ರತಿಯೊಂದು ದೇಶವೂ ತನಗೆ ತಕ್ಕ ಫ್ಯಾಸಿಸಂಅನ್ನು ಬೆಳೆಸಿಕೊಳ್ಳುತ್ತದೆ'' ಎಂದಿದ್ದಾರೆ. ಸಂಘ ಪರಿವಾರಕ್ಕೆ ಇಟಲಿಯ ಫ್ಯಾಸಿಸ್ಟರು ಮತ್ತು ಜರ್ಮನಿಯ ನಾಝಿಗಳ ಜೊತೆ ಅನೇಕ ಹೋಲಿಕೆಗಳು ಇವೆ. ಈ ಮೂರು ಸಿದ್ಧಾಂತದವರೂ ದೇಶಪ್ರೇಮದ ಸಗಟು ಗುತ್ತಿಗೆ ಹಿಡಿದವರಂತೆ ಮಾತನಾಡುತ್ತಾರೆ. ತಮ್ಮ ಅಭಿಪ್ರಾಯಗಳನ್ನು ಒಲ್ಲದವರ ನಿಷ್ಠೆಯನ್ನು ಶಂಕಿಸುತ್ತಾರೆ. ಎಲ್ಲ ಸರ್ವಾಧಿಕಾರಿಗಳೂ ತಮ್ಮ ವಿರೋಧಿಗಳ ಬಗ್ಗೆ ಯೋಚಿಸುವುದು ಹೀಗೆಯೆ. ಸರ್ವಾಧಿಕಾರದ ಬಗ್ಗೆ ಒಲವು ಮತ್ತು ಭಿನ್ನಮತದ ಕುರಿತು ಅಸಹನೆ ಸಂಘಪರಿವಾರಕ್ಕೂ ಫ್ಯಾಸಿಸ್ಟರಿಗೂ ಇರುವ ಇನ್ನೊಂದು ಸಮಾನ ಗುಣ. ಈ ಮೂರು ಬಣದವರ 'ದೇಶದ್ರೋಹಿ'ಗಳ ಪಟ್ಟಿಯಲ್ಲಿಯೂ ಕಮ್ಯುನಿಸ್ಟರದ್ದೇ ಪಹಿಲಾನಂಬರ್. 'ದೇಶ ನಾಶವಾಗುತ್ತಿದೆ' ಎಂದು ಇವರೆಲ್ಲರೂ ಜನರಲ್ಲಿ ಆತಂಕ ಹುಟ್ಟಿಸುತ್ತಾರೆ. ಆಸ್ತಿವಂತರು ಮತ್ತು ಮಧ್ಯಮವರ್ಗಗಳ ಜನರಲ್ಲಿ ತಮ್ಮ ನೆಲೆಗಟ್ಟಿನ ಕುರಿತು ಗಾಬರಿ ಹುಟ್ಟಿಸುವುದು ಸುಲಭ. ಬಡವರು ಇಂತಹದಕ್ಕೆಲ್ಲ ಕಿವಿಗೊಡುವುದಿಲ್ಲ. ಅವರಿಗೆ ಬೇರೆ ಚಿಂತೆಗಳಿವೆ. **ಬಡವರು ಮತ್ತು ದುಡಿಯುವವರ ಸಂಘಟನೆಗಳ ಬಗ್ಗೆ ದ್ವೇಷ ಈ ಮೂರು ಸಿದ್ಧಾಂತಗಳಲ್ಲೂ ಕಾಣಿಸುತ್ತದೆ. ಸಂಘಪರಿವಾರ ಫ್ಯಾಸಿಸ್ಟರ ಹಾಗೆ ಎಡರಾಜಕೀಯದ ಬಗ್ಗೆ ದ್ವೇಷದ ನಿಲುವನ್ನು ತಳೆದಿದೆ; ಮತ್ತು ನಾಝಿಗಳ ಹಾಗೆ ಅನ್ಯಮತದವರಿಗೆ ದೇಶದಲ್ಲಿ ಜಾಗ ಇರಕೂಡದು ಎಂದು ಪ್ರತಿಪಾದಿಸುತ್ತದೆ.**

ಆದರೆ ಈ ಮೂರು ಸಿದ್ಧಾಂತಗಳ ನಡುವೆ, ನಾವು ಗಮನಿಸಬೇಕಾದ ಕೆಲವು ವ್ಯತ್ಯಾಸಗಳೂ ಇವೆ. ಜನಸಂಖ್ಯೆ ಮತ್ತು ಸಾಂಸ್ಕೃತಿಕ ವೈವಿಧ್ಯಗಳ ದೃಷ್ಟಿಯಿಂದ ಭಾರತ, ಇಟಲಿ ಮತ್ತು ಜರ್ಮನಿಗಳಿಗಿಂತ ತುಂಬ ದೊಡ್ಡ ದೇಶ. ವಿಸ್ತೀರ್ಣದಲ್ಲಿ ಕೂಡ ಭಾರತ ದೊಡ್ಡದು. ಜರ್ಮನಿ ಮತ್ತು ಇಟಲಿಗಳ ಭಾಷೆ, ಧರ್ಮ ಮತ್ತು ಸಂಸ್ಕೃತಿಗಳಲ್ಲಿ ಅಖಂಡತೆ ಇದೆ. ಇಟಲಿಯ ಪ್ರಸಿದ್ಧ ಮಾರ್ಕ್ಸ್‌ವಾದಿ ಚಿಂತಕ ಅಂಟೋನಿಯೋ ಗ್ರಾಮ್ಸಿ ಇಟಲಿಯ ವಿಭಿನ್ನ ಪ್ರದೇಶಗಳ ಸಾಂಸ್ಕೃತಿಕ ವ್ಯತ್ಯಾಸಗಳಿಗೂ ಫ್ಯಾಸಿಸಂನ ಬೆಳವಣಿಗೆಗೂ ಇರುವ ಸಂಬಂಧದ ಬಗ್ಗೆ ಬರೆದಿದ್ದಾರೆ. ಆದರೆ ಭಾರತಕ್ಕೆ ಹೋಲಿಸಿದರೆ ಇಟಲಿ ಕೂಡ ಅಖಂಡವಾದ, ಏಕೀಕೃತ ದೇಶ. ಜೊತೆಗೆ ಇಟಲಿ ಮತ್ತು ಜರ್ಮನಿಗಳು, ಜಗತ್ತನ್ನೇ ತಮ್ಮ ವಸಾಹತು ಮಾಡಿಕೊಂಡ ಯೂರೋಪ್ ದೇಶಗಳು. ಆದರೆ ಫ್ಯಾಸಿಸಂ ಮತ್ತು ನಾಝಿವಾದ ಈ ದೇಶಗಳಲ್ಲಿ ತಲೆದೋರುವ ಹೊತ್ತಿಗೆ, ಅವು ತಮ್ಮ ವಸಾಹತುಶಾಹಿ ಮತ್ತು ಆರ್ಥಿಕ ಉತ್ಕರ್ಷದ ಏರು ದಿನಗಳನ್ನು ಕಳೆದು ತೀವ್ರ ಸಂಕಷ್ಟಕ್ಕೆ ಗುರಿಯಾಗಿದ್ದವು. ಜರ್ಮನಿಗೆ ಹೋಲಿಸಿದರೆ ಇಟಲಿ ಸ್ವಲ್ಪ ಬಡದೇಶ. ಆದರೆ ಭಾರತದಲ್ಲಿ ಈ ಎರಡೂ ದೇಶಗಳಿಗೆ ಹೋಲಿಸಲು ಸಾಧ್ಯವೇ ಇಲ್ಲದಷ್ಟು ಬಡತನವಿದೆ. ಇಟಲಿ ಮತ್ತು ಜರ್ಮನಿಗಳಿಗೆ ಕೊಳ್ಳೆಹೊಡೆಯಲು ಮತ್ತು ನಂತರ ಅವುಗಳಿಗಾಗಿ ಪರಸ್ಪರ ಕಚ್ಚಾಡಿಕೊಳ್ಳಲು ವಸಾಹತು ದೇಶಗಳ ಮಾರುಕಟ್ಟೆ ಇತ್ತು. ಭಾರತ ಸ್ವತಃ ತಾನೇ ಒಂದು ವಸಾಹತುವಾಗಿತ್ತು. ಆದರೆ ಈ ವ್ಯತ್ಯಾಸಗಳ ನಡುವೆಯೂ ಯೂರೋಪ್‌ನಲ್ಲಿ ಫ್ಯಾಸಿಸಂ ರಾಜಕೀಯ ಸಂಘಟನೆಯಾಗಿ ಬೆಳೆಯತೊಡಗಿದ್ದ ದಿನಗಳಲ್ಲೇ ಭಾರತದಲ್ಲಿ ಸಂಘ ಪರಿವಾರದ ಮೂಲ ಸಂಘಟನೆ ಆರ್.ಎಸ್.ಎಸ್.ನ ಸ್ಥಾಪನೆಯಾಯಿತು (೧೯೨೫). ಗತಕಾಲದ ವೈಭವದ ಪುನರುತ್ಥಾನ, ಈ ಮೂರು ಸಿದ್ಧಾಂತಗಳಿಗೂ ಇರುವ ಕನಸು. ಆದರೆ ಫ್ಯಾಸಿಸ್ಟರ 'ಗತಕಾಲ', ಸಂಘಪರಿವಾರದವರ 'ಗತಕಾಲ'ದ ಹಾಗೆ ನೂರಾರು ವರ್ಷಗಳಷ್ಟು ಹಿಂದಕ್ಕೆ ಸರಿಯುವಂತಹದ್ದಲ್ಲ. **ಸಂಘ ಪರಿವಾರದ ಪ್ರಕಾರ ಬ್ರಿಟಿಷರು ಮತ್ತು ಮುಸ್ಲಿಂ ದೊರೆಗಳ ಆಳ್ವಿಕೆಗಿಂತ ಹಿಂದಿನ ಹಿಂದೂ ಆಳ್ವಿಕೆಯ ದಿನಗಳೇ ನಮ್ಮ ಚರಿತ್ರೆಯ ಸುವರ್ಣ ಯುಗ. ಆದರೆ ಇಲ್ಲೊಂದು ವ್ಯಂಗ್ಯವಿದೆ. ಭಾರತದ ಚರಿತ್ರೆಯನ್ನು ಹಿಂದು, ಮುಸ್ಲಿಮ್ ಮತ್ತು ಬ್ರಿಟಿಷ್ ಎಂದು ಮೊದಲು ವರ್ಗೀಕರಿಸಿದವರು ವಸಾಹತುಶಾಹಿ ಚರಿತ್ರಕಾರರು.** ವಾಸ್ತವವಾಗಿ, ಹಿಂದು ಆಳ್ವಿಕೆಯ ಕಾಲ ಎಂದು ಇವರು ಕರೆದ ಅವಧಿಯಲ್ಲಿ ದೇಶದ ಅನೇಕ ಕಡೆ ಹಿಂದುವಲ್ಲದ ಪ್ರಭುತ್ವಗಳಿದ್ದವು. ಇಷ್ಟಕ್ಕೂ ಈ ವಸಾಹತುಶಾಹಿ ಪಂಡಿತರು 'ಹಿಂದು ಎಂದು ಕರೆದದ್ದು ಬ್ರಾಹ್ಮಣರ ಆಧಿಪತ್ಯವನ್ನು. ಮುಸ್ಲಿಮರ ಕಾಲ ಎಂದು ಕರೆಯಲಾಗುವ ಮಧ್ಯಯುಗದ ಭಾರತದಲ್ಲಿ ಅನೇಕ ಹಿಂದು ರಾಜ್ಯಗಳಿದ್ದವು. ಆದರೆ ಆರ್.ಎಸ್.ಎಸ್. ನಮ್ಮ ಚರಿತ್ರೆಯ ಈ ವೈವಿಧ್ಯ ಮತ್ತು ವೈರುಧ್ಯಗಳನ್ನೆಲ್ಲ ಕಡೆಗಣಿಸಿ, ಸಾಮ್ರಾಜ್ಯಶಾಹಿಗಳ ಇತಿಹಾಸದ ದೃಷ್ಟಿಕೋನವನ್ನೇ ತನ್ನದನ್ನಾಗಿ ಮಾಡಿಕೊಂಡಿತು.

ಸಂಘಪರಿವಾರದ 'ದೇಶ ಪ್ರೇಮಿ'ಗಳು ಆಳುವವರ ದೃಷ್ಟಿ ಕೋನವನ್ನು ಕಡ ತೆಗೆದುಕೊಂಡದ್ದು ಇದೊಂದು ವಿಷಯದಲ್ಲಿ ಮಾತ್ರವಲ್ಲ. ೧೯೨೫ರಿಂದ ಇವತ್ತಿನವರೆಗೆ, ಸಂಘಪರಿವಾರದ ಬೆಳವಣಿಗೆಯನ್ನು ವಿವರವಾಗಿ ಚಿತ್ರಿಸುವ ತನ್ನ ಕೃತಿ "The Hindu Nationalist Movement and Indian Politics" (Penguin-Delhi '99)ಯಲ್ಲಿ ಕ್ರಿಷ್ಟೋಫ್ ಜಾಫರ್ ಲಾಟ್ ಪರಿವಾರದ ಇಡೀ ಸಿದ್ಧಾಂತವನ್ನೇ ''ದೂಷಣೆ ಮತ್ತು ಅನುಕರಣೆ'' - Stigmatisation and Emulation - ಎಂದು ಕರೆಯುತ್ತಾರೆ. ಸಂಘ ಪರಿವಾರದ ಪ್ರಕಾರ ೨೦ನೆಯ ಶತಮಾನದ ಹಿಂದುಗಳು ಕಳಾಹೀನರಾಗಿದ್ದಾರೆ. ಅವರು ದೈಹಿಕವಾಗಿ ಕೂಡ ದುರ್ಬಲರು. ಇದಕ್ಕೆ ಪರಕೀಯರ ಆಳ್ವಿಕೆಯೇ ಕಾರಣ. ಹಿಂದುಗಳು ಮತ್ತೆ ಒಂದು ಬಲಿಷ್ಠ ಜನಾಂಗವಾಗಬೇಕು; ಅದಕ್ಕಾಗಿ ಒಟ್ಟಾಗಬೇಕು. ಆದರೆ ಸಂಘಪರಿವಾರ ಮೊದಲ ಬಾರಿ ತನ್ನ ಈ ವಾದಗಳನ್ನು ಮಂಡಿಸಿದ ವೇಳೆಯಲ್ಲೇ, ದೇಶದಲ್ಲಿ ಗಾಂಧೀಜಿಯವರ ನೇತೃತ್ವದಲ್ಲಿ ಸ್ವಾತಂತ್ರ್ಯ ಹೋರಾಟ ಒಂದು ನಿರ್ಣಾಯಕ ಹಂತವನ್ನು ತಲುಪಿತ್ತು. ಅದರ ಜೊತೆಜೊತೆಗೇ, ಇಲ್ಲಿ ೧೯ನೇ ಶತಮಾನದಲ್ಲೇ ಕಾಣಿಸಿಕೊಂಡಿದ್ದ ದಲಿತರ ಸಮಾನ ಹಕ್ಕುಗಳ ಚಳುವಳಿ ಅಂಬೇಡ್ಕರ್ ನಾಯಕತ್ವದಲ್ಲಿ ಒಂದು ಮಹತ್ವದ ತಿರುವನ್ನು ಪಡೆದಿತ್ತು. ೧೯೨೫ರ ಆಸುಪಾಸಿನಲ್ಲೇ ಭಾರತ ಕಮ್ಯುನಿಸ್ಟ್ ಪಕ್ಷವೂ ಸ್ಥಾಪನೆಯಾಯಿತು. ಈ ದೇಶದ ಕೆಳಜಾತಿಗಳು ಮತ್ತು ದುಡಿಯುವ ವರ್ಗ ತಮ್ಮ ಸ್ವಂತಿಕೆಯ ಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಆರಂಭಿಸಿದ ದಿನಗಳಲ್ಲೇ ಆರ್. ಎಸ್. ಎಸ್. ಕೂಡ ಹುಟ್ಟಿಕೊಂಡದ್ದು ಆಕಸ್ಮಿಕವಲ್ಲ. ಅದು ಈ ಕಾಲದ ಪ್ರಗತಿಪರ ಚಳುವಳಿಗಳಿಗೆ ಪ್ರತಿಷ್ಠಿತ ವರ್ಗಗಳ ಪ್ರತಿಕ್ರಿಯೆಯಾಗಿತ್ತು. 'ಜಾತಿ ವರ್ಗಗಳನ್ನು ಮೀರಿದ ಒಂದು ಅಖಂಡವಾದ ಹಿಂದು ಜನಾಂಗ ಇದೆ; ಆದರೆ ಸಮಕಾಲೀನ ಹಿಂದುಗಳಿಗೆ ಅದರ ಪರಿವೆ ಇಲ್ಲ. ಅವರು ಒಗ್ಗಟ್ಟಾಗಬೇಕಾಗಿದೆ ಮತ್ತು ತಾವು ಕಳೆದುಕೊಂಡ ಅಸ್ಮಿತೆಯನ್ನು ಮರಳಿ ಪಡೆಯಬೇಕಾಗಿದೆ' ಎಂಬ ಆರ್. ಎಸ್. ಎಸ್. ನ ವಾದವೇ, ದಲಿತರ ಮತ್ತು ದುಡಿಯುವವರ ಒಗ್ಗಟ್ಟಿನ ಸಿದ್ಧಾಂತಗಳನ್ನು ಹಿಮ್ಮೆಟ್ಟಿಸುವ ಉದ್ದೇಶವನ್ನು ಹೊಂದಿತ್ತು. ಆದರೆ ಹಿಂದುಗಳ ಒಗ್ಗಟ್ಟಿನ ಈ ಕಲ್ಪನೆ ಹಿಂದುಧರ್ಮದ್ದಲ್ಲ. ಆರ್.ಎಸ್.ಎಸ್. ಅದನ್ನು ಪಡೆದದ್ದು ಮುಸ್ಲಿಂ, ಕ್ರಿಶ್ಚಿಯನ್ ಮತ್ತು ಯಹೂದಿ ಧರ್ಮಗಳಿಂದ. **ಸೆಮಿಟಿಕ್ ಎಂದು ಗುರುತಿಸಲ್ಪಡುವ ಈ ಧರ್ಮಗಳ ಎರಡು ಮುಖ್ಯ ಗುಣಗಳೆಂದರೆ ಏಕದೇವತೆಯ ಆರಾಧನೆ ಮತ್ತು ಅನುಯಾಯಿಗಳು ಒಟ್ಟಾಗಿ ಕಲೆತು ಪ್ರಾರ್ಥಿಸುವುದು. ಆರ್.ಎಸ್.ಎಸ್. ಹಿಂದುಗಳಿಗೆ, ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರ ವಿರುದ್ಧ ಒಗ್ಗಟ್ಟಾಗಲು ಕರೆಕೊಟ್ಟಿತು; ಆದರೆ ತನ್ನ ಒಗ್ಗಟ್ಟಿನ ಕಲ್ಪನೆಯನ್ನು ಆ ಧರ್ಮಗಳಿಂದಲೇ ಪಡೆದುಕೊಂಡಿತು.** ಒಗ್ಗಟ್ಟು ಹಾಗೂ ಸಂಖ್ಯಾಬಲಗಳಲ್ಲಿ ನಂಬಿಕೆ, ಮತ್ತು ಆಧುನಿಕ ರಾಷ್ಟ್ರವೊಂದಕ್ಕೆ ಧರ್ಮವೇ ತಳಹದಿ ಎಂಬ ಕಲ್ಪನೆ ಎರಡೂ ಭಾರತದ ಪರಂಪರೆಗೆ ಸೇರಿದವಲ್ಲ. ಆರ್.ಎಸ್.ಎಸ್. ಘೋಷಿಸುವ ರಾಷ್ಟ್ರನಿಷ್ಠೆಯನ್ನು ಕಣ್ಣುಮುಚ್ಚಿ ನಂಬುವವರಿಗೆ ಆರ್.ಎಸ್.ಎಸ್.ನ ಈ ವಿದೇಶೀ ಮೂಲಗಳ ಬಗ್ಗೆ ತಿಳಿದಿಲ್ಲ. ಆರ್.ಎಸ್.ಎಸ್. ಸಿದ್ಧಾಂತಗಳು

*ಇಲ್ಲದಿರೆ ಬೇರಾವ ದೇವರೇ ಬಾರರೋ*
*ಇಲ್ಲದೊಂದಕೆ ಹೆಸರನಿತ್ತು ಕರೆಯುವೆವೋ*
*ಇಲ್ಲದಿರೆ ಮಾನವನ ಸುಗುಣವೇ ದೈವವೋ*
*ಎಲ್ಲಿಗೂ ಹರಿಯದಿಹ ಸಂಶಯದ ಕೊನೆಯೋ*

**- ವಿ. ಸೀ.**

ವಸಾಹತುಶಾಹಿ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಯ ಧಾಳಿಗಳಿಗೆ, ಇಲ್ಲಿನ ಒಂದು ಜನವರ್ಗದ ಪ್ರತಿಕ್ರಿಯೆ ಎಂದು ಸಮಜಾಯಿಷಿ ಕೊಡುವ ಬುದ್ಧಿಜೀವಿಗಳಿದ್ದಾರೆ. ಅದು ನಿಜವಾಗಿದ್ದರೆ ಭಾರತದ ಸ್ವಾತಂತ್ರ್ಯ ಚಳುವಳಿಯ ಮುಂಚೂಣಿಯಲ್ಲಿ ಆರ್.ಎಸ್.ಎಸ್. ಇರಬೇಕಾಗಿತ್ತು. ಆದರೆ ಸ್ವಾತಂತ್ರ್ಯ ಚಳುವಳಿಯಲ್ಲಿ ಆರ್.ಎಸ್.ಎಸ್.ನ ಪಾತ್ರದ ಬಗ್ಗೆ ಇರುವ ಶಂಕೆಗಳು ಇಂದಿಗೂ ಪರಿಹಾರವಾಗಿಲ್ಲ. ಜೊತೆಗೆ, ಈ ಶತಮಾನದಲ್ಲೂ ಎಲ್ಲ ವಸಾಹತು ದೇಶಗಳಲ್ಲೂ ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿಗಳ ವಿರುದ್ಧ ಧೀರೋದಾತ್ತ ಹೋರಾಟಗಳು ನಡೆದಿವೆ. ಈ ಹೋರಾಟಗಳನ್ನು ಸಂಘಟಿಸಿದ ಯಾವ ನಾಯಕನೂ ಧರ್ಮದ ಪುನರುತ್ಥಾನದ ಕರೆ ಕೊಟ್ಟು ತನ್ನ ಜನಗಳನ್ನು ಒಟ್ಟು ಸೇರಿಸಲಿಲ್ಲ. ಸೈಮನ್ ಬೊಲಿವಾರ್‌ನಿಂದ ಹಿಡಿದು ನೆಲ್ಸನ್ ಮಂಡೇಲಾವರೆಗೆ, ದಕ್ಷಿಣ ಅಮೇರಿಕ, ಆಫ್ರಿಕಾ ಮತ್ತು ಏಷ್ಯಾದ ದೇಶಗಳ ಯಾವ ಹೋರಾಟಗಾರನೂ ದೇವರ ಹೆಸರಿನಲ್ಲಿ ಜನರನ್ನು ಒಂದುಗೂಡಿಸಲಿಲ್ಲ. ಬಹುಶಃ ದೇಶವನ್ನು ಲೂಟಿ ಮಾಡಿದ ಪಹ್ಲವಿ ರಾಜಮನೆತನ ಮತ್ತು ಅಮೇರಿಕದ ಸಾಮ್ರಾಜ್ಯಶಾಹಿಗಳ ವಿರುದ್ಧ ಜನರನ್ನು ಬೀದಿಗಿಳಿಸಿದ ಇರಾನ್‌ನ ಖೋಮೀನಿ ಮತ್ತಿತರ ಧರ್ಮಗುರುಗಳ ಹೋರಾಟ ಇದಕ್ಕೆ ಒಂದು ಅಪವಾದವಾಗಿರಬಹುದು. ಆದರೆ ಇರಾನ್‌ನಲ್ಲಿ ಖೋಮೀನಿಗಿಂತ ಮೊದಲೇ ಇರಾನ್‌ನ ಸಮಾಜವಾದಿಗಳು ಮತ್ತು ಕಮ್ಯುನಿಸ್ಟರು ಅಲ್ಲಿನ ಪ್ರಭುತ್ವದ ವಿರುದ್ಧ ದೊಡ್ಡ ಹೋರಾಟ ನಡೆಸಿದ್ದರು. ೧೯೫೧ರಲ್ಲೇ ಇರಾನ್‌ನಲ್ಲಿ ಸಮಾಜವಾದಿಗಳು ಚುನಾವಣೆಗಳಲ್ಲಿ ಗೆದ್ದು ಮೊಹಮದ್ ಮೊಸಾದೆಕ್ ನೇತೃತ್ವದಲ್ಲಿ ಸರಕಾರ ರಚಿಸಿದ್ದರು. ಆದರೆ ಅವರು ಇರಾನ್‌ನ ತೈಲಸಂಪತ್ತನ್ನು ಅಮೇರಿಕದ ಬಿಗಿಮುಷ್ಟಿಯಿಂದ ತಪ್ಪಿಸಿ ರಾಷ್ಟ್ರೀಕರಿಸಲು ಯತ್ನಿಸಿದಾಗ, ಅಮೇರಿಕ ತನ್ನ ಸಿ.ಐ.ಎ.ಯ ಮುಖಾಂತರ ಚುನಾಯಿತ ಸರಕಾರವನ್ನು ಉರುಳಿಸಿ, ಮೊಸಾದೆಕ್ ಹತ್ಯೆ ಮಾಡಿ, ಪಹ್ಲವಿ ಮನೆತನದ ಲುಚ್ಛನೊಬ್ಬನನ್ನು ಅಧಿಕಾರಕ್ಕೆ ಏರಿಸಿತು. ಈತ ಇರಾನ್‌ನ ಪ್ರಜಾಸತ್ತೆಯನ್ನೇ ಹೊಸಕಿಹಾಕಿದ. ಅವನ ಗುಪ್ತ ಪೊಲೀಸುಪಡೆ 'ಸವಾಕ್' ಸಾವಿರಾರು ಕಮ್ಯುನಿಸ್ಟರನ್ನು ಚಿತ್ರಹಿಂಸೆ ಕೊಟ್ಟು ಕೊಂದಿತು. ಆದರೆ ಈ ರಾಜನನ್ನು ಪದಚ್ಯುತಿಗೊಳಿಸಿ, ಅಧಿಕಾರಕ್ಕೆ ಬಂದ ಧರ್ಮಗುರುಗಳ ಸತ್ತೆಯಲ್ಲಿಯೂ ಇರಾನ್‌ನಲ್ಲಿ ಕಮ್ಯುನಿಸ್ಟರ ಮೇಲೆ ಹಲ್ಲೆಗಳು ಮುಂದುವರಿದಿವೆ. ಇರಾನ್‌ನ ಕಮ್ಯುನಿಸ್ಟ್ ಪಕ್ಷ ಈಗಲೂ ಬಹಿಷ್ಕೃತವಾಗಿದೆ. ಅಮೇರಿಕದ ಬೆಂಬಲ ಪಡೆದ ಪಹ್ಲವಿ ಮನೆತನದ ಸರ್ವಾಧಿಕಾರದ ಬದಲು ಇರಾನ್‌ನಲ್ಲಿ ಈಗ ಧರ್ಮಗುರುಗಳ ಸರ್ವಾಧಿಕಾರ ಸ್ಥಾಪನೆಗೊಂಡಿದೆ. ಅಲ್ಲಿನ ಪ್ರಜೆಗಳು ತಮ್ಮ ಎಲ್ಲ ಪ್ರಜಾಸತ್ತಾತ್ಮಕ ಹಕ್ಕುಗಳನ್ನು ಕಳೆದುಕೊಂಡಿದ್ದಾರೆ; ಮಹಿಳೆಯರಂತೂ, ತಮ್ಮ ಲಿಂಗ ಸಮಾನತೆಯ ಮೂಲಭೂತ ಹಕ್ಕನ್ನು ಸಹ ಕಳೆದುಕೊಂಡಿದ್ದಾರೆ. ಪಾಶ್ಚಿಮಾತ್ಯ ಸಂಸ್ಕೃತಿ ಮತ್ತು ಸಾಮ್ರಾಜ್ಯಶಾಹಿಗೆ ಧರ್ಮಕೇಂದ್ರಿತ ಹೋರಾಟಗಳು ಒಂದು ಉತ್ತರವಾಗಬಲ್ಲವು ಎಂದು ಭಾವಿಸುವವರು ಇವತ್ತು ಇರಾನ್ ಸಾಮಾನ್ಯ ಪ್ರಜೆಗಳಿಗೆ ಧರ್ಮಗುರುಗಳು ತಂದಿಟ್ಟ ದುಃಸ್ಥಿತಿಯನ್ನು ಮನಗಾಣಬೇಕು.

ತನ್ನ ವೈಚಾರಿಕತೆಯಲ್ಲಾಗಲೀ, ತನ್ನ ಸದಸ್ಯರ ಸಮವಸ್ತ್ರ, ಕವಾಯಿತು ಮುಂತಾದ ಬಾಹ್ಯ ವಿವರಗಳಲ್ಲಾಗಲೀ, ಆರ್.ಎಸ್.ಎಸ್.ಗೆ ಒಂದು ಸ್ವದೇಶಿ ಸಂಘಟನೆ ಎಂದು ಕರೆಸಿಕೊಳ್ಳುವ ಅರ್ಹತೆ ಇಲ್ಲ. ಆದರೂ ಸಂಘಪರಿವಾರದ ವಿಚಾರಧಾರೆ ಇವತ್ತು ನಮ್ಮ ವಿದ್ಯಾವಂತರು, ಮಧ್ಯಮವರ್ಗದವರು, ನಗರವಾಸಿಗಳು, ಗ್ರಾಮೀಣ ಶ್ರೀಮಂತರು ಮತ್ತು ಮೇಲುಜಾತಿಗಳವರ ನಡುವೆ ಜನಪ್ರಿಯವಾಗಿದೆ. (ಬಿ.ಜೆ.ಪಿ.ಗೆ ಮತ ಹಾಕುವವರನ್ನು ರಾಜಕೀಯ ತಜ್ಞ ಯೋಗೇಂದ್ರ ಯಾದವ್ ಸ್ಥೂಲವಾಗಿ ಹೀಗೆ ಗುರುತಿಸುತ್ತಾರೆ.) ಯಾವ ರಾಜಕೀಯ ಸಂಘಟನೆಯೂ ಈ ಪ್ರದೇಶದಲ್ಲಿ, ಮೇಲೆ ಹೇಳಿದ ಜನಗಳ ಮತಗಳನ್ನು ಪಡೆದು, ತಮ್ಮಷ್ಟಕ್ಕೆ ತಾವೇ ಅಧಿಕಾರಕ್ಕೆ ಏರಲು ಸಾಧ್ಯವಿಲ್ಲ. ಆದರೆ ಪರಿವಾರದವರು ಇವತ್ತು ಈ ಜನರ ಮತ ಪಡೆದು ದೆಹಲಿಯಲ್ಲಿ ಅಧಿಕಾರ ಹಿಡಿದಿದ್ದಾರೆ. ಈ ದೇಶದ ರಾಜಕೀಯದಲ್ಲಿ ಅವರು ಈಗ ಏಕಾಂಗಿಗಳಲ್ಲ. ಅವರಿಗೆ ಸಹಕಾರ ಕೊಡಲು ಬೇರೆ ಪಕ್ಷಗಳಿವೆ. ಅವರ ಜೊತೆ ಕೈ ಜೋಡಿಸಲು ಸಿದ್ಧವಾಗಿರುವ ವಾಣಿಜ್ಯ ಹಿತಾಸಕ್ತಿಗಳಿವೆ. ಅವರ ಸಿದ್ಧಾಂತಗಳನ್ನು ಜನಪ್ರಿಯಗೊಳಿಸಲು ಪತ್ರಿಕೆಗಳಿವೆ; ಟಿ.ವಿ. ಚಾನೆಲ್ಲುಗಳಿವೆ. ಈ ದೇಶದ ಮೇಲುವರ್ಗ ಹಿಂದೆಂದೂ ಕಾಣದಷ್ಟು ಒಗ್ಗಟ್ಟಾಗಲು ಇವೆಲ್ಲವೂ ಪರಿವಾರದ ಜೊತೆ ಶಾಮೀಲಾಗಿವೆ. ಈ ಬಲಿಷ್ಠರ ಒಗ್ಗಟ್ಟು ಮತ್ತು ಒಮ್ಮತದ ಒಳಮರ್ಮವನ್ನು ಅರಿಯಲು ನಾವು ಕಳೆದ ೨೦ ವರ್ಷಗಳ ದೇಶದ ರಾಜಕೀಯದ ವಿದ್ಯಮಾನಗಳನ್ನು ನೆನಪಿಸಿಕೊಳ್ಳಬೇಕು.

**ಈ ೨೦ ವರ್ಷಗಳು ನಮ್ಮ ದೇಶದ ರಾಜಕೀಯದ ಅತ್ಯಂತ ಗೊಂದಲಮಯವಾದ ಅವಧಿ. ರಾಜಕೀಯ ನಿರಂತರವಾಗಿ ಬದಲಾಗುವಂತಹದ್ದಾದರೂ, ಕಳೆದ ೨೦ ವರ್ಷಗಳಿಗೆ ಹೋಲಿಸಿದರೆ ೧೯೪೭ರಿಂದ ೩೦ ವರ್ಷಗಳ ಕಾಲ, ದೇಶದ ರಾಜಕೀಯ ಹೆಚ್ಚಿನ ಏರುಪೇರುಗಳನ್ನು ಕಾಣಲಿಲ್ಲ.** ಕೇರಳದಲ್ಲಿ ೧೯೫೭ರಲ್ಲಿ ಕಮ್ಯುನಿಸ್ಟ್ ಸರಕಾರವೊಂದು ಚುನಾವಣೆಗಳಲ್ಲಿ ಆಯ್ಕೆಯಾದದ್ದು ಬಿಟ್ಟರೆ ಕಾಂಗ್ರೆಸ್ ಆಳ್ವಿಕೆ ನಿರಾತಂಕವಾಗಿತ್ತು. ಆದರೆ ೭೦ರ ದಶಕದಿಂದ ಈಚೆಗೆ ಕಾಂಗ್ರೆಸ್ ಆಧಿಪತ್ಯಕ್ಕೆ ಅನೇಕ ಕಡೆಗಳಿಂದ ಹೊಡೆತಗಳು ಬೀಳತೊಡಗಿದವು. ನೆಹರೂ ನಂತರ - ಸರಿಯಾಗಿ ಹೇಳುವುದಾದರೆ ಶಾಸ್ತ್ರಿಯವರ ನಿಧನಾನಂತರ, ಶ್ರೀಮತಿ ಇಂದಿರಾ ಗಾಂಧಿ ಅಧಿಕಾರಕ್ಕೆ ಏರಲು ಮತ್ತು ಅಧಿಕಾರದಲ್ಲಿ ಮುಂದುವರಿಯಲು ಅನುಸರಿಸಿದ ವಿಧಾನಗಳಲ್ಲಿ ಈ ರಾಜಕೀಯ ಪ್ರಕ್ಷುಬ್ಧತೆಯ ಮೂಲಗಳನ್ನು ನಾವು ಕಾಣಬಹುದು. ಕಾಂಗ್ರೆಸ್ ಪಕ್ಷದಲ್ಲಿ ಶ್ರೀಮತಿ ಗಾಂಧಿ ತಂದ ಬದಲಾವಣೆಗಳು ದೇಶದ ಮೇಲೆ ಅವರು ಹೇರಿದ ತುರ್ತುಪರಿಸ್ಥಿತಿ ಮತ್ತು ಅನಂತರದ ಬೆಳವಣಿಗೆಗಳ ಬಗ್ಗೆ ಇಲ್ಲಿ ಹೇಳಬೇಕಾದ ಅಗತ್ಯವಿಲ್ಲ. ಆದರೆ ಈಗಿನ ನಮ್ಮ ರಾಜಕೀಯದ ರೋಗಲಕ್ಷಣಗಳನ್ನು ನಾವು ಇಂದಿರಾ ಗಾಂಧಿಯವರ ಆಳ್ವಿಕೆಯ ವಿಧಾನಗಳಲ್ಲಿ ಕಾಣಬಹುದು. ಜನಮರುಳು ರಾಜಕೀಯದ ತಂತ್ರಗಳನ್ನು ಮೊದಲ ಬಾರಿಗೆ ಆಕೆ ನಮ್ಮ ರಾಜಕೀಯದ ಒಳಗೆ ತಂದರು. ಪ್ರತಿ ಚುನಾವಣೆಯಲ್ಲೂ ಕಾಂಗ್ರೆಸ್ ತನ್ನ ೧೫೦ ವರ್ಷಗಳ ಚರಿತ್ರೆಯನ್ನು, ಗಾಂಧಿ-ನೆಹರೂ ಪರಂಪರೆಯನ್ನೂ ಜನರಿಗೆ ನೆನಪು ಮಾಡಿಕೊಡುತ್ತದೆ. ಆದರೆ ಶ್ರೀಮತಿ ಇಂದಿರಾ ಗಾಂಧಿಯವರ ಕಾಂಗ್ರೆಸ್‌ಗೂ ಗಾಂಧಿ ನೆಹರೂಗಳ ಕಾಂಗ್ರೆಸ್‌ಗೂ ಇರುವ ಸಾಮ್ಯ ಬರೇ ಹೆಸರಿನದ್ದು ಮಾತ್ರ. ಕಾಂಗ್ರೆಸ್‌ನಲ್ಲಿ ಆದ ಈ ಮಾರ್ಪಾಡನ್ನು ನಾವು ಅಗತ್ಯ ಗಮನಿಸಬೇಕು. **ಈ ೨೦ ವರ್ಷಗಳ ದೇಶದ ರಾಜಕೀಯ ಅತಿ ಮುಖ್ಯ ಬೆಳವಣಿಗೆ, ಬಿ.ಜೆ.ಪಿ. ತನ್ನ ಶಕ್ತಿಯನ್ನು ಒಮ್ಮಿಂದೊಮ್ಮೆಗೆ ಹಲವು ಪಟ್ಟು ಹೆಚ್ಚಿಸಿಕೊಂಡದ್ದು. ಬಿ.ಜೆ.ಪಿ. ಈ ಸಾಧನೆಯಲ್ಲಿ ಶೇಕಡಾ ೯೦ರಷ್ಟನ್ನು, ನಮ್ಮ ಪ್ರಜಾಪ್ರಭುತ್ವದ ಚೌಕಟ್ಟಿನೊಳಗೇ ಸಾಧಿಸಿದೆ ಎಂಬುದನ್ನೂ ನಾವು ಗಮನಿಸಬೇಕು. ಇದನ್ನು ಸಾಧ್ಯಮಾಡಿಕೊಟ್ಟದ್ದರಲ್ಲಿ ಕಾಂಗ್ರೆಸ್‌ನ ಪಾತ್ರ ದೊಡ್ಡದು.**

ಕಾಂಗ್ರೆಸ್ ಬಿ.ಜೆ.ಪಿ.ಗೆ ಪ್ರತಿಪಕ್ಷವಾಗಿರುವುದು, ಅಧಿಕಾರವನ್ನು ಹಿಡಿಯುವ ದೃಷ್ಟಿಯಿಂದ ಮಾತ್ರ. ಆದರೆ ಸೈದ್ಧಾಂತಿಕವಾಗಿ ಕಾಂಗ್ರೆಸ್ ಬಿ.ಜೆ.ಪಿ.ಗೆ ವಿರೋಧ ಒಡ್ಡಿತೆ? ಜನರನ್ನು ಸಂಘಟಿಸಿತೆ? ಕಾಂಗ್ರೆಸ್ ಬಿ.ಜೆ.ಪಿ.ಯನ್ನು ಎದುರಿಸಲಿಲ್ಲ ಮಾತ್ರವಲ್ಲ; ಅದು ತಟಸ್ಥವಾಗಿಯೂ ಇರಲಿಲ್ಲ. ಬದಲಿಗೆ ಅದು ಬಿ.ಜೆ.ಪಿ.ಯ ಸಿದ್ಧಾಂತಗಳು ಜನರ ಮನಸ್ಸಿನಲ್ಲೂ

### ಅಂಗವನ್ನು ರೂಪಿಸುವ ವಂಶವಾಹಿ

*ನಮ್ಮ ದೇಹದ ಅಂಗವನ್ನು ರೂಪಿಸಿ ಅದಕ್ಕೆ ಆಕಾರ ಕೊಡಲು ಕಾರಣವಾದ ವಂಶವಾಹಿಯನ್ನು ಅಮೇರಿಕದ ಸಂಶೋಧಕರು ಗುರುತಿಸಿದ್ದಾರೆ. ಮನುಷ್ಯನ ಅಂಗಗಳು ಹೇಗೆ ರೂಪುಗೊಳ್ಳುತ್ತವೆ ಎಂಬ ವಿಷಯದ ಬಗ್ಗೆ ಅಷ್ಟೊಂದು ತಿಳುವಳಿಕೆ ಇನ್ನೂ ಮೂಡಿರದಿದ್ದರೂ, ಅಂಗಕ್ಕೆ ರೂಪ, ಬೆಳವಣಿಗೆಯನ್ನು ನಿಯಂತ್ರಿಸುವ ಪ್ರೋಟೀನನ್ನು ಅಮೇರಿಕದ ಹ್ಯೂಸ್ ಮೆಡಿಕಲ್ ಇನ್‌ಸ್ಟಿಟ್ಯೂಟ್ ಮತ್ತು ವಿಸ್‌ಕೋನ್‌ಸಿನ್ ವಿಶ್ವವಿದ್ಯಾಲಯದ ಸಂಶೋಧಕರು ಕಂಡುಹಿಡಿದಿದ್ದಾರೆ.*

*ಈ ಶಂಶೋಧನೆಯಿಂದ ಮುಂದೆ ಅಂಗಗಳನ್ನು ನಮಗೆ ಬೇಕಾದ ರೀತಿಯಲ್ಲಿ ಮಾರ್ಪಡಿಸುವ ಪ್ರಕ್ರಿಯೆ, ಪ್ರೋಟೀನನ್ನು ತಕ್ಕ ರೀತಿಯಲ್ಲಿ ಉಪಯೋಗಿಸಿಕೊಳ್ಳುವುದರಿಂದ ಸಾಧ್ಯವಾಗುವುದು ಎಂಬುದಾಗಿ 'ನೇಚರ್' ಪತ್ರಿಕೆ ವರದಿ ಮಾಡಿದೆ. ಮನುಷ್ಯನ ಅಂಗವನ್ನು ಪ್ರಯೋಗಗಳಲ್ಲಿ ಬದಲಿಸಲು ಅಂದರೆ ಘಾಸಿಯಾದ ಅಂಗಗಳ ಜಾಗದಲ್ಲಿ ಬಳಸುವ ತಂತ್ರ ಸದ್ಯಕ್ಕೆ ಕೈಗೂಡುವುದಿಲ್ಲ. ಆದರೆ ಜೀವಕೋಶಗಳನ್ನು ಸಂಕೀರ್ಣವಾದ ಅಂಗಗಳನ್ನಾಗಿ ರೂಪಿಸುವ ಪ್ರಕೃತಿಯ ಪ್ರಕ್ರಿಯೆಯ ಬಗ್ಗೆ ಈ ಸಂಶೋಧನೆ ಬೆಳಕು ಚೆಲ್ಲಿದೆ ಮಾತ್ರವಲ್ಲ, ಮುಂದಿನ ಸಂಶೋಧನಾ ಚಟುವಟಿಕೆಗಳಿಗೆ ದಾರಿ ದೀಪವಾಗಿದೆ.*

*- ಕೈವಾರ ಗೋಪಿನಾಥ್*

ಬೇರೂರಲು ನೀರೆರೆಯಿತು. ತುರ್ತು ಪರಿಸ್ಥಿತಿಯ ನಂತರ ಬಂದ ಜನತಾ ಸರಕಾರ ಉರುಳಿದ ಮೇಲೆ ಮರಳಿ ಅಧಿಕಾರಕ್ಕೆ ಬಂದ ಇಂದಿರಾ ಗಾಂಧಿ ತಮ್ಮ ಆಳ್ವಿಕೆಯಲ್ಲಿ ಸೆಕ್ಯುಲರ್ ನೀತಿಯನ್ನು ಕೈಬಿಟ್ಟರು. ಆ ವೇಳೆಗಾಗಲೇ ಜನಸಂಘ, ಅದರ ಬಿ.ಜೆ.ಪಿ. ಎಂಬ ಹೊಸ ಆವೃತ್ತಿಯಲ್ಲಿ, ಹಿಂದೆಂದೂ ಕಾಣದಷ್ಟು ಜನಪ್ರಿಯವಾಗಿತ್ತು. ಆರ್.ಎಸ್.ಎಸ್. ತನಗೆ ಅಂಟಿಕೊಂಡಿದ್ದ ಗಾಂಧಿ ಕೊಲೆಯ ಕಳಂಕವನ್ನು ತೊಡೆದು ಕೊಂಡು ಗೌರವಾನ್ವಿತ ವಾಗಿತ್ತು. ದೇಶದ ರಾಜಕೀಯ ಹಿಂದು ಮತ್ತು ಹಿಂದುಯೇತರ ಎಂದು ಒಡೆದು ಕೊಂಡಿತ್ತು. ಶ್ರೀಮತಿ ಗಾಂಧಿ ಇದನ್ನು ವಿರೋಧಿಸುವ ಬದಲು ಇದನ್ನು ಬಳಸಿಕೊಂಡು ತಮ್ಮ ವಿರೋಧಿಗಳಿಗೆ ತಿರುಗೇಟು ಹಾಕುವ ಉಪಾಯ ನಡೆಸಿದರು. ಆದರೆ ಆಕೆ ಅದರಲ್ಲಿ ಸೋತರು; ಅನಂತರ ಕಾಂಗ್ರೆಸ್ ಉದ್ದಕ್ಕೂ ಆಟದಲ್ಲಿ ಸೋಲುತ್ತಲೇ ಬಂದಿದೆ. ಶ್ರೀಮತಿ ಗಾಂಧಿಯವರ ಮತೀಯವಾದಿ ರಾಜಕೀಯದ ದೊಡ್ಡ ನಿದರ್ಶನವೆಂದರೆ ಪಂಜಾಬ್‌ನಲ್ಲಿ ಅಕಾಲಿದಳವನ್ನು ಹಿಮ್ಮೆಟ್ಟಿಸಲು ಸಿಖ್ ಉಗ್ರಗಾಮಿಗಳಿಗೆ ಆಕೆ ಕೊಟ್ಟ ಬೆಂಬಲ. ಈ ಬೆಂಬಲ ಕೊನೆಗೆ ಅವರನ್ನೇ ಬಲಿತೆಗೆದು ಕೊಂಡದ್ದು ಮಾತ್ರವಲ್ಲ, ದೀರ್ಘಕಾಲ ಪಂಜಾಬ್ ಉಗ್ರಗಾಮಿಗಳ ಹಿಡಿತದಲ್ಲಿ ನರಳುವಂತಾಯಿತು. ಇದರ ಜೊತೆ ಅಸ್ಸಾಂ, ಕಾಶ್ಮೀರ ಮತ್ತಿತರ ಗಡಿ ರಾಜ್ಯಗಳಲ್ಲಿ ಕೂಡ ಇಂತಹದ್ದೇ ಸಮಯ ಸಾಧಕ ಧೋರಣೆಗಳಿಂದ, ಉಗ್ರಗಾಮಿ ಚಟುವಟಿಕೆ ಜೋರಾಗುತ್ತ ನಡೆದಂತೆ, ನಿತ್ಯ ಪೇಪರು ಓದುವ ಹಿಂದುಗಳಲ್ಲಿ ತಾವು ಅತಂತ್ರರು ಎಂಬ ಭಾವನೆ ಹುಟ್ಟಲಾರಂಭಿಸಿತು. ಇದನ್ನು ಇನ್ನಷ್ಟು ಬೆಳೆಸಲು ಸಂಘ ಪರಿವಾರ ಸಜ್ಜಾಗಿತ್ತು.

ಶ್ರೀಮತಿ ಗಾಂಧಿಯವರ ಕೊಲೆಯ ನಂತರ, ದೆಹಲಿಯಲ್ಲೇ ೨೦೦೦ ಸಿಖ್ಖರು ಕೊಲೆಯಾದರು; ಉತ್ತರ ಭಾರತದ ಎಲ್ಲೆಡೆ (ಬಂಗಾಳ ಹೊರತುಪಡಿಸಿ) ಸಿಖ್ಖರ ಮೇಲೆ ಹಿಂಸಾಚಾರ ನಡೆಯಿತು. ಕಾಂಗ್ರೆಸ್ ಪಕ್ಷವೇ ಮುಂದೆ ನಿಂತು ಇದನ್ನೆಲ್ಲ ಮಾಡಿಸಿತು ಎಂಬ ಬಗ್ಗೆ ಈಗ ಸಂಶಯವೇ ಉಳಿದಿಲ್ಲ. ಈ ಹಿಂಸೆ ನಡೆಸಿದ ಅಪರಾಧಿಗಳಿಗೆ ಶಿಕ್ಷೆ ಆಗಲಿಲ್ಲ; ಸಂತ್ರಸ್ತರಿಗೆ ಪರಿಹಾರವೂ ಸಿಗಲಿಲ್ಲ. ಅದರ ಬದಲಿಗೆ ನೂತನ ಪ್ರಧಾನಿ ರಾಜೀವ್ ಗಾಂಧಿ, "ಒಂದು ದೊಡ್ಡ ಮರ ಉರುಳಿದಾಗ ಭೂಮಿ ನಡುಗುವುದು ಸಹಜ" ಎಂದು ಹೇಳಿ ಈ ಹಿಂಸಾಚಾರಕ್ಕೆ ಸಮಜಾಯಿಷಿ ಕೊಟ್ಟರು. ಕಾಂಗ್ರೆಸ್ ಪ್ರಜೆಗಳಲ್ಲಿ ಹಿಂದು ಮತ್ತು ಹಿಂದುಯೇತರ ಎಂಬ ವಿಭಜನೆಯನ್ನು ಸ್ವತಃ ಒಪ್ಪಿಕೊಂಡದ್ದು ಮಾತ್ರವಲ್ಲ, ಪ್ರಜೆಗಳಿಗೆ ಕಾನೂನಿನ ರಕ್ಷಣೆ ಸಿಗಬೇಕು ಎಂಬ ತತ್ವವನ್ನೂ ಬಿಟ್ಟುಕೊಟ್ಟರು. ಈ ದೇಶದ ಕಾನೂನು ವ್ಯವಸ್ಥೆಯನ್ನು ಮತೀಯ ಕಾರಣಗಳಿಗಾಗಿ ಆಳುವ ಸರಕಾರವೇ ತಿರುಚಿಹಾಕಿತು. ಶ್ರೀಮತಿ ಗಾಂಧಿಯವರ ಕಾಲದಲ್ಲೇ ಉತ್ತರ ಭಾರತದ ಮೀರತ್, ಮೊರಾದಾಬಾದ್, ಬಿಹಾರ್ ಶರೀಫ್, ದೆಹಲಿ ಮುಂತಾದ ಕಡೆ ತೀವ್ರ ಸ್ವರೂಪದ ಹಿಂದು-ಮುಸ್ಲಿಮ್




ಗಲಭೆಗಳು ನಡೆದವು. ಉತ್ತರ ಪ್ರದೇಶದ ಪ್ರಾದೇಶಿಕ ಸಶಸ್ತ್ರಪಡೆ (ಪಿ.ಎ.ಸಿ.) ಮತೀಯ ಹಿಂಸಾಚಾರಕ್ಕೆ ಇನ್ನೊಂದು ಹೆಸರು ಎನ್ನುವಂತಾಯಿತು. ಆದರೆ ಶ್ರೀಮತಿ ಗಾಂಧಿ ಆ ಪಡೆ ಮುಸ್ಲಿಮರ ಮೇಲೆ ಎಸಗಿದ ಹಿಂಸಾಚಾರವನ್ನು ಒಪ್ಪಿಕೊಳ್ಳಲೇ ಇಲ್ಲ. ಪೊಲೀಸ್ ಮತ್ತು ಕೆಳಹಂತದ ನೌಕರಶಾಹಿಯಲ್ಲಿ ಮತೀಯ ಭಾವನೆ ಬಲಿತದ್ದು ಶ್ರೀಮತಿ ಗಾಂಧಿಯವರ ಕಾಲದಲ್ಲೆ. ಒಟ್ಟಿನಲ್ಲಿ ಈಗ ನಮ್ಮ ರಾಜಕೀಯದ ಭಾಗವೇ ಆಗಿಬಿಟ್ಟಿರುವ ಮತೀಯ ಹಿಂಸೆ, ಇಷ್ಟು ದೊಡ್ಡ ಪ್ರಮಾಣದಲ್ಲಿ ಮೊದಲು ಕಾಣಿಸಿಕೊಂಡದ್ದು ಶ್ರೀಮತಿ ಗಾಂಧಿಯವರ ಅಧಿಕಾರಾವಧಿಯಲ್ಲಿ.

ಶ್ರೀಮತಿ ಗಾಂಧಿಯವರ ನಂತರ ಅಧಿಕಾರಕ್ಕೆ ಬಂದ ರಾಜೀವ್ ಗಾಂಧಿಯವರ ಆಳ್ವಿಕೆಯನ್ನು ಹೆಚ್ಚು ವಿವರಿಸಬೇಕಾದ ಅಗತ್ಯವಿಲ್ಲ. ಅದು ಬಿ.ಜೆ.ಪಿ. ಸಿದ್ಧಾಂತವನ್ನು ಕಾಂಗ್ರೆಸ್ ಇಡಿಯಾಗಿ ಅನುಷ್ಠಾನಗೊಳಿಸಿದ ರೀತಿ. ಉದಾಹರಣೆಗೆ ೧೯೮೬ರಲ್ಲಿ ರಾಜೀವ್ ಗಾಂಧಿ, ಕೇಂದ್ರ ಮಂತ್ರಿ ಅರುಣ್ ನೆಹರೂ ಮತ್ತು ಉತ್ತರ ಪ್ರದೇಶದ ಆಗಿನ ಮುಖ್ಯಮಂತ್ರಿ ವೀರಭದ್ರಸಿಂಗ್ ಪರಸ್ಪರ ಮಾತಾಡಿಕೊಂಡು ಬಾಬರಿಮಸೀದಿಯ ಬಾಗಿಲುಗಳನ್ನು ತೆಗೆಸಿದರು. ಸಂಘಪರಿವಾರದ ರಾಮಜನ್ಮಭೂಮಿ ಚಳುವಳಿ ನ್ಯಾಯಬದ್ಧವೆಂದು ಸರಕಾರವೇ ಮನ್ನಿಸಿತು. ಮುಂದೆ ೧೯೮೯ರಲ್ಲಿ ಅಯೋಧ್ಯೆಯಲ್ಲಿ ಹೊಸ ಮಂದಿರ ನಿರ್ಮಾಣದ ಶಿಲಾನ್ಯಾಸ ಕಾರ್ಯಕ್ರಮಕ್ಕೂ ರಾಜೀವ್ ಗಾಂಧಿ ಮತ್ತು ಉತ್ತರ ಪ್ರದೇಶದ ಇನ್ನೊಬ್ಬ ಮುಖ್ಯಮಂತ್ರಿ ಎನ್.ಡಿ. ತಿವಾರಿ ಅನುಮತಿ ಕೊಟ್ಟರು. ಆಗ ದೇಶದಲ್ಲಿ ಲೋಕಸಭಾ ಚುನಾವಣೆಗಳನ್ನು ಘೋಷಿಸಲಾಗಿತ್ತು. ಈ ಕ್ರಮದಿಂದ ಹಿಂದುಗಳ ಮತಗಳನ್ನೆಲ್ಲ ಗುಡಿಸಿಕೊಳ್ಳಬಹುದು ಎಂದು ರಾಜೀವ್‌ಗಾಂಧಿಯವರ ಯೋಚನೆ ಆಗಿತ್ತು.

ಇದರ ಜೊತೆಗೆ ರಾಜೀವ್ ಗಾಂಧಿ ೧೯೮೬ರಲ್ಲಿ ಮುಸ್ಲಿಮ್ ಮತೀಯವಾದಿಗಳನ್ನು ಮೆಚ್ಚಿಸಲು ಮುಸ್ಲಿಮ್ ಮಹಿಳೆಯರ ಮಸೂದೆಯನ್ನು ಪಾರ್ಲಿಮೆಂಟಿನ ಮುಂದೆ ಮಂಡಿಸಿದರು. ಈ ಮಸೂದೆ ಶಾ ಬಾನೂ ಪ್ರಕರಣದಲ್ಲಿ ಸುಪ್ರೀಮ್ ಕೋರ್ಟಿನ ತೀರ್ಪನ್ನು ಅಲ್ಲಗಳೆಯುವಂತಹದ್ದಾಗಿತ್ತು. ಮುಸ್ಲಿಮರಿಗೆ ಭಾರೀ ಸವಲತ್ತು ಕೊಡಲಾಗಿದೆ ಎಂದು ಸಂಘ ಪರಿವಾರ ಪ್ರಚಾರ ನಡೆಸಿತು. ಸಾಮಾನ್ಯ ಮುಸ್ಲಿಮರಿಗೆ ಈ ಮಸೂದೆಯಿಂದ ಆದ ಲಾಭವೇನು ಎಂದು ಅವರು ವಿವರಿಸಲಿಲ್ಲ. ಆದರೆ ಮಧ್ಯಮ ವರ್ಗದ ಹಿಂದುಗಳಿಗೆ ಈ ಪ್ರಚಾರ ನಾಟಿತು. ಶಾ ಬಾನೂ ವಿವಾದದಲ್ಲಿ ಕೋರ್ಟಿನ ತೀರ್ಪು ವಿರುದ್ಧ ನಮ್ಮ ದೊಡ್ಡನಗರಗಳ ಮುಸ್ಲಿಮರು ಒಗ್ಗಟ್ಟಾದ ರೀತಿಯನ್ನು ಕಂಡು ಹಿಂದುಗಳು ಬೆಚ್ಚಿಬಿದ್ದಿದ್ದರು. ಆದರೆ ಸಂಘಪರಿವಾರದ ಹಾಗೆ, ಈ ಮುಸ್ಲಿಮ್ ಮತೀಯವಾದಿಗಳು ಇನ್ನೊಂದು ಧರ್ಮದ ಜನರನ್ನಾಗಲೀ, ದೇವಾಲಯಗಳನ್ನಾಗಲೀ, ತಮ್ಮ ಪ್ರತಿಭಟನೆಯ ಗುರಿಯನ್ನಾಗಿ ಮಾಡಿಕೊಂಡಿರಲಿಲ್ಲ. ಸಂಘಪರಿವಾರದ ಹಾಗೆ ಅವರು ದೇಶದ ಅಧಿಕಾರವನ್ನು ಹಿಡಿಯುವ ರಾಜಕೀಯ ಉದ್ದೇಶವನ್ನು ಹೊಂದಿರಲಿಲ್ಲ. ಮುಸ್ಲಿಮರ ಕೌಟುಂಬಿಕ ಜೀವನಕ್ಕೆ ಸಾಂಪ್ರದಾಯಿಕ ಇಸ್ಲಾಮಿಕ್ ಕಾನೂನು ಮಾತ್ರ ಲಗಾವಾಗಬೇಕು ಎಂದು ಅವರು ಒತ್ತಾಯಿಸಿದ್ದರು. ತಮ್ಮ ಜನ ಶಾಸ್ತ್ರ ಬಿಟ್ಟು ನಡೆಯಬಾರದು ಎನ್ನುವ ಈ ಒತ್ತಾಯ ಮೂಲಭೂತವಾದಿ. ಮತೀಯವಾದ ಅವರ ಪ್ರಧಾನ ಲಕ್ಷಣವಲ್ಲ. ಜೊತೆಗೆ ಈ ದೇಶದಲ್ಲಿ ಮುಸ್ಲಿಮ್

(ಕೊನೆಯ ಪುಟ ನೋಡಿ)

# ಕೊಲೆಸ್ಟರಾಲ್ ಕಾಳಜಿ

ಡಾ|| ಡಿ. ಕೆ. ಮಹಾಬಲ ರಾಜು

ಹೋದವಾರ ಅಮೆರಿಕದ ಗೆಳೆಯ ನಮ್ಮ ಮನೆಯ ಅತಿಥಿಯಾಗಿದ್ದ. ನನ್ನ ಹೆಂಡತಿಯಂತೂ ಬಹಳ ಔದಾರ್ಯದಿಂದ ಬಗೆಬಗೆಯ ಭಕ್ಷ್ಯಗಳನ್ನೇ ತಯಾರಿಸಿ ಬಡಿಸುತ್ತಿದ್ದಳು. ನಮ್ಮ ಸ್ನೇಹಿತ ಊಟಮಾಡುವಾಗ, ತಿಂಡಿ ತಿನ್ನುವಾಗ ಇದನ್ನು ಹೇಗೆ ತಯಾರಿಸುತ್ತೀರಿ, ಇದರಲ್ಲಿ ಕೊಬ್ಬು ಎಷ್ಟಿದೆ, ಕೊಲೆಸ್ಟರಾಲ್ ಎಷ್ಟಿದೆ, ಇಂತಹ ಪ್ರಶ್ನೆಗಳನ್ನು ಕೇಳಿ ಕೇಳಿ ಕಾಡುತ್ತಿದ್ದ. ನನಗಂತೂ ಉತ್ತರ ಹೇಳಿ ಹೇಳಿ ಸಾಕುಸಾಕಾಗಿಹೋಯಿತು.

ಅವನು ಪಿರಿಪಿರಿ ಮಾಡುತ್ತಿದ್ದುದನ್ನು ನೋಡಿ ನನ್ನ ಹೆಂಡತಿ ಮುಸುಮುಸು ನಗುತ್ತಿದ್ದಳು. ''ನೋಡ್ರಿ, ನಾವು ಶ್ಯಾವಿಗೆ ಬಸಿದು ನೀಡಿದರೂ ಅವರಿಗೆ ಉಣ್ಣುವ ಭಾಗ್ಯ ಇಲ್ಲ. ಹುಲ್ಲು ತಿನ್ನೋದೆ ಅವರ ಹಣೆಯಲ್ಲಿ ಬರೆದಿದೆ ಅಂತಾ ಕಾಣುತ್ತೆ'' ಎಂದು ನನ್ನ ಹೆಂಡತಿ ಟೀಕಿಸುತ್ತಿದ್ದಳು. ನಾವು ಕನ್ನಡದಲ್ಲಿ ಮಾತನಾಡುವುದು ಅರ್ಥವಾಗದೆ ನಮ್ಮ ಅತಿಥಿ ಪಿಳಿಪಿಳಿ ಕಣ್ಣು ಬಿಡುತ್ತಿದ್ದ, ಪಾಪ.

''ನೋಡು ಮಿತ್ರ, ನಮ್ಮ ಹಾಗೆ ರೊಟ್ಟಿ, ಮುದ್ದೆ, ಅನ್ನ, ಸೊಪ್ಪು, ತರಕಾರಿ, ಹಣ್ಣು ಇವನ್ನು ಹಿತವಾಗಿ ತಿಂದು, ಮೈ ಬಗ್ಗಿಸಿ ಕಷ್ಟಬಿದ್ದು ಕೆಲಸ ಮಾಡಿಕೊಂಡಿದ್ದರೆ ಎಂಥಾ ಕೊಲೆಸ್ಟರಾಲ್ ಭಯಾನೂ ಇರೋಲ್ಲ'' ಎಂದು ವಿನಯಪೂರ್ವಕವಾಗಿ ನಿವೇದಿಸಿದೆ. ನಾನು ಹೇಳಿದ್ದು ನನ್ನ ಗೆಳೆಯನಿಗೆ ಹಿಡಿಸಿತು.

''ನೀವು ಹೇಳಿದ್ದು ಬಹಳ ಸರಿ. ನಮ್ಮ ದೇಶದಲ್ಲಿ ನೋಡಿ ಚಿಕನ್, ಮಟನ್, ಎಗ್, ಬಟರ್, ಬ್ರೆಡ್, ಚೀಸ್, ಕೇಕ್, ಐಸ್ ಕ್ರೀಂ ಇವನ್ನೇ ಹೆಚ್ಚಾಗಿ ಸೇವಿಸುತ್ತಾರೆ. ದಿನಾಲೂ ಹಬ್ಬ ಮಾಡುತ್ತಾರೆ. ಪ್ರತಿಯೊಬ್ಬರೂ ಏನಿಲ್ಲವೆಂದರೂ ದಿನಾ ಕನಿಷ್ಠ ನಾನೂರು ಮಿಲಿ ಗ್ರಾಂ. ಕೊಲೆಸ್ಟರಾಲ್ ತಿನ್ನುತ್ತಾರೆ. ರಕ್ತದಲ್ಲಿ ಕೊಲೆಸ್ಟರಾಲ್ ಹೆಚ್ಚಾದ್ರೆ ಹೃದಯಾಘಾತ ಆಗುತ್ತೆ ಅಂತ ವೈದ್ಯ ವಿಜ್ಞಾನಿಗಳು ಹೇಳ್ತಾರೆ. ಇದಕ್ಕೇ ಅಂತ ಕಾಣುತ್ತೆ ಅಮೆರಿಕದಲ್ಲಿ ಪ್ರತಿ ವರ್ಷ ಐದು ಲಕ್ಷ ಜನ ಹಾರ್ಟ್ ಅಟ್ಯಾಕ್ ಆಗಿ ಸಾಯ್ತಾರೆ. ಅಲ್ಲಿ ಎಲ್ಲಾ ಕಾಯಿಲೆಗಳಿಂದ ಸಾಯುವವರಿಗಿಂತಾ ಹೃದಯಾಘಾತ ಒಂದರಿಂದಲೇ ಸಾಯುತ್ತಿರುವವರ ಸಂಖ್ಯೆ ಹೆಚ್ಚಾಗಿದೆ. ಆದುದರಿಂದ ಇಡೀ ಅಮೆರಿಕದ ಜನತೆ ಕೊಲೆಸ್ಟರಾಲ್ ಎಂದರೆ ಹೆದರಿ ಕಂಗಾಲಾಗಿಬಿಡುತ್ತಿದೆ. ಇದೇ ಭಯದಿಂದಾಗಿ ಈಗ ಅಲ್ಲಿಯ ಜನ ತಮ್ಮ ಆಹಾರ ಪದ್ಧತಿಯನ್ನು ಬದಲಿಸಿಕೊಳ್ಳುತ್ತಿದ್ದಾರೆ. ಭಾರತೀಯರ ಆಹಾರ ಕ್ರಮಕ್ಕೆ ಮನಸೋತು ಮುಗಿಬಿದ್ದಿದ್ದಾರೆ. ಆದುದರಿಂದ ಈಗ ಅಮೆರಿಕದಲ್ಲಿ ಹೃದಯಾಘಾತಕ್ಕೆ ಬಲಿಯಾಗುವವರ ಸಂಖ್ಯೆ ಸ್ವಲ್ಪಮಟ್ಟಿಗೆ ತಗ್ಗಿದೆ,'' ಎಂದು ಹೇಳಿದ. ಅವನು ನಮ್ಮ ಆಹಾರವನ್ನು ಬಾಯ್ತುಂಬಾ ಹೊಗಳಿದ್ದು ಕೇಳಿ ನನಗೆ ಸಂತೋಷವಾಯಿತು. ನಮ್ಮ ಆಚಾರ-ವಿಚಾರಗಳ ಬಗ್ಗೆ ಬಹಳ ಹೆಮ್ಮೆ ಎನಿಸಿತು.




ಆದರೂ ನಮ್ಮ ನಿಜಸ್ಥಿತಿ ನನಗೆ ಗೊತ್ತಿತ್ತು. ಈಗ ನಾವು ಸಂಸ್ಕೃತಿಯ ಸೋಗಿನಲ್ಲಿ ಪಾಶ್ಚಾತ್ಯ ಪ್ರಭಾವಕ್ಕೆ ವಶವಾಗಿ ಪರಂಪರಾಗತವಾಗಿ ಬಂದಂತಹ ಆಹಾರ ಪದ್ಧತಿ ಬಿಟ್ಟು ಹೆಚ್ಚು ಹೆಚ್ಚು ಅಪಾಯಕಾರಿಯಾದ ಆಹಾರದತ್ತ ವಾಲುತ್ತಿದ್ದೇವೆ. ಹೀಗಾಗಿ ನಮ್ಮಲ್ಲಿಯೂ ಈಗ ಹೃದಯಾಘಾತ ಪ್ರಮಾಣ ಪಿಡುಗಾಗುವಷ್ಟು ಹೆಚ್ಚಾಗುತ್ತಿದೆ. ಮೊದಲೇ ಅಪೌಷ್ಟಿಕತೆ, ಅತಿ ಸಂತಾನ, ಅಂಟುರೋಗಗಳಿಂದ ತತ್ತರಿಸಿರುವ ಭಾರತೀಯನಿಗೆ ಜೀವನಶೈಲಿಯ ಬದಲಾವಣೆಗಳ ಬಳುವಳಿಯಿಂದ ಬಂದಿರುವ ಹೃದಯಾಘಾತದಂತಹ ಹೊಸ ಖಾಯಿಲೆಗಳು ಮತ್ತಷ್ಟು ಹೊರೆಯಾಗಿವೆ.

ಯೋಚಿಸಿ ನೋಡಿದರೆ ಅಮೆರಿಕದ ಗೆಳೆಯನ ಆಹಾರ ಕಾಳಜಿ ಸಮಂಜಸವೆನಿಸುತ್ತದೆ. ಏಕೆಂದರೆ ಆಹಾರಕ್ಕೂ ಆರೋಗ್ಯಕ್ಕೂ ಅವಿನಾ ಸಂಬಂಧವಿದೆ. ನಾವು ಸೇವಿಸುವ ಆಹಾರವು ನಮ್ಮ ರಕ್ತದಲ್ಲಿನ ಕೊಲೆಸ್ಟರಾಲ್ ಪ್ರಮಾಣವನ್ನು ಪ್ರತಿಫಲಿಸಿದರೆ, ನಮ್ಮ ರಕ್ತದಲ್ಲಿನ ಕೊಲೆಸ್ಟರಾಲ್ ಪ್ರಮಾಣವು ಹೃದಯಾಘಾತ ಸಾಧ್ಯತೆಯ ಶಕುನ ನುಡಿಯುತ್ತದೆ; ಆದುದರಿಂದ ನಾವು ಕೊಲೆಸ್ಟರಾಲ್ ಬಗ್ಗೆ ಅನವಶ್ಯಕವಾಗಿ ಭೀತಿ ಬೆಳೆಸಿಕೊಳ್ಳುವ ಬದಲು ದೂರದರ್ಶಿ ವಿವೇಕ ಬೆಳೆಸಿಕೊಳ್ಳುವುದು ಅಗತ್ಯವಾಗಿದೆ.

ಕೊಲೆಸ್ಟರಾಲ್ ಎಂಬುದು ಮೇಣಕ್ಕಿಂತ ಮೃದುವಾದ ಬಿಳಿ ಪದಾರ್ಥ. ನಮ್ಮ ದೇಹದ ಕಣಕಣಗಳಲ್ಲಿ ನಡೆವ ಹಲವಾರು ಭೌತ-ರಾಸಾಯನಿಕ ಕ್ರಿಯೆಗಳಿಗೆ ಕೊಲೆಸ್ಟರಾಲ್ ಅಗತ್ಯ. ಎಂಜೈಮ್, ಹಾರ್ಮೋನ್, ಪಿತ್ತ ಲೈಂಗಿಕ ಹಾರ್ಮೋನ್ ಮುಂತಾದ ಅತ್ಯಮೂಲ್ಯ ಜೀವದ್ರವಗಳ ಉತ್ಪತ್ತಿಗೆ ಕೊಲೆಸ್ಟರಾಲ್ ಆಕರ. ನರಗಳಲ್ಲಿ ಸಂವಹನ ತರಂಗ ಹರಿಯಲು, ಹಾಗೂ ಮಿದುಳಿನ ವಿಷಯ ಗ್ರಹಿಕೆಗೆ ಕೊಲೆಸ್ಟರಾಲ್ ಅತ್ಯಗತ್ಯ. ಇಷ್ಟೆಲ್ಲಾ ಉಪಯುಕ್ತ ಕಾರ್ಯವೆಸಗುವ ಕೊಲೆಸ್ಟರಾಲ್ ಪ್ರಮಾಣ ಇತಿ-ಮಿತಿಯಲ್ಲಿದ್ದರೆ ದೇಹಕ್ಕೆ ಆರೋಗ್ಯ. ಅಳತೆ ಮೀರಿದರೆ ಆಪತ್ತು.

ದೇಹಕ್ಕೆ ಸಾಕಾಗುವಷ್ಟು ಕೊಲೆಸ್ಟರಾಲ್ ತಯಾರಿಸುವ ಸಾಮರ್ಥ್ಯ ಯಕೃತ್ (ಲಿವರ್)ಗೆ ಇದೆ. ಆದುದರಿಂದ ನಾವು ಆಹಾರದಿಂದ ಕೊಲೆಸ್ಟರಾಲ್ ಪಡೆವ ಅಗತ್ಯ ಅತ್ಯಲ್ಪ. ಸಸ್ಯಜನ್ಯ ಆಹಾರದಲ್ಲಂತೂ ಕೊಲೆಸ್ಟರಾಲ್ ಇರುವುದಿಲ್ಲ. ಹಾಲು, ಮೊಟ್ಟೆ, ಮಾಂಸ, ಮೀನು ಮುಂತಾದ ಪ್ರಾಣಿಜನ್ಯ ಪದಾರ್ಥಗಳಲ್ಲಿ ಕೊಲೆಸ್ಟರಾಲ್ ಯಥೇಚ್ಛವಾಗಿದೆ. ನಾವು ಹೆಚ್ಚು ಕೊಲೆಸ್ಟರಾಲ್ ಸೇವಿಸಿದರೂ, ಕರುಳು ಅದರ ಅರ್ಧಕ್ಕಿಂತ ಕಡಿಮೆಯಷ್ಟನ್ನು ಮಾತ್ರ ಹೀರಿಕೊಳ್ಳುತ್ತದೆ. ನಾವು ಸೇವಿಸುವ ಪ್ರಾಣಿಜನ್ಯ ಕೊಬ್ಬು (ಬೆಣ್ಣೆ-ತುಪ್ಪ) ಮಾತ್ರ ಯಕೃತ್‌ನಲ್ಲಿ ಕೊಲೆಸ್ಟರಾಲ್ ಉತ್ಪತ್ತಿಯನ್ನು ಚುರುಕುಗೊಳಿಸುತ್ತದೆ.

ಒಟ್ಟಾರೆ ನೋಡಿದಾಗ, ಪ್ರಾಣಿಜನ್ಯ ಆಹಾರವನ್ನು ಹೆಚ್ಚಾಗಿ ಸೇವಿಸುವುದರಿಂದ, ಇಲ್ಲವೇ ಪ್ರಾಣಿಜನ್ಯ ಕೊಬ್ಬನ್ನೇ ಹೆಚ್ಚಾಗಿ ಬಳಸುವುದರಿಂದ ನಮ್ಮ ರಕ್ತದಲ್ಲಿ ಕೊಲೆಸ್ಟರಾಲ್ ಪ್ರಮಾಣ ಮಿತಿ ಮೀರಿ ಹೆಚ್ಚಬಹುದು. ಧೂಮಪಾನ, ಮಿತಿಮೀರಿದ ಮದ್ಯಪಾನ, ಚಟುವಟಿಕೆ ರಹಿತ ಜೀವನ, ಮಾನಸಿಕ ಒತ್ತಡ ಇವುಗಳಿಂದಲೂ ರಕ್ತದಲ್ಲಿನ ಕೊಲೆಸ್ಟರಾಲ್ ಪ್ರಮಾಣ ಹೆಚ್ಚುವುದೆಂದು ತಿಳಿದುಬಂದಿದೆ.

ಹೃದಯಾಘಾತದ ಖಳನಾಯಕನಾದ ಕೊಲೆಸ್ಟರಾಲ್ ಪ್ರಮಾಣ ರಕ್ತದಲ್ಲಿ ಅಧಿಕಗೊಂಡರೆ, ಅದು ರಕ್ತನಾಳದ ಒಳಗೋಡೆಗಳಿಗೆ ಮುಸುರಿಕೊಳ್ಳುತ್ತಾ ಹೋಗುತ್ತದೆ.

ಇದರಿಂದಾಗಿ ರಕ್ತನಾಳಗಳು ತಮ್ಮ ಮೃದುತ್ವವನ್ನು ಕಳೆದುಕೊಂಡು ಗಡುಸಾಗುತ್ತವೆ. ರಕ್ತನಾಳದೊಳಗೋಡೆಗೆ ಕೊಲೆಸ್ಟರಾಲ್ ಮೆತ್ತಿಕೊಳ್ಳುವುದು ಮುಂದುವರೆದರೆ ರಕ್ತನಾಳದಲ್ಲಿ ರಕ್ತಹರಿವ ಹಾದಿಯೇ ಮುಚ್ಚಿಕೊಳ್ಳುತ್ತದೆ. ಹೃದಯಕ್ಕೆ ರಕ್ತಪೂರೈಸುವ ಕರೋನರಿ ರಕ್ತನಾಳದಲ್ಲಿ ಹೀಗಾದಾಗ ಹೃದಯಾಘಾತ ಉಂಟಾಗುತ್ತದೆ. ಮೆದುಳಿಗೆ ರಕ್ತ ಪೂರೈಸುವ ರಕ್ತನಾಳಗಳು ಕಟ್ಟಿಕೊಂಡಾಗ ಲಕ್ವ ಪ್ರಾಪ್ತವಾಗುತ್ತದೆ.

ಆರೋಗ್ಯವಂತರಾಗಿರಲು ನಮ್ಮ ಪ್ರತಿ ಮಿಲಿ. ಲೀಟರ್ ರಕ್ತದಲ್ಲಿ ೧೫೦ ಮಿ. ಗ್ರಾಂ. ಕೊಲೆಸ್ಟರಾಲ್ ಇರತಕ್ಕದ್ದು. ಇದು ೨೦೦ ಮಿ. ಗ್ರಾಂ. ಮೀರಿದರೆ ಹೃದಯಾಘಾತದ ಅಪಾಯ ಉಂಟು. ಹೃದಯಾಘಾತ ಅಪರೂಪವಾಗಿರುವ ಜಪಾನ್ ದೇಶದ ಜನರ ರಕ್ತದಲ್ಲಿ ಕೊಲೆಸ್ಟರಾಲ್ ಪ್ರಮಾಣ (ಸರಾಸರಿ) ೧೫೦ ಮಿ. ಗ್ರಾಂ. ಇದೆ. ಹೃದಯಾಘಾತಕ್ಕೆ ಹೆಚ್ಚಾಗಿ ಬಲಿಯಾಗುತ್ತಿರುವ ಅಮೆರಿಕನ್ನರ ರಕ್ತದಲ್ಲಿ ಕೊಲೆಸ್ಟರಾಲ್ ಪ್ರಮಾಣ ೩೦೦ ಮಿ. ಗ್ರಾಂ.ಗಳಿಗಿಂತ ಹೆಚ್ಚಾಗಿದೆ. ಇದು ಅಧ್ಯಯನ ಗಳಿಂದ ತಿಳಿದುಬಂದಿರುವ ಸತ್ಯ.

ರಕ್ತಪ್ರವಾಹದಲ್ಲಿ ಕೊಲೆಸ್ಟರಾಲ್ ಕೊಬ್ಬು ಮತ್ತು ಪ್ರೋಟೀನ್ (ಲೈಪೋಪ್ರೋಟೀನ್) ಮಿಶ್ರಣದೊಂದಿಗೆ ಬೆರೆತಿರುತ್ತದೆ. ಕೊಲೆಸ್ಟರಾಲ್‌ನ ಕೆಲವಂಶ ಅಲ್ಪಸಾಂದ್ರತೆಯ ಲೈಪೋಪ್ರೋಟೀನ್‌ನೊಂದಿಗೆ ಬೆರೆತಿರುತ್ತದೆ. ಇದೇ ಎಲ್.ಡಿ.ಎಲ್. ಅತ್ಯಂತ ಅಪಾಯಕಾರಿಯಾದ ಕೊಲೆಸ್ಟರಾಲ್ ಎಂದರೆ ಇದು. ಇದಕ್ಕೆ ರಕ್ತನಾಳಕ್ಕೆ ಗಟ್ಟಿಯಾಗಿ ಅಂಟಿ ಮೆತ್ತಿಕೊಳ್ಳುವ ಗುಣವುಂಟು. ಪ್ರಾಣಿಜನ್ಯ ಕೊಬ್ಬು ನಮ್ಮ ರಕ್ತದಲ್ಲಿ ಈ ಕೆಟ್ಟ ಕೊಲೆಸ್ಟರಾಲ್ (ಎಲ್.ಡಿ.ಎಲ್) ಪ್ರಮಾಣವನ್ನು ಹೆಚ್ಚಿಸುತ್ತದೆ. ಅತ್ಯಧಿಕ ಸಾಂದ್ರತೆಯ ಲೈಪೋಪ್ರೋಟೀನ್ ಜೊತೆ ಮಿಳಿತಗೊಂಡ ಕೊಲೆಸ್ಟರಾಲ್‌ಗೆ ಎಚ್.ಡಿ.ಎಲ್. ಕೊಲೆಸ್ಟರಾಲ್ ಎನ್ನುತ್ತಾರೆ. ಸಸ್ಯಜನ್ಯ ಕೊಬ್ಬು, ಅದರಲ್ಲೂ ವಿಶೇಷವಾಗಿ ಪೂಫ್ (ಅಸಂತೃಪ್ತ ಕೊಬ್ಬಿನ ಆಮ್ಲ) ಹೆಚ್ಚಾಗಿರುವ ಕೊಬ್ಬು ರಕ್ತದ ಎಚ್.ಡಿ.ಎಲ್. ಕೊಲೆಸ್ಟರಾಲ್ ಪ್ರಮಾಣವನ್ನು ಹೆಚ್ಚಿಸುತ್ತದೆ. ರಕ್ತನಾಳಕ್ಕೆ ಮೆತ್ತಿಕೊಂಡ ಕೊಲೆಸ್ಟರಾಲನ್ನು ಕಿತ್ತೆಸೆದು ಹೃದಯಾಘಾತದಿಂದ ರಕ್ಷಿಸುವ ಗುಣವಿರುವ ಎಚ್. ಡಿ. ಎಲ್. ಕೊಲೆಸ್ಟರಾಲನ್ನು ಒಳ್ಳೆಯ ಕೊಲೆಸ್ಟರಾಲ್ ಎನ್ನಲಾಗಿದೆ.

ಒಟ್ಟಿನಲ್ಲಿ ನಮ್ಮ ರಕ್ತದಲ್ಲಿ ಎಚ್.ಡಿ.ಎಲ್. ಮತ್ತು ಎಲ್.ಡಿ.ಎಲ್. ಎಂಬ ಎರಡು ಬಗೆಯ ಕೊಲೆಸ್ಟರಾಲ್ ಇದ್ದು ಇವೆರಡೂ ಒಂದಕ್ಕೊಂದು ವಿರುದ್ಧವಾದ ಕಾರ್ಯ ನಿರ್ವಹಿಸುತ್ತಿವೆ. ನಮ್ಮ ರಕ್ತದಲ್ಲಿ ಎಚ್.ಡಿ.ಎಲ್. ಮತ್ತು ಎಲ್.ಡಿ.ಎಲ್.ಗಳ ಅನುಪಾತ ಸರಿಪ್ರಮಾಣದಲ್ಲಿ ಇರುವುದು ಆರೋಗ್ಯಕರ.

**ಆರೋಗ್ಯವಂತನ ರಕ್ತದಲ್ಲಿ ಕೊಲೆಸ್ಟರಾಲ್**

| | ಆರೋಗ್ಯಕರ ಮಿತಿ |
|---|---|
| ಕೊಲೆಸ್ಟರಾಲ್ | ೧೪೦ - ೨೦೦ ಮಿ. ಗ್ರಾಂ. |
| ಎಚ್.ಡಿ.ಎಲ್. ಕೊಲೆಸ್ಟರಾಲ್ | ೩೦-೭೦ ಮಿ. ಗ್ರಾಂ. |
| ಎಲ್.ಡಿ.ಎಲ್. ಕೊಲೆಸ್ಟರಾಲ್ | ೧೧೦-೧೫೦ ಮಿ. ಗ್ರಾಂ. |

ನಿಮ್ಮ ವಯಸ್ಸು ಮೂವತ್ತೈದು ಮೀರಿದ್ದರೆ ಒಮ್ಮೆ ರಕ್ತದ ಕೊಲೆಸ್ಟರಾಲನ್ನು ಪರೀಕ್ಷಿಸಿಕೊಳ್ಳಿ. ಫಲಿತಾಂಶ ತೃಪ್ತಿಕರವಾಗಿದ್ದರೆ ಇದನ್ನೇ ಕಾಯ್ದಿಟ್ಟುಕೊಳ್ಳಲು ಯತ್ನಿಸಬೇಕು. ಕೊಲೆಸ್ಟರಾಲ್ ಪ್ರಮಾಣಗಳು ಹೆಚ್ಚಾಗಿದ್ದರೆ ಅದನ್ನು ಹದ್ದುಬಸ್ತಿಗೆ ತರಲು ಶ್ರಮಿಸಬೇಕು. ಆರೋಗ್ಯಕರ ಜೀವನ ಕ್ರಮವನ್ನು ರೂಢಿಸಿಕೊಳ್ಳುವುದರಿಂದ ಕೊಲೆಸ್ಟರಾಲ್ ತೊಂದರೆಗಳಿಗೆ ಹರ್ಷದಾಯಕ ವಿದಾಯ ಕೋರಬಹುದು. ಇಂತಹ ಕ್ರಮಗಳೆಂದರೆ :

- ಕೊಬ್ಬನ್ನು ಮಿತವಾಗಿ ಸೇವಿಸುವುದು (ದಿನಕ್ಕೆ ೧೫ ಗ್ರಾಂ.)
- ಕೊಲೆಸ್ಟರಾಲ್ ಅಧಿಕವಾಗಿರುವ ಪದಾರ್ಥಗಳನ್ನು ವರ್ಜಿಸುವುದು.
- ಪ್ರಾಣಿಜನ್ಯ ಕೊಬ್ಬಿನ (ಬೆಣ್ಣೆ-ತುಪ್ಪ) ಬದಲಿಗೆ ಸಸ್ಯಜನ್ಯ ಕೊಬ್ಬನ್ನು ಬಳಸುವುದು.
- ಪೂಫ ಅಧಿಕವಾಗಿರುವ ಸಸ್ಯಜನ್ಯ/ಎಣ್ಣೆಯನ್ನು ಆಯ್ದುಕೊಳ್ಳುವುದು.
- ನಾರು-ಹೊಟ್ಟುಗಳನ್ನು ಒಳಗೊಂಡ ನೈಸರ್ಗಿಕ ಆಹಾರವನ್ನು ಹೆಚ್ಚಾಗಿ ಸೇವಿಸುವುದು.
- ಧೂಮಪಾನ, ಅತಿಯಾದ ಮದ್ಯಪಾನ, ಗುಟ್ಕಾ ಚಟ ಬಿಟ್ಟುಬಿಡುವುದು.
- ಓಡಾಟ, ವ್ಯಾಯಾಮ, ಕ್ರೀಡೆ, ಕೆಲಸಗಳಲ್ಲಿ ತೊಡಗುವುದು.
- ಮಾನಸಿಕ ಒತ್ತಡದಿಂದ ಮುಕ್ತರಾಗುವುದು.

ಶೇಕಡ ೯೯.೫ ಜನರಲ್ಲಿ ಕೊಲೆಸ್ಟರಾಲ್ ಪ್ರಮಾಣ ಹೆಚ್ಚುವುದಕ್ಕೆ ಅವರ ಆಹಾರ ಮತ್ತು ಜೀವನ ಶೈಲಿಯೇ ಕಾರಣವಾಗಿರುತ್ತದೆ. ಇದನ್ನು ಬದಲಿಸಿಕೊಂಡರೆ ಕೊಲೆಸ್ಟರಾಲ್ ಪ್ರಮಾಣ ಹಿಡಿತದಲ್ಲಿರುತ್ತದೆ. ರಕ್ತದಲ್ಲಿ ಹೆಚ್ಚಿರುವ ಕೊಲೆಸ್ಟರಾಲ್ ತಗ್ಗಿಸುವ ಔಷಧಿಗಳೂ ಇವೆ. ಆದಾಗ್ಯೂ ಕೊಲೆಸ್ಟರಾಲನ್ನು ಸರಿಪ್ರಮಾಣದಲ್ಲಿರಿಸಿ ಕೊಳ್ಳಲು ಔಷಧಿಗಳಿಗಿಂತ ಆಹಾರ, ಜೀವನ ಕ್ರಮಗಳೇ ಹಿರಿಯ ಮದ್ದು.

ಯಕೃತ್ ರೋಗಗ್ರಸ್ಥವಾದರೆ ಅದು ಅಳತೆ ಮೀರಿದಷ್ಟು ಪ್ರಮಾಣದ ಕೊಲೆಸ್ಟರಾಲ್ ಉತ್ಪಾದಿಸಬಹುದು. ಹೀಗಾಗಿ ಯಕೃತ್‌ನ ಆರೋಗ್ಯಕ್ಕೆ ವಿಶೇಷ ಗಮನ ಹರಿಸಬೇಕು. ವಿಸ್ಮಯವೆನಿಸಿದರೂ, ಅತ್ಯಂತ ಅಪರೂಪವಾಗಿ, ಯಕೃತ್ ಯಥೇಚ್ಛ ಪ್ರಮಾಣದಲ್ಲಿ ಕೊಲೆಸ್ಟರಾಲ್ ಉತ್ಪಾದಿಸುವ ಪ್ರವೃತ್ತಿ ಆನುವಂಶಿಕವಾಗಿ ಬಂದಿರುತ್ತದೆ.

ಮೀನಿನಲ್ಲಿನ ಒಮೇಗ-೬ ಅಂಶ, ಹಾಗೂ ಕಡ್ಲೆಬೇಳೆ, ಹೆಸರುಬೇಳೆ, ಬೀನ್ಸ್, ಬಾರ್ಲಿ, ಕ್ಯಾರೆಟ್, ಸೇಬು, ಬದನೆ, ಬೆಳ್ಳುಳ್ಳಿ, ನೀರುಳ್ಳಿ, ಧಾನ್ಯಗಳ ಹೊಟ್ಟು, ಇವೆಲ್ಲಾ ರಕ್ತದ ಕೊಲೆಸ್ಟರಾಲನ್ನು ಕಡಿಮೆ ಮಾಡಬಲ್ಲವು. ಯೋಗಾಸನ ಹಾಗೂ ಪ್ರಾಣಾಯಾಮಗಳಿಂದಲೂ ರಕ್ತದ ಕೊಲೆಸ್ಟರಾಲ್ ಪ್ರಮಾಣ ನಿಯಂತ್ರಣದಲ್ಲಿರುತ್ತದೆ ಎಂದು ತಿಳಿದುಬಂದಿದೆ.

**ಆಹಾರ ಪದಾರ್ಥಗಳಲ್ಲಿ ಕೊಲೆಸ್ಟರಾಲ್**

| ಆಹಾರ | ಪ್ರಮಾಣ | ಕೊಲೆಸ್ಟರಾಲ್ (ಮಿ.ಗ್ರಾಂ.) |
|---|---|---|
| ಹಾಲು | ೨೦೦ ಮಿ.ಗ್ರಾಂ. | ೨೮ |
| ಮೊಟ್ಟೆ | ೬೦ ಗ್ರಾಂ.(೧) | ೨೪೮ |
| ಮಟನ್ | ೧೦೦ ಗ್ರಾಂ. | ೪೨೫ |
| ಮೀನು | ೧೦೦ ಗ್ರಾಂ. | ೫೦೦ |
| ಲಿವರ್ | ೧೦೦ ಗ್ರಾಂ. | ೪೪೦ |
| ಮೆದುಳು | ೧೦೦ ಗ್ರಾಂ. | ೨೨೦೦ |
| ಮೂತ್ರಪಿಂಡ | ೧೦೦ ಗ್ರಾಂ. | ೭೦೦ |
| ಕೇಕ್ | ೪೦ ಗ್ರಾಂ. | ೩೦ |
| ಐಸ್ ಕ್ರೀಂ | ೧೦೦ ಗ್ರಾಂ. | ೪೫ |
| ಬೆಣ್ಣೆ | ೧೫ ಗ್ರಾಂ. | ೪೫ |
| ಬೆಣ್ಣೆ ದೋಸೆ | ೧ | ೪೫ |

**ಎಣ್ಣೆಗಳಲ್ಲಿ ಪಿ.ಯು.ಎಫ್.ಎ. ಶೇಕಡ**

| | | | |
|---|---|---|---|
| ೧.ಕುಸುಬೆ | ೭೫ | ೬.ಶೇಂಗಾಎಣ್ಣೆ | ೩೧ |
| ೨.ಸೂರ್ಯಕಾಂತಿ | ೬೫ | ೭.ಪಾಮ್ | ೧೦ |
| ೩.ಮೆಕ್ಕೆಜೋಳ | ೬೫ | ೮.ಬೆಣ್ಣೆ-ತುಪ್ಪ | ೦ |
| ೪. ಸೋಯಾ | ೬೨ | ೯.ಕೊಬ್ಬರಿ ಎಣ್ಣೆ | ೦.೨ |
| ೫.ಹತ್ತಿಬೀಜ | ೫೦ | | |

ಡಾ|| ಡಿ. ಕೆ. ಮಹಾಬಲ ರಾಜು, ಎಂ. ಡಿ.
ಪ್ರಾಧ್ಯಾಪಕ, ಸಮುದಾಯ ಆರೋಗ್ಯ ವಿಭಾಗ, ಜೆ.ಜೆ.ಎಂ. ಮೆಡಿಕಲ್ ಕಾಲೇಜು, ದಾವಣಗೆರೆ - ೪.

## ಬಹುಮೂತ್ರ ರೋಗಿಗಳಿಗೆ ಸಿಹಿ ಸುದ್ದಿ

ಬಹುಮೂತ್ರ ರೋಗಿಗಳು ಅಥವಾ ಸಕ್ಕರೆ ಖಾಯಿಲೆ ಇರುವ ರೋಗಿಗಳು ಪ್ರತಿದಿನ ಇನ್‌ಸುಲಿನ್ ಚುಚ್ಚುಮದ್ದು ತೆಗೆದು ಕೊಳ್ಳುತ್ತಿರುವುದು ಸಾಮಾನ್ಯವಾಗಿದೆ. ಆ ಕ್ರಿಯೆ ಮಾನಸಿಕವಾಗಿ ತ್ರಾಸದಾಯಕವೂ ಹೌದು. ಅಮೆರಿಕದಲ್ಲಿರುವ ಮೆರ್ಕ್ ಸಂಶೋಧನಾ ಪ್ರಯೋಗಾಲಯದವರು ಆಫ್ರಿಕಾದಲ್ಲಿ ಬೆಳೆಯುವ ಬೂಷ್ಟು, ಇನ್‌ಸುಲಿನ್ ಚುಚ್ಚುಮದ್ದಿನ ಪರಿಣಾಮವನ್ನು ಅನುಕರಿಸುವುದೆಂಬುದಾಗಿ ಕಂಡುಹಿಡಿದಿದ್ದಾರೆ. ಹಾಗಾಗಿ ಆ ಬೂಷ್ಟನ್ನು ಇತರ ರಾಸಾಯನಿಕಗಳ ಜೊತೆ ಸಂಯೋಜಿಸಿ, ಸಂಯುಕ್ತ ವಸ್ತುವೊಂದನ್ನು ಗುಳಿಗೆಯ ರೂಪದಲ್ಲಿ ತಯಾರಿಸಿದ್ದಾರೆ. ಹಾಗಾಗಿ ರೋಗಿಗಳು ಚುಚ್ಚುಮದ್ದಿನ ಬದಲಾಗಿ ಆ ಗುಳಿಗೆಗಳನ್ನು ಸೇವಿಸಬಹುದಾಗಿದೆ. ಈ ಗುಳಿಗೆಗಳು ಈಗಾಗಲೇ ಮಾಡ್ರಿಡ್ (ಸ್ಪೇನ್) ಮತ್ತು ಸ್ಟಾಕ್‌ಹೋಮ್ ಸ್ವೀಡನ್‌ಗಳಲ್ಲಿ ಯಶಸ್ವೀ ಪ್ರಯೋಗಕ್ಕೆ ಒಳಗಾಗಿವೆ.

*- ಕೈವಾರ ಗೋಪಿನಾಥ್*

# ಆಗಸದಲ್ಲೊಂದು ರಂಗಭೂಮಿ

ಡಾ|| ಬಿ. ಎಸ್. ಶೈಲಜಾ

ಸಂಜೆಯ ಕತ್ತಲು ಕವಿಯುತ್ತಿದ್ದಂತೆಯೇ ನೆತ್ತಿಯ ಸಮೀಪ ಕಾಣುವ ಗುರುಗ್ರಹ ದರ್ಬಾರ್ ಹಾಲ್‌ನಲ್ಲಿ ಕುಳಿತ ಮಹಾರಾಜನಂತೆ ಕಂಗೊಳಿಸುತ್ತದೆ. ಸ್ವಲ್ಪ ಆಚೀಚೆ ದೃಷ್ಟಿ ಹರಿಸಿ. ಗ್ರೀಕ್ ರಂಗನಾಟಕದ ಪಾತ್ರಧಾರಿಗಳೆಲ್ಲ ಸಜ್ಜಾಗಿ ನಿಂತಿದ್ದಾರೆ - ಉತ್ತರದಲ್ಲಿ, ಅವುಗಳ ನಡುವೆ ಎದ್ದು ಕಾಣುವುದೊಂದು ಚಿಟ್ಟೆ, ಚಿಟ್ಟೆಯ ಆಕಾರವನ್ನು ಸುಲಭವಾಗಿ ಊಹಿಸಿಕೊಳ್ಳಬಹುದಾದ ಈ ನಕ್ಷತ್ರ ಪುಂಜ ಕಾಸಿಯೋಪಿಯ. ಇಂಗ್ಲೀಷ್ ವರ್ಣಮಾಲೆಯ M ಆಕಾರದಿಂದ W ಆಕಾರಕ್ಕೆ ಇದು ಬದಲಿಸುವ ಚಮಾತ್ಕಾರವೇ ಭೂಮಿಯ ಆವರ್ತನೆಗೆ ಸಾಕ್ಷಿ. ಗ್ರೀಕ್ ಪೌರಾಣಿಕ ಕಥೆಯಲ್ಲಿ ಕಾಸಿಯೋಪಿಯ ಎಂಬಾಕೆ ಗರ್ವಿಷ್ಠ ಮಹಾರಾಣಿ; ಆಕೆಯ ಗರ್ವ ನಿರ್ಮೂಲನಕ್ಕೆಂದೇ ಇತ್ತ ಶಾಪದ ಕಾರಣ ಧ್ರುವನಕ್ಷತ್ರವನ್ನೇ ಸುತ್ತುತ್ತಿರು ಎಂಬ ಶಾಪಕ್ಕೆ ತುತ್ತಾದವಳು. (ಪಾಪ! ಅವಳೊಡನೆ ಪತಿ, ಮಗಳು, ಅಳಿಯ ಎಲ್ಲರೂ ಶಾಪ ಹಂಚಿಕೊಳ್ಳಬೇಕಾಯಿತು!) ಅದರ ಪಶ್ಚಿಮಕ್ಕೆ ಸಿಫಿಯುಸ್ ಮಹಾರಾಜ; ಪೂರ್ವಕ್ಕೆ ರಾಜಕುಮಾರಿ ಆಂಡ್ರೊಮಿಡಾ; ಅದರೊಡನೆಯೇ ಮಹಾವೀರ ಪರ್ಸಿಯುಸ್, ಈ ರಾಜಕುಮಾರಿಯನ್ನು ನುಂಗಲು ಬಂದ ಸಮುದ್ರ ದೈತ್ಯ ಸೆಟಸ್. ಇದನ್ನು ಕೊಂದು ರಾಜಕುಮಾರಿಯ ಕೈಹಿಡಿದವ ಪರ್ಸಿಯುಸ್. ಹಾರುವ ಕುದುರೆ ಪೆಗಸಸ್ ಆತನ ವಾಹನ.

ಕಥೆ ಹಾಗಿರಲಿ. ಸಪ್ತರ್ಷಿಮಂಡಲ ಇಲ್ಲದಾಗ ಕಾಸಿಯೋಪಿಯದ ಸಹಾಯದಿಂದ ಧ್ರುವನಕ್ಷತ್ರವನ್ನು ಗುರುತಿಸಲು ಪ್ರಯತ್ನಿಸಬಹುದು. ಇದು ಚಿಟ್ಟೆಯ ಆಕಾರ ಪಡೆದದ್ದು ಇತ್ತೀಚೆಗೆ (!). ೭೫೦೦೦ ವರ್ಷಗಳಿಂದ ಈ ಆಕಾರ ಬದಲಿಸುತ್ತಾ ಬಂದು ರೂಪಾಂತರಗೊಂಡ ಬಗೆಯನ್ನು ಲೆಕ್ಕಹಾಕಿ ತಿಳಿಯಬಹುದು.

ಮಕರರಾಶಿ ಪಶ್ಚಿಮದಂಚಿನಲ್ಲಿ ಮುಳುಗುತ್ತಿರುವ ಹಾಗೆಯೇ ಪೂರ್ವದಲ್ಲಿ ಮಿಥುನರಾಶಿ ಉದಯಿಸುತ್ತಿರುವುದನ್ನು ಕಾಣಬಹುದು. ಪೂರ್ವದಿಕ್ಕಿಗೆ ತಿರುಗಿ ದೊಡನೆಯೇ ಆಕರ್ಷಿಸುವ ಇನ್ನೊಂದು ಪ್ರಕಾಶಮಾನ ನಕ್ಷತ್ರಪುಂಜ ಒರೈಯನ್. ಅದರಿಂದ ಸ್ವಲ್ಪ ಮೇಲೆ ವೃಷಭ, ಕೃತ್ತಿಕಾ ಇವು ಕಾಣುತ್ತವೆ.







ತಿಂಗಳ ಮೊದಲ ವಾರದಲ್ಲಿ ಚಂದ್ರ ಬೆಳಗಿನ ಹೊತ್ತು ಕಾಣುತ್ತದೆ. ಮೂರನೆಯ ತಾರೀಖು ಶುಕ್ರ ಗ್ರಹದೊಡನೆ ಕಾಣುತ್ತದೆ. ೬ರಂದು ಬುಧಗ್ರಹದ ಸಮೀಪ ಇರುವುದಾದರೂ ಕಾಣುವುದು ದುರ್ಲಭ. ೮ರಂದು ಬೆಳಗಿನ ೪ ಗಂಟೆ ೨ ನಿಮಿಷಕ್ಕೆ ಅಮಾವಾಸ್ಯೆ. ೧೧ರಂದು ನೆಪ್ಚೂನ್ ಅನ್ನು ಚಂದ್ರ ಮರೆಮಾಡುವುದರಿಂದ ನೆಪ್ಚೂನ್ ಹುಡುಕಲು ಅವಕಾಶವಿದೆ. ಈ ಘಟನೆ ಮಧ್ಯರಾತ್ರಿಗೆ ನಡೆಯಲಿದ್ದು ಅಷ್ಟು ಹೊತ್ತಿಗೆ ನಮ್ಮ ದಿಗಂತದಿಂದ ಇವೆರಡೂ ಕಾಯಗಳು ಮರೆಯಾಗಿರುತ್ತವೆ. ಆದರೆ ಚಂದ್ರ ಮುಳುಗುವ ಮುನ್ನ ಅದರ ಪೂರ್ವದಂಚಿನಲ್ಲಿ ಕಾಣುವ ಚುಕ್ಕೆಯೇ ನೆಪ್ಚೂನ್. ದುರ್ಬೀನಿನಿಂದ, ಸಣ್ಣ ದೂರ ದರ್ಶಕದಿಂದ ಇದನ್ನು ಗುರುತಿಸ ಬಹುದು.

ಕಾಸಿಯೋಪಿಯಾ? ಬಣ್ಣದ ಚಿಟ್ಟೆ?



೧೨ನೇ ತಾರೀಖು ಚಂದ್ರ ಮಂಗಳ ಗ್ರಹವನ್ನೇ ಆಚ್ಛಾದಿಸುವ ಸಂದರ್ಭ ಇದೆ. ಇದೂ ಸಹ ಚಂದ್ರ ಮುಳುಗಿದ ಮೇಲೆ ನಡೆಯುವ ಘಟನೆ. ಆದರೆ ಚಂದ್ರ ಮತ್ತು ಮಂಗಳ ಎರಡನ್ನೂ ಒಟ್ಟಿಗೇ ಛಾಯಾ ಗ್ರಹಿಸಲು ಇದು ಸದವಕಾಶ. ಮುಳುಗುತ್ತಿರುವ ಕೆಂಪು ಚಂದ್ರ, ಅದರ ಅಂಚಿನಲ್ಲಿ ಬೊಟ್ಟಿನಂತೆ ಕಾಣುವ ಮಂಗಳ ಬರಿಗಣ್ಣಿಗೂ ರಮಣೀಯ ದೃಶ್ಯವೇ.

ಮಂಗಳ ಮತ್ತು ಯುರೇನಸ್ ಸಮೀಪವೇ ಇರುವುದರಿಂದ ನಾವು ಛಾಯಾಚಿತ್ರದಲ್ಲಿ ಯುರೇನಸ್ ಅನ್ನೂ ಗುರುತಿಸಬಹುದು. ಚಂದ್ರ ಯುರೇನಸ್‌ನನ್ನೂ ಆಚ್ಛಾದಿಸಿ ಮರೆಮಾಡುವ ದೃಶ್ಯ ದಕ್ಷಿಣ ಅಮೆರಿಕದವರಿಗೆ ಲಭ್ಯವಿದೆ. ಹದಿನಾಲ್ಕರಂದು ಮಂಗಳ ಮತ್ತು ಯುರೇನಸ್ ೧೨ ಆರ್ಕ್‌ಮಿನಿಟ್ ಅಂತರದಲ್ಲಿ ಕಾಣುವುವು (೧ ಡಿಗ್ರಿಗೆ ೬೦ ಆರ್ಕ್‌ಮಿನಿಟ್).

ಚಂದ್ರ ೧೮ರಂದು ಗುರುಗ್ರಹದ ಸಮೀಪ, ೧೯ರಂದು ಶನಿಗ್ರಹದ ಸಮೀಪ ಕಾಣುವ ದೃಶ್ಯಗಳೂ ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ.

ಡಿಸೆಂಬರ್ ೨೧ರಂದು ಚಂದ್ರನ ಸಮೀಪ ಕಾಣುವ ಕೆಂಪು ನಕ್ಷತ್ರವೇ ರೋಹಿಣಿ. ಪ್ರಕಾಶಮಾನವಾದ ಚಂದ್ರನ ಬೆಳಕಿದ್ದರೂ ಅದರ ಪಕ್ಕದಲ್ಲಿ ಮಂಕಾಗಿ ಪ್ರಕಾಶಿಸುವ ನಕ್ಷತ್ರಗುಚ್ಛವೇ ಕೃತ್ತಿಕಾ - ಪ್ಲೈಯಡಿಸ್.

ಡಿಸೆಂಬರ್ ೨೨ರಂದು ಹುಣ್ಣಿಮೆ - ರಾತ್ರಿ ೧೧ ಗಂಟೆ ೧ ನಿಮಿಷಕ್ಕೆ. ಅಂದು ಅದರ ಸಮೀಪವೇ ಕಾಣುವ ಒರೈಯನ್ (ಮಹಾವ್ಯಾಧ) ನಕ್ಷತ್ರ ಪುಂಜದ ಬೀಟಲ್‌ಜ್ಯೂಸ್ ಎಂಬ ನಕ್ಷತ್ರವೇ ಆರಿದ್ರಾ. ಇದರ ಪಕ್ಕದ ಕ್ಷೀಣ ನಕ್ಷತ್ರವೇ ಮೃಗಶಿರಾ. ಈ ಕಾರಣ ಈ ತಿಂಗಳ ಹೆಸರು ಮಾರ್ಗಶಿರ.

*(೫೩ನೇ ಪುಟ ನೋಡಿ)*

# ಕರ್ನಾಟಕ ಸಂಗೀತ ಎತ್ತ ಸಾಗುತ್ತಿದೆ?

**ಶಾಂತಾ ನಾಗರಾಜ್**

"ಮೇವು ಮರತವು ಗೋವುಗಳೆಲ್ಲ, ಸಾವಧಾನದಲ ಹರಿದಳು ಯಮುನೆ" ಎಂದು ಚರಾಚರ ವಸ್ತುವಿನ ಮೇಲೂ ಸಂಗೀತದ ಪ್ರಭಾವವನ್ನು ಕುರಿತು ಹರಿದಾಸರು ವರ್ಣಿಸಿದ್ದಾರೆ. ಲಲಿತಕಲೆಗಳಲ್ಲಿ ಸಂಗೀತವನ್ನು ಮಾತ್ರವೇ ಗಾಂಧರ್ವಕಲೆ ಎನ್ನುವುದು. ಏಕೆಂದರೆ ಸುಶ್ರಾವ್ಯವಾದ ಸಂಗೀತ ಮನುಷ್ಯನನ್ನು ಎಲ್ಲ ಸಂಕಷ್ಟಗಳಿಂದ ಸ್ವಲ್ಪ ಹೊತ್ತಾದರೂ ದೂರ ಕರೆದೊಯ್ದು, ಅನಿರ್ವಚನೀಯ ಆನಂದವನ್ನು ಅನುಭವಿಸುವಂತೆ ಮಾಡುತ್ತದೆ ಎಂಬ ಕಾರಣದಿಂದ.

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಕೇವಲ ಐವತ್ತು ವರ್ಷಗಳಲ್ಲಿ ಸಂಗೀತವು ರಸಿಕರ ಕಣ್ಣೆದುರೇ ವಿಚಿತ್ರ ಹರಹುಗಳನ್ನು ಪಡೆಯುತ್ತಾ ಸಾಗಿದೆ. ಲಲಿತ ಕಲೆಗಳಲ್ಲಿ ಸಂಗೀತ ಅಖಂಡ ಏಕಾಗ್ರತೆಯನ್ನೂ, ಪ್ರಕಾಂಡ ಸಾಧನೆಯನ್ನೂ ಬಯಸುತ್ತದೆ. 'ನಾ ಕಂಡ ಕಲಾವಿದರು' ಕೃತಿಯಲ್ಲಿ ಮೈಸೂರು ವಾಸುದೇವಾಚಾರ್ಯರು ವೀಣೆ ಶೇಷಣ್ಣನವರ ಸಾಧನೆ ಬಗ್ಗೆ ಹೀಗೆ ಬರೆಯುತ್ತಾರೆ: "ಬೆಳಗಿನ ಝಾವ ಗುಂಡು ಹಾರುವ ಮುನ್ನವೇ ಎದ್ದು ಶೇಷಣ್ಣ ಸಾಧನೆ ಪ್ರಾರಂಭಿಸಬೇಕು. ಎಂಟು ಗಂಟೆಯವರೆಗೂ ಸಾಧನೆ ಮಾಡಿ ಅನಂತರ ಸ್ನಾನ ಆಹ್ನಿಕಗಳನ್ನು ಮುಗಿಸಿಕೊಂಡು ಸುಬ್ಬಣ್ಣನವರ ಮನೆಗೆ ಹೋಗಿ ದೊಡ್ಡ ಶೇಷಣ್ಣನವರಲ್ಲಿ ಪಾಠ ಹೇಳಿಸಿಕೊಳ್ಳುವುದು. ಆ ಬಳಿಕ ಮನೆಗೆ ವಾಪಸ್ಸು ಬಂದು ಪುನಃ ಊಟದ ಸಮಯದವರೆಗೂ ಗುರುಗಳಿಂದ ಕಲಿತ ಪಾಠಗಳ ಅಭ್ಯಾಸ. ಮಧ್ಯಾಹ್ನ ಮೈಸೂರು ಸದಾಶಿವರಾಯರಲ್ಲಿ ಹಾಡುಗಾರಿಕೆಯ ಪಾಠ. ಸಂಜೆ ಮನೆಯಲ್ಲಿ ಅದರ ಪುನರಧ್ಯಯನ. ರಾತ್ರಿ ಹಳೆಯ ಪಾಠಗಳ ಪುನಶ್ಚರಣೆ. ಹೀಗೆ ಸಾಧನೆ ಸುಮಾರು ಹದಿನೈದು ಹದಿನಾರು ವರ್ಷಗಳ ಪರ್ಯಂತ ಮುಂದುವರೆಯುತ್ತಾ ಬಂತು." ಇಷ್ಟು ಸಾಧನೆಯನ್ನು ಮಾಡಿದ ಶಿಷ್ಯನಲ್ಲಿ ತಪ್ಪನ್ನು ಹುಡುಕಿ "ನಿನ್ನ ಸಾಧನೆ ಏನೂ ಸಾಲದು" ಎಂದು ಗುರುಗಳು ಹೇಳಿದಾಗ ದುಃಖಗೊಂಡ ಶಿಷ್ಯನಿಗೆ ಮತ್ತೆ ಗುರುಗಳು ಹೇಳುತ್ತಾರೆ : "ಅಪ್ಪಾ ಶೇಷಣ್ಣ, ನಿನ್ನ ಪುರೋಭಿವೃದ್ಧಿಯನ್ನು ಧ್ಯೇಯವಾಗಿಟ್ಟುಕೊಂಡು ನಾನು ಆ ರೀತಿ ನುಡಿದೆನೇ ಹೊರತು ನಿನ್ನ ಮನಸ್ಸನ್ನು ನೋಯಿಸಬೇಕೆಂಬ ಉದ್ದೇಶ ಸರ್ವಥಾ ನನಗಿಲ್ಲ. ನಾನು ಸಾಧನೆ ಮಾಡಿದ ವಿಧಾನ ಕೇಳು. ಪಕ್ಕದಲ್ಲಿ ಎಣಿಕೆಗಾಗಿ ಹುಣಿಸೆಬೀಜದ ಗುಡ್ಡೆ ಇಟ್ಟುಕೊಂಡು ಒಂದೊಂದು ತಾನವನ್ನು ನೂರು ನೂರು ಆವೃತ್ತಿ ನುಡಿಸಿ ಅಭ್ಯಾಸ ಮಾಡಿದೆ. ಶೇಷಣ್ಣ, ಸಾಧಕರ ಸ್ವತ್ತು ಸಂಗೀತ ವಿದ್ಯೆ."

ಅಂದಿನ ದಿನಗಳಲ್ಲಿ ಮಹಾರಾಜರ ಆಸ್ಥಾನದಲ್ಲಿ ಕುಳಿತು ಅತಿರಥ ಮಹಾರಥರ ಮುಂದೆ ಸಂಗೀತ ಕಛೇರಿ ನೀಡುವುದು ಸುಲಭದ ಮಾತಾಗಿರಲಿಲ್ಲ. ಆದ್ದರಿಂದಲೇ ಅಲ್ಲಿ ಸಾಧನೆ ಅನಿವಾರ್ಯವಷ್ಟೇ ಅಲ್ಲ, ಅಳಿವು ಉಳಿವಿನ ಪ್ರಶ್ನೆಯೂ ಆಗಿತ್ತು. ರಾಜಾಶ್ರಯ ತಪ್ಪಿ ಜನಾಶ್ರಯ ಪಡೆದ ಸಾಹಿತ್ಯಕ್ಕೆ ವಿಶಾಲ ಹರವು ಸಿಕ್ಕಂತೆ, ಅನೇಕ ಅನ್ಯ ಪ್ರಭಾವಗಳು ಲಭ್ಯವಾದಂತೆ, ವಸಾಹತು ಶಿಕ್ಷಣದಿಂದ ಬರಹದ ಗತಿ ಮತ್ತು ಓದುಗರ ಅಭಿರುಚಿಗಳು ಬದಲಾದಂತೆ, ಸಂಗೀತಕ್ಕೆ ಆಗಲಿಲ್ಲ ಎನ್ನುವ ಅಂಶ ಅತ್ಯಂತ ಅಗತ್ಯವಾಗಿ ಗಮನಿಸಬೇಕಾದದ್ದು.



ದೊರೆಸ್ವಾಮಿ ಅಯ್ಯಂಗಾರ್ಯರ ವೀಣಾವಾದನ

ರಾಮನವಮಿ ಮತ್ತು ಗಣಪತಿ ಉತ್ಸವಗಳಿಂದ ಸಂಗೀತ ಕಲಾವಿದರು ಶ್ರೀಸಾಮಾನ್ಯನನ್ನು ತಲುಪಿದ ಮೇಲೆ ಶಿಷ್ಟಸಂಗೀತ ತನ್ನ ಹದ ಮತ್ತು ಸತ್ವಗಳನ್ನು ತೀರಾ ತೆಳವು ಮಾಡಿಕೊಂಡಿತು. ಎಲ್ಲ ರಾಗಗಳ ಜ್ಞಾನವಿರುವವರ ಮುಂದೆ ಹಾಡುವುದಕ್ಕೂ ಆಳವಾಗಿ ಏನನ್ನೂ ತಿಳಿಯದವರ ಮುಂದೆ ಹಾಡುವುದಕ್ಕೂ ವ್ಯತ್ಯಾಸವಿರುತ್ತದೆ. ಒಂದಿಷ್ಟು ಇಂಪಾದ ಶ್ರುತಿಬದ್ಧವಾದ ಧ್ವನಿ ಮತ್ತು ಮೇಲುಮೇಲಿನ ಸಾಧನೆಯಷ್ಟೇ ಶ್ರೀಸಾಮಾನ್ಯನನ್ನು ಮೆಚ್ಚಿಸಲು ಸಾಕು. ಇದರೊಂದಿಗೆ ಜನಪ್ರಿಯತೆಯ ವರಸೆಗಳು ತಲೆಹಾಕಿಕೊಂಡವು. ಜನರಿಗೆ ಸುಲಭವಾಗಿ ಹಿಡಿಸುವಂಥ ರಾಗಗಳನ್ನೇ ಹಾಡುವುದು, ದೇವರನಾಮ ಮತ್ತು ಸುಳಾದಿ, ಉಗಾಭೋಗಗಳನ್ನು ಹಾಡುವುದು. ಇವೆಲ್ಲವೂ ಸ್ವಾಗತಾರ್ಹವಾದರೂ ಇವಿಷ್ಟಕ್ಕೇ ಸಂಗೀತ ಕಛೇರಿಗಳು ಸೀಮಿತವೂ ಆಗಬಾರದು. ಸಂಶೋಧನ ಪ್ರವೃತ್ತಿ ಅನ್ವೇಷಣ ಮನೋಭಾವ, ಹೊಸ ರಾಗಗಳ ಬಗ್ಗೆ ಕುತೂಹಲ, ಹಳೆಯ ಸತ್ವಯುತ ಕೀರ್ತನೆಗಳ ಬಗ್ಗೆ ಅಧ್ಯಯನ ಮತ್ತು ಗಾಯನದ ಪ್ರಯೋಗಶೀಲತೆ ಇಂಥ ಕ್ಲಿಷ್ಟಕರ ಸಾಧನೆಗಳೂ ಸಂಗೀತ ಸಾಮ್ರಾಜ್ಯದ ಮೇರು ಕಲಶಗಳಾಗುತ್ತವೆ.

*ಸಾಧನೆಯೇ ಇಲ್ಲದೆ ಜನಪ್ರಿಯರಾಗಲು ಹುಚ್ಚು ಓಟ ನಡೆಸಿರುವ ಕಲಾವಿದರ ನಡುವೆ ನಿಜವಾದ ಸಾಧಕರೂ, ಪ್ರತಿಭಾನ್ವಿತರೂ ಆಗಿರುವವರನ್ನು ಗುರುತಿಸುವ, ಬೆಳಕಿಗೆ ತರುವ, ಪ್ರೋತ್ಸಾಹಿಸುವ ವಾತಾವರಣ ಮತ್ತೆ ಸೃಷ್ಟಿಯಾಗಬೇಕಾಗಿದೆ.*

ಸಂಗೀತ ಶಿಕ್ಷಣ ಸಂಸ್ಥೆಗಳು ಹುಟ್ಟಿಕೊಂಡ ಮೇಲಂತೂ ಸಂಗೀತ ಒಂದು ರೀತಿಯಲ್ಲಿ ವ್ಯವಹಾರದ ವಿಷಯವೇ ಆಯಿತು. ರಾಜಾಶ್ರಯದಲ್ಲಿದ್ದ ಕಲಾವಿದರು ಸಂಗೀತ ಕಲೆಯ ಪರಂಪರೆಯನ್ನುಳಿಸುವುದಕ್ಕಾಗಿ ತಮ್ಮ ಮನೆಯಲ್ಲೇ ಶಿಷ್ಯನಿಗೆ ಪಾಠ ಹೇಳುತ್ತಿದ್ದ ಕಾಲವೊಂದಿತ್ತು. ಸಂಗೀತಗಾರರು ಅನ್ನ ಗಳಿಸುವ ಸುಲಭ ಮಾರ್ಗ ಪಾಠ ಹೇಳುವುದಾದ ಮೇಲೆ, ಗುರುಶಿಷ್ಯ ಪರಂಪರೆಯಲ್ಲಿನ ಸಂಬಂಧವು ನಶಿಸಿ 'ಕೊಡುಕೊಳ್ಳು'ವ ವ್ಯಾಪಾರದ ಬಣ್ಣ ತಳೆಯಿತು. ಇದರೊಂದಿಗೇ ಜನಪ್ರಿಯತೆ ಎನ್ನುವ ಮೋಹಕಮಂತ್ರವೂ ಮೇಳೈಸಿದ ಮೇಲೆ ಸಂಗೀತಕ್ಕೆ 'ಕಲಾರಾಧನೆ' ಎನ್ನುವುದಕ್ಕಿಂತ ಇತರ ಏನೆಲ್ಲದರ ಆರಾಧನೆಯೇ ಬಲವಾಗಿದೆ.

'ಸಂಗೀತ ಸಭಾ'ಗಳು ಸಂಗೀತಗಾರರಿಗೆ ವೇದಿಕೆಯನ್ನು ಒದಗಿಸಿ, ಅನೇಕ ಪ್ರತಿಭೆಗಳಿಗೆ ಅವಕಾಶವನ್ನು ಕೊಡುತ್ತಿರುವ ಸಂದರ್ಭ ನಮ್ಮದು. 'ಜನಮನ್ನಣೆ' ಸಂಗೀತ ಸಭಾ ಮತ್ತು ಸಂಗೀತಗಾರರಿಗೆ ತೀರಾ ಅಗತ್ಯವಾದಾಗ ಸಂಗೀತ ಕ್ಷೇತ್ರವು ಸಾರ್ವತ್ರಿಕ ಅಭಿರುಚಿಯ ಕಡೆಗೆ ವಾಲುವುದೂ ಅನಿವಾರ್ಯ. ಹಾಗೆ ನೋಡಿದರೆ ಸಂಗೀತ ಕಲಾವಿದರು ಅವಕಾಶಗಳ ದೃಷ್ಟಿಯಿಂದ ಇಂದು ಸಣ್ಣ ತೊರೆಯಿಂದ ಮಹಾ ಸಮುದ್ರದ ಹರಹಿಗೇ ಧುಮುಕಿದ್ದಾರೆ. ಮಹಾರಾಜರ ಪುಟ್ಟ ಆಸ್ಥಾನ, ವಿದ್ವತ್ಪೂರ್ಣ ಪರಿಸರ. ಸೀಮಿತ ಶ್ರೋತೃಗಳ ಸಮೂಹ ಎಲ್ಲಿ? ಹಿರಿದಾದ ವೇದಿಕೆ, ಸಾವಿರಾರು ರಸಿಕರು, ಆಕಾಶವಾಣಿಯ ಸ್ಟೂಡಿಯೋ, ಟಿ.ವಿ. ಕ್ಯಾಮರಾ ಇವೆಲ್ಲ ಎಲ್ಲಿ? ಇವೆಲ್ಲವನ್ನೂ ಕೆಲವರು ಕೇವಲ ತಮ್ಮ ವಿದ್ವತ್ತು, ಪ್ರತಿಭೆ ಮತ್ತು ಸಾಧನೆಗಳಿಂದಲೇ ತಮ್ಮದನ್ನಾಗಿ ಮಾಡಿಕೊಂಡರೆ, ಮತ್ತೆ ಕೆಲವರು ಇಂದು ಎಲ್ಲ ಕ್ಷೇತ್ರಗಳಲ್ಲೂ [illegible] ಒಳದಾರಿಗಳಿಂದ ಅವಕಾಶವಾದಿಗಳಾಗಿ [illegible] ವುದು ಈ ಮಹಾಸಮುದ್ರದ [illegible] ತಿಳಿಯುತ್ತಿ [illegible].

([illegible])

(೫೧ನೇ ಪುಟದಿಂದ)

ಇವೆಲ್ಲಾ ಕಾರಣಗಳು, ಊಹೆಗಳು, ಸ್ಥಿತಿಗತಿಗಳ ಅಧ್ಯಯನಗಳು ಏನೇ ಹೇಳಿದರೂ ಈಚಿನ ದಶಕಗಳು ಕರ್ನಾಟಕ ಸಂಗೀತದ ಮಟ್ಟಿಗಂತೂ ಕನ್ನಡದ ನೆಲದಲ್ಲಿ ವೈಭವದ ದಿನಗಳೆಂದೇ ಹೇಳಬೇಕು. ಮೈಸೂರಿನ ಹಳ್ಳದಕೇರಿಯಲ್ಲಿ (ಈಗ ಅಲ್ಲಿ ಲಿಡೋ ಸಿನಿಮಾ ಮಂದಿರವಿದೆ), ಅರಳಿಕಟ್ಟೆ ರಾಮಮಂದಿರದಲ್ಲಿ, ಅರಮನೆಯ ಅಂಗಳದಲ್ಲಿ, ಜಗನ್ಮೋಹನ ಪ್ಯಾಲೇಸ್‌ನಲ್ಲಿ, ಟೌನ್‌ಹಾಲಿನಲ್ಲಿ, ಹಾಗೂ ಬೆಂಗಳೂರಿನ ಸಿಟಿ ಇನ್‌ಸ್ಟಿಟ್ಯೂಟ್‌ನಲ್ಲಿ, ಶೇಷಾದ್ರಿಪುರಂ ಸಂಗೀತ ಸಭೆಯಲ್ಲಿ, ಮಲ್ಲೇಶ್ವರ ಸಂಗೀತ ಸಭಾ, ಗಾಯನ ಸಮಾಜಗಳಲ್ಲಿ ಸಂಗೀತ ಕಛೇರಿಗಳಿಗೆ ಸಹಸ್ರಾರು ಜನ ಸೇರುತ್ತಿದ್ದರು. ಸಂಗೀತ ಕಲಾವಿದರಾದ ಎಂ. ಎಸ್. ಸುಬ್ಬಲಕ್ಷ್ಮಿ, ಟಿ. ಆರ್. ಮಹಾಲಿಂಗಂ, ಎಂ. ಎಲ್. ವಸಂತಕುಮಾರಿ, ಬಾಲಮುರಳಿಕೃಷ್ಣ, ವೀಣೆ ದೊರೆಸ್ವಾಮಿ ಅಯಂಗಾರ್ ಮುಂತಾದ ಪ್ರಖ್ಯಾತ ವಿದ್ವಾಂಸರ ಕಛೇರಿ ಎಂದರೆ ಮೂರು ಗಂಟೆ ಮುಂಚಿತವಾಗಿ ಜನ ಜಾಗ ಹಿಡಿದು ಕುಳಿತಿರುತ್ತಿದ್ದರು.

ಟಿ.ವಿ.ಯ ಆಗಮನ ಸಂಗೀತಕ್ಷೇತ್ರಕ್ಕೆ ಬಲವಾದ ಪೆಟ್ಟು! ಹಾಗೆ ನೋಡಿದರೆ ಆಕಾಶವಾಣಿ ಮನೆಮನೆಗೆ ಸಂಗೀತವನ್ನು ತಲುಪಿಸಿ, ಸಂಗೀತಾಭಿರುಚಿ ವಿಸ್ತಾರವಾಗುವುದಕ್ಕೆ ಏನೆಲ್ಲ ಸನ್ನಿವೇಶಗಳನ್ನೂ ಒದಗಿಸಿತ್ತೋ ಅದನ್ನು ದೃಶ್ಯಮಾಧ್ಯಮ ಸಂಪೂರ್ಣ ನಾಶಮಾಡಿತು. ಹಿಂದೊಮ್ಮೆ ಸಂಗೀತ ವಿದ್ವಾಂಸರೊಬ್ಬರು ''ಹಿಂದಿ ಸಿನಿಮಾ ಹಾಡುಗಳಿಂದ ನಮ್ಮ ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಧಕ್ಕೆಯೊದಗುತ್ತಿದೆ'' ಎಂದು ಹೇಳಿದ್ದನ್ನು ಅಂದು ಗಂಭೀರವಾಗಿ ಯಾರೂ ಪರಿಗಣಿಸಿರಲಿಲ್ಲ. ಇಂದು ಅವರ ಮಾತು ಅಕ್ಷರಶಃ ನಿಜವಾಗುತ್ತಿದೆ. ಹಿಂದೆ ಎಳವೆಯಲ್ಲೇ ಕಿವಿ ಮೇಲೆ ಬಿದ್ದ ರಾಗಗಳ ಪ್ರಭಾವ ತಮಗೆ ಅರಿವಿಲ್ಲದಂತೇ ಎಲ್ಲೋ ಸದಭಿರುಚಿಯನ್ನು ಬೆಳೆಸಲು ಪ್ರೇರಕವಾಗುತ್ತಿತ್ತು. ಒಳ್ಳೆಯ ಸಂಗೀತದ 'ಕೇಳ್ಮೆ'ಗೆ ಮನಸ್ಸು ವೇದಿಕೆಯನ್ನು ಒದಗಿಸುತ್ತಿತ್ತು. ಅದು ಈಚಿನ ದಿನಗಳಲ್ಲಿ ಇಲ್ಲವಾಗುತ್ತಿದೆ. ಇಂದು ನಮ್ಮ ಯುವ ಪೀಳಿಗೆಗೆ ಈ ನಾದ ಮಾಧುರ್ಯದ ಬುನಾದಿಯೇ ಇಲ್ಲವಾಗಿರುವುದರಿಂದ ಶಾಸ್ತ್ರೀಯ ಸಂಗೀತ ರಸಿಕರ ಅಭಾವದಿಂದ ಅಕ್ಷರಶಃ ಬಳಲುತ್ತಿದೆ. ಜನ್ನ ಕವಿಯ ''ಕಟ್ಟಿಯುಂಯೇನೋ ಮಾಲೆಗಾರನ ಪೂಸಬಾಸಿಗಮಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೇ'' ಎನ್ನುವ ಪ್ರಲಾಪ ಸಂಗೀತಗಾರರದಾಗಿದೆ. ಈ ಕೊರೆಯನ್ನು ಬಹುಮಟ್ಟಿಗೆ ನಿವಾರಿಸುವ ಪ್ರಯತ್ನ ಸಂಗೀತ ಸಂಸ್ಥೆಗಳದ್ದು. ಆದರೆ ಇಲ್ಲಿ ಒಂದು ವಿಚಿತ್ರ ಬೆಳವಣಿಗೆಯೆಂದರೆ ಸಂಗೀತ ಸಂಸ್ಥೆ ಕಲಾವಿದ, ಹಾಗೂ ಪತ್ರಿಕೆಯ ಸಂಬಂಧಗಳು ಬೆಳೆದುಬಂದಿರುವ ರೀತಿ. ಇವತ್ತು ಕಲಾವಿದರಿಗೆ ಸಂಗೀತ ಸಂಸ್ಥೆಗಳ ವೇದಿಕೆ ಬೇಕು ಹಾಗೂ ಪತ್ರಿಕೆಯಲ್ಲಿ ತಮ್ಮ ಸಂಗೀತದ ಬಗ್ಗೆ ಬರಹಗಳೂ ಬೇಕು. ಸಂಸ್ಥೆಗೆ ಕಲಾವಿದರೂ ಹಾಗೂ ಪತ್ರಿಕೆಗಳ ಅಗತ್ಯ. ಪತ್ರಿಕೆಗೆ ತನ್ನ 'ಕಲೆ'ಯ ಕಾಲಂನಲ್ಲಿ ನಾಡಿನಲ್ಲಿ ನಡೆಯುತ್ತಿರುವ ಶಾಸ್ತ್ರೀಯ ಸಂಗೀತದ ಚಟುವಟಿಕೆಗಳನ್ನು ವಿವರಿಸಬೇಕಾದ ಕರ್ತವ್ಯ. ಇವೆಲ್ಲ ಅನಿವಾರ್ಯತೆಗಳ ಲಾಭ ಪಡೆಯುತ್ತಿರುವವರೆಂದರೆ ಪತ್ರಿಕೆಗಳಲ್ಲಿ ಬರೆಯುವ ಹವ್ಯಾಸಿ ಬರಹಗಾರರು.

ಸಂಗೀತದ ಸ್ವಾರಸ್ಯವನ್ನೆಲ್ಲಾ ಮನನ ಮಾಡಿಕೊಂಡು ಸಂಗೀತದ ಸೊಬಗನ್ನು ಅಕ್ಷರಗಳನ್ನಾಗಿಸಿ, ದಾಖಲಿಸುತ್ತಿದ್ದ ಶ್ರೇಷ್ಠ ಬರಹಗಾರರ ದೊಡ್ಡ ಪಟ್ಟಿ ನಮ್ಮಲ್ಲಿದೆ : ಬಿ.ವಿ.ಕೆ. ಶಾಸ್ತ್ರಿ ಟಿ.ಬಿ. ನರಸಿಂಹಾಚಾರ್, ಎಸ್. ರಾಮಚಂದ್ರ, ಇತ್ಯಾದಿ. ಸಂಗೀತ ಕಲೆಯ ನಿಜವಾದ ಕಾಳಜಿಗಳನ್ನು, ಆರೋಗ್ಯಕರ ಪರಿಸರವನ್ನು ಈ ಲೇಖಕರು ಸೃಷ್ಟಿಸಿದ್ದರು. ಅವರು ವಸ್ತುನಿಷ್ಠತೆಗೆ ಬೆಲೆ ಕೊಟ್ಟರೇ ವಿನಾ ತಮ್ಮ ಲೇಖನಿಯನ್ನು ದ್ರವ್ಯಕ್ಕಾಗಿ ಎಂದೂ ಮಾರಿಕೊಳ್ಳಲಿಲ್ಲ.

ದುರಂತವೆಂದರೆ ನಂತರ ಬರೆಯತೊಡಗಿದ ಬರಹಗಾರರು ಸಂಗೀತದ ವಲಯವನ್ನೇ ಅನಾರೋಗ್ಯ ಗೊಳಿಸಿರುವುದು. ಕಲಾವಿದರು ತಮ್ಮ ಕಛೇರಿಯ ಬಗ್ಗೆ ನಾಲ್ಕು ಸಾಲು ಪತ್ರಿಕೆಯಲ್ಲಿ ಬರಲಿ ಎನ್ನುವ ಆಮಿಷಕ್ಕಾಗಿ ಈ ಬರಹಗಾರರನ್ನು ಓಲೈಸುವುದು; ತಮ್ಮ ಸಂಸ್ಥೆಯ ಕಾರ್ಯಕ್ರಮದ ಬಗ್ಗೆ ಪತ್ರಿಕೆಯಲ್ಲಿ ಬಂದರೆ ಚೆನ್ನ ಎನ್ನುವ ಆಶಯಕ್ಕಾಗಿ ಸಂಗೀತ ಸಂಸ್ಥೆಗಳು ಈ ಬರಹಗಾರರಿಗೆ ಕೆಂಪು ರತ್ನಗಂಬಳಿಯ ಸ್ವಾಗತ ನೀಡುತ್ತಾ ರಾಜೋಪಚಾರ ನಡೆಸುವುದು; ಇವೆರಡೂ ನಿವಾರಣೀಯ ಪಿಡುಗುಗಳು. ಈ ವಿಷವರ್ತುಲದಲ್ಲಿ ಇಂದು ಒಳ್ಳೆಯ ಸಂಗೀತ ಸೊರಗಿಹೋಗುತ್ತಿದೆ.

ಶಾಂತಾ ನಾಗರಾಜ್
೧೬೧ ಎ/೧೬, ೭ನೇ ಅಡ್ಡರಸ್ತೆ, ಒಂದನೇ ಎನ್ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

(೫೦ನೇ ಪುಟದಿಂದ)

ಸೂರ್ಯನ ದಕ್ಷಿಣದಿಕ್ಕಿನ ಓಟಕ್ಕೆ ನಿಲುಗಡೆ ಉಂಟು ಮಾಡುವ ದಿನವೂ ಡಿಸೆಂಬರ್ ೨೨. ಅಂದಿನಿಂದ ಸೂರ್ಯ ಮತ್ತೆ ಉತ್ತರದಿಕ್ಕಿಗೆ ಹೊರಡುತ್ತಾನೆ. ಇದು ಖಗೋಳವೈಜ್ಞಾನಿಕವಾಗಿ ಉತ್ತರಾಯನ(ಣ).

ನವಂಬರ್‌ನ ಉಲ್ಕಾವೃಷ್ಟಿಯನ್ನು ನೆನಪಿಸುವ ಇನ್ನೆರಡು ಉಲ್ಕಾವೃಷ್ಟಿಗಳು - ಜೆಮಿನಿಡ್ಸ್ (ಡಿಸೆಂಬರ್ ೭-೧೫) ಮತ್ತು ಉರ್ಸಿಡ್ಸ್ (ಡಿಸೆಂಬರ್ ೧೯ರಿಂದ ೨೪). ಹೆಸರೇ ಸೂಚಿಸುವಂತೆ ಜೆಮಿನಿಡ್ಸ್ ಎಂಬುದು ಮಿಥುನರಾಶಿ ಯಿಂದ ಹೊರಟಂತೆ ಕಾಣುವ ಉಲ್ಕೆಗಳು. ಉರ್ಸಿಡ್ಸ್ ಎಂಬವು ಧ್ರುವನಕ್ಷತ್ರದ ಸಮೀಪದ ಬೀಟಾ ಉರ್ಸಾಮೈನರ್ ನಕ್ಷತ್ರದಿಂದ ಹೊರಟಂತೆ ಕಾಣುತ್ತವೆ.

ಎರಡು ಧೂಮಕೇತುಗಳು ದುರ್ಬೀನಿನ ದೃಷ್ಟಿಗೆ ನಿಲುಕುವಂತಿವೆ. ಸೆಪ್ಟೆಂಬರ್ ೨೭ರಂದು LINEAR ಎಂಬ ಉಪಕರಣ ಕಂಡುಹಿಡಿದ ಧೂಮಕೇತು ಮತ್ತು ಅಮೆರಿಕದ ರಾಬರ್ಟ್ ಮೆಕ್‌ನಾಟ್ ಕಂಡುಹಿಡಿದ ಧೂಮಕೇತು ಬರುವ ತಿಂಗಳುಗಳಲ್ಲಿ ಇನ್ನೂ ಪ್ರಕಾಶಮಾನವಾಗಲಿವೆ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಬೆಂಗಳೂರು.

ನೂರಾರು ಮತವಿಹುದು ಲೋಕದುಗ್ರಾಣದಲಿ ।
ಆರಿಸಿಕೋ ನಿನ್ನ ರುಚಿಗೊಪ್ಪುವುದನದರೊಳ್ ॥
ಸಾರದಡುಗೆಯನೊಳವಿಚಾರದೊಲೆಯಲಿ ಮಾಡು ।
ಬೇರೆ ಮತಿ ಬೇರೆ ಮತ - ಮಂಕುತಿಮ್ಮ

-ಡಿವಿಜಿ

ಹೊಸತು

ನೆಮ್ಮದಿಯ ನಾಳೆಗಳು
ಬಿಮ್ಮನೆ ಬರುವಾಗ
ನಮ್ಮವರ ಬಾಳುಗಳು
ನಳನಳಿಸುತಿವೆ
ಹುಟ್ಟು 'ಹೊಸತಾ'ದಾಗ
ದಿಟ್ಟ ಹೆಜ್ಜೆಗಳನಿಟ್ಟು
ಹೊಸದಾರಿ ತೆರೆಸಲಿ
ಈ ನಾಡ ನಾಲ್ಕು ದಿಕ್ಕು

○ ಶೇ.ನಾ ಕುಲಕರ್ಣಿ
[illegible] ನಗರ ಕೆ.ಜಿ.ಎಫ್

# ಮಾತಿನ ಮಲ್ಲರನ್ನು ಮಾಡುವ ಅಂಡಮಾನ್

ಲೇಖನ - ೨

ರಹಮತ್ ತರೀಕೆರೆ

ಮನುಷ್ಯರ ನೆನಪುಗಳಿಗೆ, ಗೆಳೆತನಕ್ಕೆ, ಮಾತಿಗೆ ಎಂಥ ಬೆಲೆಯಿದೆ ಎಂದು ಗೊತ್ತಾಗಬೇಕಾದರೆ ಹಡಗಿನಲ್ಲಿ ಪ್ರಯಾಣ ಮಾಡಬೇಕು. ನೆಲಪ್ರಯಾಣದಲ್ಲಿ ದಾರಿ ಯುದ್ದಕ್ಕೂ ಗುಡ್ಡ, ಬಯಲು, ಕಾಡು, ನದಿ, ಊರು, ಜನ, ದನ - ಹೀಗೆ ತರಾವರಿ ದೃಶ್ಯಗಳು ಸಿಗುತ್ತವೆ. ಆದರೆ ಕಡಲ ಪ್ರಯಾಣದಲ್ಲಿ ಯಾವಾಗ ಹಡಗಿನ ಮೇಲೆ ಬಂದು ನೋಡಿದರೂ ನೀರು ನೀರೇ; ಮೇಲೆ ದಬ್ಬುಹಾಕಿದ ಆಕಾಶದ ಬೋಗುಣಿ! ಕಡಲ ಪ್ರಯಾಣದಲ್ಲಿ ಆನಂದವಿಲ್ಲ ಎಂತಲ್ಲ. ಚಿಕ್ಕಪುಟ್ಟ ಬೆಟ್ಟಗಳಂತೆ ಎದ್ದು ಪ್ರಪಾತ ನಿರ್ಮಿಸುವಂತೆ ಕೆಳಗಿಳಿದು ಭೀಕರವಾಗಿ ಕುಣಿವ ಕಪ್ಪು ಅಲೆಗಳನ್ನು ಕುದಿವ ಕಡಲನ್ನು ಬಗೆದು ನೊರೆದಾರಿ ನಿರ್ಮಿಸಿ ಧೀಮಂತರಾಗಿ ಸಾಗುವ ಹಡಗು, ಹಡಗಿಗೆ ಬೆದರಿದಂತೆ ಚಿಮ್ಮಿ ಗಾಳಿಯಲ್ಲಿ ತೇಲುತ್ತಾ ಹೋಗುವ 'ಹಾರುಮೀನು'ಗಳು, ನೀರಹೊಟ್ಟೆಯಲ್ಲಿ ಸೂರ್ಯ ಹುಟ್ಟುತ್ತ ಮುಳುಗುತ್ತ ಬೆಳಗು-ಸಂಜೆ ಮಾಡುವ ಬಣ್ಣದಾಟ - ಇದನೆಲ್ಲ ನೋಡುವುದು ಚೆಂದವೇ. ಮೊದಲ ದಿನವಂತೂ ಎಲ್ಲರೂ ಹಡಗಿನ ಡೆಕ್ಕಿನ ಮೇಲೆಯೇ ನೆರೆದಿರುತ್ತಾರೆ. ಆದರೆ ಭಾವಜೀವಿಯಂತೆ ಕಲ್ಪನೆ ಓಡಿಸುತ್ತ ಇದನ್ನೇ ಎಷ್ಟು ಹೊತ್ತು ನೋಡುವುದು ? ಭೂಮಿಯ ಸೆರಗು ದೂರದೂರ ವಾದಂತೆ, ಹಡಗು ನಡುಗಡಲಿಗೆ ಹೋಗುತ್ತಿದ್ದಂತೆ, ವಿಚಿತ್ರವಾದ ಜೀವಭಯವೂ, ಭೀಕರವಾದ ಏಕತಾನವೂ ಶುರುವಾಗಿಬಿಡುತ್ತದೆ.

ಹಡಗಿನಲ್ಲಿ ಹೆಚ್ಚಿನ ಪ್ರಯಾಣಿಕರು ತಮ್ಮ ಹಾಸಿಗೆಗಳಲ್ಲಿ ಬಿದ್ದುಕೊಂಡು ನಿದ್ದೆಮಾಡುತ್ತ, ಹಡಗಿನ ಲೈಬ್ರರಿಯಲ್ಲಿ ಓದುತ್ತ, ಥಿಯೇಟರುಗಳಲ್ಲಿ ಹಾಕುವ ಸಿನೇಮಾ ನೋಡುತ್ತ ಇಸ್ಪೀಟು ಆಡುತ್ತ ಕಾಲವನ್ನು ದೂಡುತ್ತಾರೆ. ಆದರೆ ಇವೂ ಬೋರಾಗಿ ಬಿಡುತ್ತದೆ. ಆಗ ಮಾತು ಸಂಜೀವಿನಿಯಂತೆ, ಆತ್ಮೀಯ ಸಂಗಾತಿಯಂತೆ ಮೂಡಲಾರಂಭಿಸುತ್ತದೆ. ಗ್ರೀಕ್ ಕತೆಗಳಲ್ಲಿ ಬರುವ ಯೂಲಿಸಿಸ್ ಅಥವಾ ಅರೇಬಿಯನ್ ನೈಟ್ಸ್‌ಗಳ ಸಿಂದಾಬಾದ್ ಮೊದಲಾದ ನಾವಿಕರು, ಯಾಕೆ ಸುಪ್ರಸಿದ್ಧ ಕತೆಗಾರರಾಗಿದ್ದರು ಎಂಬುದು ಹೊಳೆಯತೊಡಗುತ್ತದೆ.

ಹೀಗಾಗಿ ಹಡಗಿನಲ್ಲಿ ಪ್ರತಿಯೊಬ್ಬರೂ ತಾವು ಕಾಣುವ ಮನುಷ್ಯ ಜೀವನವನ್ನು ಹೇಗಾದರೂ ಮಾಡಿ ಪರಿಚಯ ಮಾಡಿಕೊಳ್ಳಲು ಹಾತೊರೆಯುವವರೇ; ತಮ್ಮೊಳಗೆ ಹೊಯ್ದಾಡುವ ನೆನಪುಗಳನ್ನು ಹಂಚಿಕೊಳ್ಳಲು ಸಿದ್ಧರಾದವರೇ. ಮೂರು ಹಗಲು ಮೂರು ರಾತ್ರಿಗಳ ನಿರಂತರ ಪ್ರಯಾಣದಲ್ಲಿ ಮಾತೆಂಬ ಜ್ಯೋತಿರ್ಲಿಂಗ ಇಲ್ಲದಿದ್ದರೆ, ಅರ್ಧಕರ್ಧ ಜನ ಹುಚ್ಚರಾಗಿರುತ್ತಿದ್ದರೋ ಏನೋ? ಒಬ್ಬೊಬ್ಬರನ್ನು ಕೆಣಕಿದರೂ ಒಂದೊಂದು ಕತೆ-ಕಾದಂಬರಿ ಚಿಮ್ಮಿ ಬರುತ್ತಿತ್ತು. ಕೇಳಲು ಕಿವಿ ಮತ್ತು ಸಹೃದಯತೆ ಇದ್ದರೆ, ಹಡಗಿನ ಪ್ರಯಾಣದಲ್ಲಿ ಎಷ್ಟೋ ಕಾದಂಬರಿಗಳನ್ನು ಕೇಳಬಹುದು.

### ನಮ್ಮ ನೆರೆಯವರು

ನಾವು 'ನಾನ್‌ಕೌರಿ' ಎಂಬ ಹಡಗಿನ ಬಂಕರು ಸೀಟುಗಳಲ್ಲಿ ಪ್ರಯಾಣಿಸಿದ್ದೆವು. ನಮ್ಮ ಸೀಟುಗಳಿಗೆ ತಗುಲಿದಂತೆ ಯೂಸುಫ್ ಕುಟ್ಟಿ ಇದ್ದರು. ಅಂಡಮಾನಿನಲ್ಲಿ ಬಹಳ ವರ್ಷಗಳಿಂದ ಬೇಕರಿ ನಡೆಸುತ್ತಿದ್ದ ಯೂಸುಫ್, ತಮ್ಮ ಸಕ್ಕರೆ ಕಾಯಿಲೆಗೆ ನಾಟಿ ಔಷಧಿ ಉಪಚಾರ ಪಡೆಯಲು ಕೇರಳಕ್ಕೆ ಹೋಗಿದ್ದರು. ಡಯಾಬಿಟೀಸ್ ಹೆಚ್ಚಾಗಿ ಅವರ ಒಂದು ಕಾಲನ್ನು ಕತ್ತರಿಸಿ ತೆಗೆಯಲಾಗಿತ್ತು. ಬಗಲುಕೋಲು ಮೆಟ್ಟಿಕೊಂಡು ಆಗಾಗ್ಗೆ ಶೌಚಾಲಯಕ್ಕೆ ಹೋಗಿಬರುತ್ತಿದ್ದುದನ್ನು ಬಿಟ್ಟರೆ, ಯಾವಾಗಲೂ ಹಾಸಿಗೆಯ ಮೇಲೆ ಕುಳಿತುಕೊಂಡು ಯೂಸುಫ್ ತಮ್ಮ ತಾಯಿಯೊಂದಿಗೆ ಮಲೆಯಾಳದಲ್ಲಿ ಹರಟುತ್ತಿದ್ದರು. ನಮ್ಮ ಇನ್ನೊಂದು ಮಗ್ಗುಲಿಗೆ ಕಣ್ಣನ್ ದಂಪತಿಗಳು, ತಮ್ಮ ಎರಡು ಮಕ್ಕಳೊಡನೆ ಇದ್ದರು. ಕನ್ಯಾಕುಮಾರಿ ಕಡೆಯ ಕಣ್ಣನ್ ಒಬ್ಬ ಬೆಸ್ತ. ಸರಕಾರ ಆಳಸಮುದ್ರದಲ್ಲಿ ದೊಡ್ಡ ಹಡಗುಗಳಿಗೆ ಮೀನುಗಾರಿಕೆ ಅವಕಾಶ ಕೊಟ್ಟಿದ್ದರಿಂದಲೋ ಏನೋ ಕಣ್ಣನ್‌ನಂಥ ಎಷ್ಟೋ ಬೆಸ್ತರಿಗೆ ಮೀನು ಹಿಡಿದು ಸಂಸಾರ ಸಾಗಿಸುವುದು ಅಸಾಧ್ಯವಾಗಿತ್ತು. ಹೀಗಾಗಿ ಆತ ತನ್ನ ಬಲೆ ಮತ್ತು ಸಂಸಾರ ತೆಗೆದುಕೊಂಡು ಅಂಡಮಾನಿಗೆ ಹೊರಟಿದ್ದ. ಕಣ್ಣನ್‌ನ ಇಬ್ಬರು ಪುಟ್ಟ ಮಕ್ಕಳಾದ ತಿಪ್ಯಾ, ಕಾರ್ತಿಕ್, ಅಳಿಲುಗಳಂತೆ ಬಂಕರಿನ ಸ್ಲೀಪರುಗಳಲ್ಲಿ ಕೆಳಕ್ಕೂ ಮೇಲಕ್ಕೂ ಚಿಲಿಪಿಲಿಗುಟ್ಟುತ್ತ ಜಿಗಿದಾಡುತ್ತಿದ್ದವು. ಬಂಕರಿನ ಮೂಲೆಯಲ್ಲಿ, ವಾನಿಯಂಬಾಡಿ ಕಡೆಯ ಒಂದು ಕುಟುಂಬವಿತ್ತು. ಬಟ್ಟೆ ವ್ಯಾಪಾರದಲ್ಲಿ ಪೂರ್ತಿಯಾಗಿ ಪಾಪರ್ ಆಗಿದ್ದ ಗಂಡ, ತನ್ನ ಹೆಂಡತಿ ಹಾಗೂ ಎಳೆಯ ಕೂಸನ್ನು ತೆಗೆದುಕೊಂಡು, ಅಂಡಮಾನಿನಲ್ಲಿ ಬಟ್ಟೆ ವ್ಯಾಪಾರ ಮಾಡಿ ಬದುಕಲು ನಿರ್ಧರಿಸಿದ್ದ. ಗಂಡ- ಹೆಂಡತಿಯರ ಮುಖದಲ್ಲಿ ಯಾವಾಗಲೂ ಚಿಂತೆಯ ಕಾರ್ಮೋಡ ಕವಿದಿರುತ್ತಿತ್ತು. ಮನೆ ಊರನ್ನು ಅಗಲಿದ ನೋವೋ, ಹೊಸ ಜಾಗದಲ್ಲಿ ಕಾಲೂರಿ ಬದುಕುವ ಅನಿಶ್ಚಿತತೆ ತಂದ ಆತಂಕವೋ ತಿಳಿಯದು. ಅವರು ಹೆಚ್ಚು ಮಾತಾಡದೆ, ಕಿಟಕಿಯಿಂದ ನೀರನ್ನು ದಿಟ್ಟಿಸುತ್ತಾ ಇರುತ್ತಿದ್ದರು.

ಹಡಗಿನಲ್ಲಿ ಹಾಗೇ ತಿರುಗಾಡುತ್ತಿರುವಾಗ, ಡೆಕ್ಕಿನ ಒಂದು ಮೂಲೆಯಲ್ಲಿ, ಒಬ್ಬ ವ್ಯಕ್ತಿ, ಮನೆಯಿಂದ ಕಟ್ಟಿಕೊಂಡು ಬಂದ ತಿಂಡಿಯನ್ನೆಲ್ಲ ತಿಂದು, ತಿಂಡಿ ಕಟ್ಟಿಕೊಂಡು ಬಂದಿದ್ದ ಪೊಟ್ಟಣದ ತೈಲಮಯ ಪೇಪರನ್ನು ಅಮೂಲ್ಯವೆಂಬಂತೆ, ಓದುತ್ತಾ ಕುಳಿತಿದ್ದರು. ಇಣುಕಿ ನೋಡಿದರೆ ಅದು 'ಸಂಯುಕ್ತ ಕರ್ನಾಟಕ'! ಕನ್ನಡದವರು! ಸಂಶಯ ಉಳಿಯಲಿಲ್ಲ, ಸಂತೋಷದಿಂದ ನಮಸ್ಕಾರ ಮಾಡಿ, ಗುರ್ತು ಮಾಡಿಕೊಂಡೆವು. ಅವರು ಧಾರವಾಡದ ಮಾಳಮಡ್ಡಿಯವರು. ಹೆಸರು ಯಶವಂತರಾವ್. ಧಾರವಾಡದ ಒಂದು ಮರಕೊಯ್ಯುವ ಮಿಲ್ಲಿನಲ್ಲಿ ಕೆಲಸ ಮಾಡುತ್ತಿದ್ದ ಯಶವಂತ್, ಮಿಲ್ ಮುಚ್ಚಿದಾಗ ಕೆಲಸ ಹುಡುಕಿಕೊಂಡು ೧೦ ವರ್ಷ ಹಿಂದೆ, ಇದೇ ಹಡಗನ್ನು ಹತ್ತಿ ಲಿಟಲ್ ಅಂಡಮಾನಿಗೆ ಹೋದರು. ಲಿಟಲ್ ಅಂಡಮಾನ್, ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳ ಹಾರದಲ್ಲಿ, ನಟ್ಟನಡುವೆ, ಹಾಗಲಕಾಯಿ ಬೀಜದಾಕಾರದಲ್ಲಿ ಇರುವ ದೊಡ್ಡ ದ್ವೀಪ. ದಟ್ಟವಾದ ಕಾಡುಗಳಿಂದಲೂ, 'ಓಂಗೆ' ಆದಿವಾಸಿ



ಕುಖ್ಯಾತ ಸೆಲ್ಯುಲರ್ ಜೈಲಿನ ಒಂದು ನೋಟ

ಗಳಿಂದಲೂ ಕೂಡಿರುವ ಈ ದ್ವೀಪದಲ್ಲಿ ದೊಡ್ಡ ದೊಡ್ಡ ಪ್ಲೈವುಡ್ ಕಾರ್ಖಾನೆಗಳಿವೆ. ಪ್ರತಿದಿನ ಸಾವಿರಾರು ಮರಗಳನ್ನು ಕತ್ತರಿಸಿ ತಿನ್ನುವ ಈ ಕಾರ್ಖಾನೆಗಳಲ್ಲಿ ಯಶವಂತ್ ಕೆಲಸ ಮಾಡುತ್ತಿದ್ದರು. ಅಂಡಮಾನಿನ ಗಾಳಿ, ಮಳೆ, ಊಟ, ನೀರು, ಜನರ ಬಗ್ಗೆ ನೂರಾರು ಕತೆಗಳನ್ನು ಯಶವಂತ್ ಶುರುಮಾಡಿದರು. ಅಪರಿಚಿತ ನಾಡಿಗೆ ಹೊರಟಿದ್ದ ನಮಗೆ ಬೇಕಾಗಿದ್ದು ಇಂಥ ಕತೆಗಳೇ. ಯಶವಂತ್ ಅಂಡಮಾನಿನ 'ಭಯಂಕರ' ಕಾಡುಜನರಾದ ಜರವಾಗಳ ಬಗ್ಗೆ ಕತೆ ಹೇಳಿ ರೋಮಾಂಚನ, ಕುತೂಹಲ ಹಾಗೂ ಭೀತಿ ಹುಟ್ಟಿಸಿದರು.

'ಟ್ರಾನ್ಸ್‌ಪೋರ್ಟ್ ಕಾರ್ಪೋರೇಷನ್ ಆಫ್ ಇಂಡಿಯಾ' ಎಂಬ ಕಾರ್ಗೋ (ಸರಕು ಸಾಗಾಣಿಕೆ ಹಡಗು) ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದ ರವಿ ಎಂಬ ಯುವಕನನ್ನು ನಾವು ಮೊದಲ ದಿನವಿಡೀ ಹುಡುಕಬೇಕಾಯಿತು. ಈ ಯುವಕನನ್ನು ಪರಿಚಯ ಮಾಡಿಕೊಳ್ಳಬೇಕೆಂದು, ಅದೇ ಸಂಸ್ಥೆಯಲ್ಲಿದ್ದ ಸ್ನೇಹಿತ ರೊಬ್ಬರು ಮದರಾಸಿನಲ್ಲಿ ಸೂಚಿಸಿದ್ದರು. ಸಾವಿರಾರು ಜನ, ನೂರಾರು ಕೋಣೆಗಳಲ್ಲಿ ಪಯಣಿಸುವ ಹಡಗಿನಲ್ಲಿ ಗುರುತಿಲ್ಲದ ವ್ಯಕ್ತಿಯನ್ನು ಪತ್ತೆ ಮಾಡುವುದು ಸಾಧ್ಯವೇ ಇರಲಿಲ್ಲ. ಕಡೆಗೂ ಹಡಗಿನ ಸಿಬ್ಬಂದಿ ಪ್ರಯಾಣಿಕರ ಪಟ್ಟಿಯ ಮೂಲಕ ರವಿಯನ್ನು ಪತ್ತೆಮಾಡಿ ಭೇಟಿ ಮಾಡಿಸಿದರು. ಹೊಸಪೇಟೆಯ ಈ ಹುಡುಗ ತನ್ನ ಮದುವೆ ನಿಶ್ಚಿತಾರ್ಥ ಮುಗಿಸಿಕೊಂಡು ಅಂಡಮಾನಿಗೆ ಮರಳಿ ಹೊರಟಿದ್ದನು. ಆತ ತಲೆಸುತ್ತು ಹಾಗೂ ವಾಂತಿ ಮುಂತಾದ ಕಡಲ ಕಾಯಿಲೆಗಳಿಂದ ಸುಸ್ತಾಗಿ, ತನ್ನ ಕೋಣೆಯಲ್ಲಿ ಬಿದ್ದುಕೊಂಡಿದ್ದರಿಂದ ನಮಗೆ ಬೇಗನೆ ಸಿಗಲಿಲ್ಲ. ರವಿ, ಅಂಡಮಾನಿನಲ್ಲಿ ನಾವಿದ್ದಷ್ಟೂ ದಿನ ಅನೇಕ ಬಗೆಯ ಸಹಾಯಗಳನ್ನು ಮಾಡಿದವನು. ಯಶವಂತ್ ಮತ್ತು ರವಿ ಇಬ್ಬರೂ ಕನ್ನಡಿಗರೇ. ಆದರೆ ಯಶವಂತರಲ್ಲಿ ಅವರ ಕೆಲಸದ ಸ್ವರೂಪದಿಂದಲೋ ಕಡಿಮೆ ಜನಬಳಕೆಯ ದ್ವೀಪವೊಂದರಲ್ಲಿ ಇದ್ದುದ ರಿಂದಲೋ ಒಂದು ಬಗೆಯ ಹಿಂಜರಿಕೆಯ ಸ್ವಭಾವವಿತ್ತು. ಆದರೆ ಕಾರ್ಗೋ ಸಂಸ್ಥೆಯಲ್ಲಿ ಅಧಿಕಾರಿಯಾಗಿದ್ದ ರವಿ, ತನ್ನ ಸೌಂದರ್ಯದಿಂದಲೂ, ಯೌವನದಿಂದಲೂ ಪ್ರತಿಷ್ಠೆಯ ಸ್ವಭಾವದಿಂದಲೂ ಅಂಡಮಾನನ್ನು ಮಾನಸಿಕ ವಾಗಿ ವಶಪಡಿಸಿಕೊಂಡವನಂತೆ ಲೀಲಾಜಾಲವಾಗಿ ವರ್ತಿಸುತ್ತಿದ್ದನು.

### ಟಿಕೆಟ್ ಹಗರಣ

ಮೊದಲ ದಿನ ಎಲ್ಲರೂ ತಾವು ಟಿಕೆಟು ಪಡೆಯಲು ಪಟ್ಟಪಾಡನ್ನು, ಸೆಮಿನಾರಿನಲ್ಲಿ ಪ್ರಬಂಧ ಮಂಡಿಸುವಂತೆ ಮಂಡಿಸತೊಡಗಿದರು; ಭಾರತದ ಸುಪ್ರಸಿದ್ಧ ಭ್ರಷ್ಟಾಚಾರದ ಹಗರಣಗಳಿಗೇನೂ ಕಮ್ಮಿಯಿಲ್ಲ ಎನ್ನುವಂತೆ ಹೇಳತೊಡಗಿದರು. ನಮ್ಮ ಹಾಲಿನ ಗೋಷ್ಠಿಯ ಅಧ್ಯಕ್ಷತೆ ಯೂಸುಫ್ ಕುಟ್ಟಿಯವರದು. ಈ ವಿಷಯದಲ್ಲಿ ತುಂಬ ಅನುಭವವುಂಡವರು ಅವರು. ಅಲ್ಲಿನ ಮಾತುಗಳನ್ನು ಕೇಳಿದಾಗ ಹೆಚ್ಚು ಕಡಿಮೆ ಎಲ್ಲರೂ ರೂ. ೫೦೦ ರಿಂದ ೧೦೦೦ದಷ್ಟು 'ಮಾಮೂಲಿ' ಕೊಟ್ಟಿದ್ದರು. ಟಿಕೆಟು ಮಾರುವ ಒಂದು ವ್ಯವಸ್ಥಿತ ಜಾಲ, ಬಹುದಿನಗಳಿಂದ ಬೇರೂರಿದೆ ಅನಿಸಿತು.



*ಅಂಡಮಾನಿನಲ್ಲಿ ಮಳೆಗಾಳಿಗಳ ಆಟ*

ಆ ಜಾಲ ಕೆಲಸಮಾಡುತ್ತಿದ್ದ ವಿಧಾನ ಹೀಗೆ: ಟಿಕೆಟು ಕೇಳಿಕೊಂಡು ಬಂದವರಿಗೆ 'ಮುಗಿದಿವೆ' ಎಂದೋ, 'ಈ ಸಲ ಸೈನಿಕರಿಗೆ ಇಲ್ಲವೇ ಅಂಡಮಾನಿನ ಸರ್ಕಾರಿ ನೌಕರರಿಗೆ ಮೀಸಲು' ಎಂದೋ ಹೇಳುವುದು; ಗಿರಾಕಿ ಮುಖ ಬಾಡಿಸಿಕೊಂಡು ಹೊರಬಂದ ಕೂಡಲೆ, ಕಾದು ನಿಂತ ಏಜೆಂಟರು ಅವರನ್ನು ಹಿಡಿದು, 'ಹೇಗಾದರೂ ಮಾಡಿ ಟಿಕೆಟು ಕೊಡಿಸುತ್ತೇವೆ' ಎಂದು ಒಪ್ಪಿಸುವುದು; ಕಮೀಶನ್ನಿನ ಪಾಲು ಒಳಗಿನ ಅಧಿಕಾರಿಗಳಿಗೆ ಹೋಗುತ್ತದೆ. ಕೆಲವು ಸೀಜನ್ನುಗಳಲ್ಲಿ ಈ ದಂಧೆ ತುಂಬ ಜೋರಾಗಿ ನಡೆಯುತ್ತದೆ.

ಈ ದಂಧೆಯ ಇನ್ನೊಂದು ಮುಖ ಅಂಡಮಾನಿನಲ್ಲಿ ನಮಗೆ ದರ್ಶನವಾಯಿತು. ನಾವು ಮದ್ರಾಸಿಗೆ ಮರಳಬೇಕಾದ 'ನಾನ್‌ಕೌರಿ' ಹಡಗಿನ ಸೀಟುಗಳನ್ನೆಲ್ಲ ಅಂಡಮಾನಿನ ಶಿಕ್ಷಕರಿಗಾಗಿ ನಿಜವಾಗಿಯೂ ಕಾದಿರಿಸ ಲಾಗಿತ್ತು. ಭಾರತದ ಮೇನ್‌ಲ್ಯಾಂಡಿಗೆ ಬರಬೇಕಾದಲ್ಲಿ ನಾವು ಕಲ್ಕತ್ತಕ್ಕೊ, ವಿಶಾಖಪಟ್ಟಣಕ್ಕೊ ಹೋಗುವ 'ಹರ್ಷವರ್ಧನ'ವೆಂಬ ಹಡಗನ್ನು ಹಿಡಿಯಬೇಕಾಯಿತು. ರವಿ, ತನಗೆ ಗೊತ್ತಿದ್ದ ಒಬ್ಬನನ್ನು ಕರೆದು ನಮ್ಮ ಟಿಕೆಟು ತರಲು ಆಜ್ಞಾಪಿಸಿದ. ಆತ ಕಮೀಶನ್ ಕೇಳದೆ ಸಂತೋಷವಾಗಿ ಟಿಕೆಟುಗಳನ್ನು ತಂದೂಕೊಟ್ಟ. ಎರಡೂ ಬಾರಿ ಲಂಚಕೊಡದೆ ಟಿಕೆಟುಪಡೆದ ಧನ್ಯತೆಯಲ್ಲಿ ನಾವು ಹಡಗನ್ನೇರಿದೆವು. ಟಿಕೆಟುಗಳ ತಪಾಸಣೆ ಮಾಡಲು ಹಡಗಿನ ಅಧಿಕಾರಿಗಳು ಬಂದಾಗ ನಮಗೆ ಗೊತ್ತಾಯಿತು - ನಾವೆಲ್ಲ 'ಅಂಡಮಾನಿನ ಶಾಲಾಶಿಕ್ಷಕರು' ಎಂದು ! ನಾವು ಶಿಕ್ಷಕರು ಎಂದು ತಹಸೀಲ್ದಾರರ ಸರ್ಟಿಫಿಕೇಟು ಲಗತ್ತಿಸಿ, ಆತ ಸಾವಿರಾರು ರೂ. ರಿಯಾಯಿತಿಯಲ್ಲಿ ಟಿಕೆಟು ಖರೀದಿಸಿದ್ದ. ಸದ್ಯ ಹಡಗಿನವರು 'ನೀವು ಅಂಡಮಾನಿನ ಯಾವ ಶಾಲೆಯಲ್ಲಿ ಶಿಕ್ಷಕರು' ಎಂದು ವಿಚಾರಣೆ ಮಾಡಲಿಲ್ಲವಾಗಿ ಬದುಕಿಕೊಂಡೆವು.

ಟಿಕೆಟಿನ ಪರದಾಟದಲ್ಲಿ ಸಿಲುಕಿದ ಬೆಂಗಳೂರಿನ ಎರಡು ಜತೆ ವೃದ್ಧ ದಂಪತಿಗಳ ಪೇಚಾಟ ಮಾತ್ರ ಶೋಚನೀಯವಾಗಿತ್ತು. ಅಂಡಮಾನಿಗೆ ಬಂದ ಹಡಗು ೩ ದಿನ ಬಂದರಿನಲ್ಲಿ ಲಂಗರು ಹಾಕಿ ನಿಲ್ಲುತ್ತದೆ. ಅಷ್ಟರಲ್ಲೇ ಅಂಡಮಾನನ್ನೆಲ್ಲ ನೋಡಿಬಿಡಬೇಕೆಂಬುದು ಅವರ ಹಂಚಿಕೆಯಾಗಿತ್ತು. ಆದರೆ, ನಾವು ಕಂಡಂತೆ, ಮೂರು ದಿನವೂ ಅವರು ಟಿಕೆಟಿಗಾಗಿ ಓಡಾಡುತ್ತಿದ್ದರು. ಕೊನೆಗೂ ಅವರಿಗೆ ಟಿಕೆಟು ಸಿಕ್ಕಿತೋ ಇಲ್ಲವೋ ಗೊತ್ತಾಗಲಿಲ್ಲ. ಹಡಗಿನ ಓಡಾಟದಲ್ಲಿ ಸುಸ್ತಾಗಿ ಬಂದಿದ್ದ ಅವರು, ಅಂಡಮಾನಿನಲ್ಲಿ ಹೆಚ್ಚಿನದೇನನ್ನೂ ನೋಡದೆ ಹಿಂತಿರುಗಿರಬೇಕು. ಅವರು ಊರಿಗೆ ಹೋದ ಮೇಲೆ 'ನಮ್ಮ ವಂಶದಲ್ಲಿ ಮುಂದೆ ಯಾರೂ ಈ ದ್ವೀಪಗಳಿಗೆ ಹೋಗಬಾರದು' ಎಂಬ ಉಯಿಲನ್ನು ಬರೆದಿಡುವುದು ಖಂಡಿತ ಅನಿಸಿತು.

### ಮಾತಿಗಾಗಿ ಬೇಟೆ

ಅಂಡಮಾನಿಗೆ ಕಾಲಿಡುವ ಮೊದಲೆ ಅದರ ಬಗ್ಗೆ ಕೊಂಚ ತಿಳಿದುಕೊಳ್ಳಬೇಕೆಂದು ನಿರ್ಧರಿಸಿದ್ದರಿಂದ ಕಂಡಕಂಡವರನ್ನು ಪರಿಚಯಿಸಿಕೊಂಡು ಮಾತಾಡುವ ಚಟವೊಂದು ನಮಗೆ ಹತ್ತಿಬಿಟ್ಟಿತು. ಮೂರು ದಿನ ಕರಿನೀರಿನ ಮೇಲೆ ಕಡ್ಡಾಯವಾಗಿ ಇರಬೇಕಾದ್ದರಿಂದ, ನಾಲಗೆಯ ಅಸ್ತ್ರವನ್ನು ಹೊರತೆಗೆದು ಝಳಪಿಸಲೇ ಬೇಕಾಯಿತು. ಏನಾದರೂ ನೆಪ ತೆಗೆದು ಜನರನ್ನು ಮಾತಿಗೆಳೆಯುತ್ತಿದ್ದೆವು. ಅಂಡಮಾನಿನಲ್ಲಿ ಬಳಕೆಯಲ್ಲಿರುವ ಮುಖ್ಯ ಭಾಷೆಯೆಂದರೆ, ಹಿಂದಿ, ತಮಿಳು, ತೆಲುಗು ಹಾಗೂ ಬಂಗಾಳಿ. ನಾನು ಹಿಂದಿ, ಹರಕು ಇಂಗ್ಲೀಷು ಮುರುಕು ತಮಿಳು ಬಳಸತೊಡಗಿದೆ. ಒಟ್ಟಿನಲ್ಲಿ ಜನರ ತಲೆತಿನ್ನುವ ಕಲೆಯಲ್ಲಿ ನಾವು ಪ್ರವೀಣರಾದೆವು. ಬಾನು (ನನ್ನ ಹೆಂಡತಿ) ಮತ್ತು ಅರುಣ (ಜಯಕುಮಾರನ ಮಡದಿ) 'ನಾವು ಜನರನ್ನು ಬೇಟೆಯಾಡುತ್ತಿದ್ದೇವೆ' ಎಂದು ತಮಾಷೆ ಮಾಡುತ್ತಿದ್ದರು. ಈ ಆಪಾದನೆಯನ್ನು ಜಯ್ ಮತ್ತು ನಾನು ಮೊದಮೊದಲು ನಂಬಲಿಲ್ಲ. ಆದರೆ ನಂಬಲೇಬೇಕಾದ ಪ್ರಸಂಗವೊಂದು ಕಣ್ಮುಂದೆಯೇ ಘಟಿಸಿತು. ಅಂಡಮಾನಿನ ಬುಡಕಟ್ಟು ಜನರ ಬಗ್ಗೆ ಅಪೂರ್ವ ಮಾಹಿತಿ ಇರುವ ಪೋರ್ಟ್‌ಬ್ಲೇರಿನ

ಮ್ಯೂಸಿಯಮ್ಮಿಗೆ ಹೋಗಿದ್ದೆವು. ಇದ್ದಕ್ಕಿದ್ದಂತೆ ಬಿರುಗಾಳಿ [illegible]. ಆಗಸವೆಲ್ಲ ಕಾರ್ಮೋಡಗಳಿಂದ ಮುಚ್ಚಿ ಹೋಯಿತು. ಗುಡುಗು ಸಿಡಿಲುಗಳ ಸಮೇತ ಮುಂಗಾರಿನ ಭರ್ಜರಿ ಮಳೆ ಧೋಧೋ ಸುರಿಯಲಾರಂಭಿಸಿತು. ಗಾಳಿಮಳೆಗಳ ವೈಭವವನ್ನು ಸವಿಯುತ್ತ ನಾನು ಮ್ಯೂಸಿಯಮ್ಮಿನ ಹೊರಗೆ ನಿಂತಿದ್ದೆ. ಒಬ್ಬ ತಮಿಳು ಯುವಕ, ಮಳೆಗೆ ಬೆದರಿ ಬಂದು ನನ್ನ ಮಗ್ಗುಲಿಗೆ ನಿಂತನು. ನಾನು ಮುಖನೋಡಿ ಮುಗುಳ್ನಗೆಯ ಪೀಠಿಕೆ ಹಾಕಿ ಮೆಲ್ಲನೆ ಮಾತು ತೆಗೆದೆ. ಆತ ಪೊಲೀಸ್ ಇಲಾಖೆಯಲ್ಲಿ ಎಂಟು ವರುಷಗಳಿಂದ ಕೆಲಸ ಮಾಡುತ್ತಿದ್ದನು. ಅವನಿಗೆ ಅಂಡಮಾನಿನ ಬಗ್ಗೆ ಬಹಳ ತಿಳಿವಳಿಕೆಯೇನೂ ಇದ್ದಂತಿರಲಿಲ್ಲ. ಅಲ್ಲೇ ಎರಡು ಕಿ.ಮೀ. ದೂರದಲ್ಲಿ ಕಣ್ಣಿಗೆ ಕಾಣುವ ಪ್ರಸಿದ್ಧ ರಾಸ್‌ದ್ವೀಪಕ್ಕೂ (ಬ್ರಿಟೀಷರ ಆಡಳಿತ ಕೇಂದ್ರವಾಗಿದ್ದ ಜಾಗ) ಆತ ಹೋಗಿರಲಿಲ್ಲ. ಹೋಗಲು ಬಿಡುವು ಸಿಕ್ಕಿರಲಿಲ್ಲವೋ ಸುತ್ತಾಡುವ ಕುತೂಹಲ ವಿರಲಿಲ್ಲವೋ ತಿಳಿಯಲಿಲ್ಲ. ಆದರೆ ಅವನ ಹಠ ಆಶ್ಚರ್ಯ ಹುಟ್ಟಿಸಿತು. ನನ್ನ ಮಾತುಗಳಿಂದ ಸಾಕಾದ ಆತ 'ಮಳೆ ನಿಲ್ಲಲಿ' ಎಂದು ಕಾಯುತ್ತಿದ್ದಿರಬೇಕು. ಆದರೆ ಮಳೆ ನಿಲ್ಲುವ ಸೂಚನೆ ತೋರಲಿಲ್ಲ. ನನ್ನಿಂದ ತಪ್ಪಿಸಿಕೊಳ್ಳಲೆಂಬಂತೆ ಆತ ಮ್ಯೂಸಿಯಮ್ಮಿನ ಒಳ ವರಾಂಡಕ್ಕೆ ನುಸುಳಿದ. ಕೂಡಲೇ ಜಯ್ ಮತ್ತು ಗಣ ಅವನನ್ನು ಹಿಡಿದು ಮಾತಾಡಿಸಲು ಶುರುಮಾಡಿದರು. ಬಹುಶಃ ನಾನು ಕೇಳಿದ ಪ್ರಶ್ನೆಗಳನ್ನೇ ಕೇಳಿರಬೇಕು. ಅವನು ಇದ್ದಕ್ಕಿದ್ದಂತೆ ಗಟ್ಟಿದನಿಯಲ್ಲಿ ''ನನಗೇನೂ ಗೊತ್ತಿಲ್ಲ, ದಯವಿಟ್ಟು ಕೇಳಬೇಡಿ'' ಎಂದವನೇ ಸುರಿವ ಮಳೆಯಲ್ಲೇ ಓಡಿದ.

**ನಡುಗಿಸಿದ ಎದುರಾಳಿಗಳು**

ಆದರೆ ತಲೆ ತಿನ್ನುವ ಕಲೆಯಲ್ಲಿ ನಮ್ಮನ್ನು ನಾಚಿಸುವಂಥ ಇಬ್ಬರು ಎದುರಾಳಿಗಳನ್ನು ನಾವು ಮುಖಾಮುಖಿ ಮಾಡಬೇಕಾಯಿತು. ಮೊದಲನೆಯವನು ಭೈರ. ಈತ ನಾಗಮಂಗಲ ಕಡೆಯವನು. ಅಂಡಮಾನಿನ ನೌಕಾ ಪಡೆಯಲ್ಲಿ ಕೆಲಸ ಮಾಡುತ್ತಿದ್ದವನು. 'ಹಡಗಿನಲ್ಲಿ ಭೇಟಿಯಾದ ಮೊದಲ ಕನ್ನಡಿಗ' ಎಂಬ ಅಭಿಮಾನದಿಂದ ನಾವು ಮೊದಲ ದಿನವೇ ಅವನ ಹಿಂಬಾಲಕರಾಗಿದ್ದೆವು. ಆದರೆ ಆತ ನಿರ್ದಯವಾಗಿ ಮೊಳೆ ಹೊಡೆಯುವ ಆಸಾಮಿ. ಎದುರಿಗಿರುವವರು ಬಾಯಿಬಿಚ್ಚಲು ಅವಕಾಶವೇ ಕೊಡದೆ ಹೇಳಿದ್ದನ್ನೇ ಹೇಳುವವನು. ಎರಡನೆ ದಿನ ನಾವು 'ಹಡಗಿನ ಓಲಾಟಕ್ಕೆ ಸುಸ್ತಾಗುತ್ತಿದೆ' ಎಂದು ನೆಪಹೇಳಿ ನಮ್ಮ ಸೀಟುಗಳಿಗೆ ಓಡಿಹೋಗಿ ಬಚಾವಾಗುತ್ತಿದ್ದೆವು. ಕನ್ನಡ ನಾಡಿನ ಕೀರ್ತಿಯನ್ನು ಕಡಿಮೆ ಮಾಡಲೆಂದೇ ಭೈರ ಹುಟ್ಟಿದಂತಿದ್ದನು.

ನಮ್ಮ ಅದೃಷ್ಟಕ್ಕೆ ಅವನಿಗೆ ತಲೆಮೇಲೆ ಚಿತ್ರವಿಚಿತ್ರವಾಗಿ ಕೂದಲನ್ನು ಕತ್ತರಿಸಿಕೊಂಡಿದ್ದ ಹಂದಿ ಕಟಿಂಗಿನ ನಾಲ್ಕು ಜನ ವಿದೇಶಿಯರು ಗಂಟುಬಿದ್ದರು. ಅಂಡಮಾನಿನ ಏಕಾಂತ ದ್ವೀಪಗಳ ಬಗೆಗಿನ ಅನುಭವಕ್ಕಾಗಿ ಅವರು ಅವನ ಶಿಷ್ಯರಾಗಿರಬೇಕು. ಅಂತೂ ನಾವು ಪಾರಾದೆವು. ಮೂರನೇ ದಿನ ನೋಡುವಲ್ಲಿ, ಅವನ ಶಿಷ್ಯರ ಗುಂಪಿನಲ್ಲಿ ಇಬ್ಬರು ಫಾರಿನ್ ಹೆಂಗಸರೂ ಸೇರಿಕೊಂಡಿದ್ದರು. ಎಲ್ಲರೂ ಹಡಗಿನ ಮೂಲೆಯೊಂದರಲ್ಲಿ ಕುಳಿತು ಭಂಗಿ ಸೇದುತ್ತಿದ್ದರು. ಭೈರ ತಲೆ ಒಲೆಯುತ್ತ ಒಂದೇಸಮ ಕೊರೆಯುತ್ತಿದ್ದ.

ತಲೆ ತಿನ್ನುವುದರಲ್ಲಿ ನಮಗೆ ಸಿಕ್ಕ ಎರಡನೇ ವ್ಯಕ್ತಿ ಮಾಯಾಬಂದರಿನ (ಅಂಡಮಾನಿನ ನಡುಭಾಗದ ಒಂದು ಪಟ್ಟಣ) ಒಬ್ಬ ಪೊಲೀಸ್ ಅಧಿಕಾರಿ. ನಾವು ಮಾಯಾಬಂದರಿನ ಒಂದು ಕಡೆ ನಿಂತು, ಕರ್ಮಟಾಂಗ್ ಎಂಬ (ಬರ್ಮೀಯ್ ಬುಡಕಟ್ಟು ಜನ ನೆಲೆಸಿರುವ) ಒಂದು ಹಳ್ಳಿಗೆ ಹೋಗಲು ಬಸ್ಸಿಗಾಗಿ ಕಾಯುತ್ತಿದ್ದೆವು. ಟೀ ಕುಡಿಯುತ್ತ ಡಬ್ಬಾ ಅಂಗಡಿಯ ಬಳಿ ನಿಂತಿದ್ದ ಒಂದು ವ್ಯಕ್ತಿಗೆ 'ಬಸ್ಸು ಯಾವಾಗ ಬರಬಹುದು?' ಎಂದು ಕೇಳಿದೆವು. ಕೇಳಿದ್ದೇ ತಪ್ಪಾಯಿತು. ದ್ವೀಪಕ್ಕೆ ಹೊಸಬರಂತಿದ್ದ ನಮ್ಮನ್ನು ಆತ ವಿಚಾರಿಸಿದ. ಒತ್ತಾಯದಿಂದ ನಮಗೆಲ್ಲ ಟೀ ತರಿಸಿಕೊಟ್ಟು ಎಲ್ಲೆಲ್ಲಿ ಹೋಗಬೇಕು ಎಂಬ ಬಗ್ಗೆ ಸಲಹೆ ನೀಡತೊಡಗಿದ. ಬಸ್ಸು ಬರಲು ಇನ್ನೂ ಒಂದು ಗಂಟೆ ಸಮಯವಿತ್ತು. ''ಬನ್ನಿ ನನ್ನ ಕಛೇರಿಯೊಳಗೆ ಕೂತುಕೊಳ್ಳಿ'' ಎಂದು ಆಹ್ವಾನಿಸಿದ. ಅವನ ವಿಶ್ವಾಸಕ್ಕೆ ಒಲಿದು ನಾವೂ ಒಳಗೆ ಹೋದೆವು.

ಅದು ಅಂಡಮಾನಿನ ಪೊಲೀಸ್‌ವೈರ್‌ಲೆಸ್ ಕೇಂದ್ರಗಳಲ್ಲಿ ಒಂದಾಗಿತ್ತು. ಜನರೇ ಇಲ್ಲದ ದ್ವೀಪಗಳಲ್ಲಿ ಪೊಲೀಸರಿಗೆ ಕೆಲಸವೂ ಕಮ್ಮಿ. (ಒಬ್ಬ ಸ್ನೇಹಿತರು ಹೇಳಿದಂತೆ ಅಂಡಮಾನಿನಲ್ಲಿ ಕಳ್ಳತನವೇ ಇಲ್ಲ. ಹೀಗಾಗಿ ಅಲ್ಲಿ ಯಾರೂ ವಾಹನಗಳಿಗೆ ಬೀಗ ಹಾಕುವುದಿಲ್ಲ.) ಹತ್ತಿರದ ಬರ್ಮಾದೇಶದಿಂದ ಅತಿಕ್ರಮಣ ಮಾಡಿ ಕಳ್ಳಸಾಗಣೆದಾರರು ಬಂದಾಗ ಮಾತ್ರ ಈ ವೈರ್‌ಲೆಸ್‌ಗಳಿಗೆ ಕೆಲಸ. ಕಛೇರಿ ಬಿಕೋ ಎನ್ನುತ್ತಿತ್ತು. ಮಾಡಲು ಕೆಲಸವೂ ಮಾತಾಡಲು ಜನರೂ ಕಡಿಮೆಯಿದ್ದಾಗ ಜನ, ಮಾತಿಗೆ ಹುಲಿಯಂತೆ ಹಸಿದಿರುತ್ತಾರೆ ಅನಿಸುತ್ತದೆ. ಆತನ ಹೆಸರು ಪಾಂಡೆ. ಬಿಹಾರಿನವನು. ಕಳೆದ ೨೦ ವರ್ಷಗಳಿಂದ ಅಂಡಮಾನಿನಲ್ಲಿದ್ದಾನೆ. ಕುಟುಂಬವೆಲ್ಲ ಬಿಹಾರಿನಲ್ಲಿದೆ. ಪಾಂಡೆ, ನಮ್ಮನ್ನು ಕಛೇರಿಯಲ್ಲಿ ಕೂಡಿಹಾಕಿ, ಬೇಕಾದ್ದು ಬೇಡದ್ದು ಕೊರೆಯತೊಡಗಿದ. 'ಇದೆಲ್ಲಿ ಸಹವಾಸವಪ್ಪ, ಬಸ್ಸು ತಪ್ಪಿಸುವಂತೆ ಕಾಣುತ್ತಾನೆ' ಎಂದು ಚಡಪಡಿಸತೊಡಗಿದೆವು. ನಾವು ಕರ್ನಾಟಕದವರು ಎಂದು ಗೊತ್ತಾದ ಮೇಲೆ, ತನ್ನ ಕೈಕೆಳಗೆ ಕೆಲಸ ಮಾಡುವ ಅಪ್ಪಾಜಿ ಎನ್ನುವ ಕೊಡಗಿನ ಕಡೆಯವರನ್ನು ಕರೆಕಳಿಸಿದ. ಯಾಕೋ ಏನೋ ಅಪ್ಪಾಜಿ ಬರಲೇ ಇಲ್ಲ.

ಪಾಂಡೆಗೆ ನಾವು 'ಸುತ್ತಿಗೆ' ಎಂದು ಹೆಸರಿಟ್ಟೆವು. ಅಷ್ಟರಲ್ಲಿ ಈ ಸುತ್ತಿಗೆಯಿಂದ ಪಾರುಮಾಡುವ ದೇವತೆಯಂತೆ ಬಸ್ಸು 'ಭರ್' ಎಂದು ಶಬ್ದಮಾಡುತ್ತಾ ಬಂದಿತು. ಜಿಂಕೆಗಳಂತೆ ಚಂಗನೆ ನೆಗೆದು ರಸ್ತೆಗೆ ಬಂದೆವು.

ದಿನವಿಡೀ ಸುತ್ತಾಡಿ ನಾವು ಮಾಯಾಬಂದರಿನ ಗೆಸ್ಟ್‌ಹೌಸಿನಲ್ಲಿ ರಾತ್ರಿಯೂಟಕ್ಕೆ ಕುಳಿತಾಗ ಒಂದು ವ್ಯಕ್ತಿ 'ಹೇಗಿತ್ತು ಕರ್ಮಟಾಂಗ್' ಎನ್ನುತ್ತ ಟೇಬಲ್ ಹತ್ತಿರಕ್ಕೆ ಬಂದಿತು. ನೋಡಿದರೆ ಸುತ್ತಿಗೆ! 'ಇದೇನು ಇಲ್ಲಿ?, ಎಂದು ಕೇಳಿದೆವು. 'ಇಪ್ಪತ್ತು ವರುಷಗಳಿಂದ ಈ ಗೆಸ್ಟ್‌ಹೌಸಿನಲ್ಲೇ ನನ್ನ ವಾಸ. ನಿಮ್ಮ ಪಕ್ಕದ್ದೇ ರೂಮು. ಊಟ ಮಾಡಿ ಬರ್ತೇನೆ. ಮಾತಾಡೋಣ' ಎಂದು ಪಾಂಡೆ ಹಲ್ಲುಬಿಟ್ಟನು. ನಾವು ನಡುಗಿಹೋದೆವು.

ಮಾಯಾಬಂದರಿನಲ್ಲಿ ನಾವು ಇದ್ದಷ್ಟು ದಿನ (ಈ ಊರಿಗೆ ಇರುವುದೊಂದೇ ಬೀದಿ) ತಪ್ಪಿಸಿಕೊಂಡು ತಿರುಗುವುದರಲ್ಲಿ ಪರಿಣತಿ ಪಡೆದೆವು. ದ್ವೀಪಗಳಲ್ಲಿ ಇಂಥ ಸುತ್ತಿಗೆ-ಭೈರಿಗೆಗಳಿದ್ದರೆ, ಜನರಾದರೂ ಎಲ್ಲಿ ಓಡಬೇಕು? ಅಥವಾ ಇಂಥವರಿಂದ ತಪ್ಪಿಸಿಕೊಂಡು ಬದುಕುಳಿಯಲು ಅವರು ಗೂಢ ಉಪಾಯಗಳನ್ನು ಕಂಡುಕೊಂಡಿರಬೇಕು. ಬ್ರಿಟೀಷರೇನೋ ತಮಗೆ 'ಅಪಾಯಕಾರಿ' ಅನಿಸಿದ ಜನರನ್ನು ದೂರವಿಡಲು ಅಂಡಮಾನಿನಲ್ಲಿ ಜೈಲನ್ನು ಕಟ್ಟಿದರು. ಅದರಂತೆ ಭಾರತದ ಮೇನ್‌ಲ್ಯಾಂಡಿನ ಜನ ಈ ಸುತ್ತಿಗೆ-ಭೈರಿಗೆಗಳನ್ನು ಉಪಾಯವಾಗಿ ಅಂಡಮಾನಿಗೆ ರವಾನಿಸಿರಬಹುದೆ? ಎಂಬ ಸಂಶಯ ಬಂದಿತು. ಏನೇ ಇರಲಿ, ೨೦ ವರ್ಷಗಳಿಂದ ಪಾಂಡೆಯನ್ನು ಬಿಹಾರಿಗೆ ಹಿಂತಿರುಗದಂತೆ ನೋಡಿಕೊಂಡಿರುವ ಅವರ ಜಾಣ್ಮೆ ಮೆಚ್ಚುವಂಥದ್ದು.

ರಹಮತ್ ತರೀಕೆರೆ
ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬



# ಇತ್ತೀಚಿನ ಮೂರು ಸಿನೆಮಾಗಳು

ಈಚಿನ ದಿನಗಳಲ್ಲಿ ಕನ್ನಡ ಚಿತ್ರರಂಗಕ್ಕೆ ಹೊಸತನ್ನು ತಂದುಕೊಟ್ಟ, ಅಥವಾ ಆ ಪ್ರಯತ್ನದ, ಮೂರು ಚಿತ್ರಗಳೆಂದರೆ 'ಉಪೇಂದ್ರ', 'ಭಾರತ್-೨೦೦೦' ಮತ್ತು 'ಕಾನೂರು ಹೆಗ್ಗಡಿತಿ'. ಆದರೆ ಹಳತೆಂದರೆ ಎಲ್ಲವೂ ಕೆಡುಕೇ ಹೇಗಲ್ಲವೋ ಹಾಗೆಯೇ ಹೊಸತೆಂದರೆ ಎಲ್ಲವೂ ಒಳ್ಳೆಯದೇ ಆಗಬೇಕಿಲ್ಲ.

ನಿರ್ದೇಶಕ-ನಟ ಉಪೇಂದ್ರರಿಗೆ ಕನ್ನಡ ಚಿತ್ರರಂಗದಲ್ಲಿ ಭಿನ್ನ ಹೆಸರು ತಂದುಕೊಟ್ಟ ಚಿತ್ರ ಸ್ವಲ್ಪಮಟ್ಟಿಗೆ ಅಬ್ಸರ್ಡ್ ನಾಟಕಗಳ ಸ್ಫೂರ್ತಿಯೇನೋ ಎನಿಸುವಂತಿದ್ದ 'ಎ'. ಇದರಲ್ಲಿ ನಾಯಕಿ ಚಾಂದಿನಿಯ ಮಾದಕ ಕಣ್ಣುಗಳು, ಗುಂಗು ತರಿಸುವ ಹಾಡುಗಳು, ಉತ್ಕೃಷ್ಟ ಛಾಯಾಗ್ರಹಣ, ಇವೆಲ್ಲಕ್ಕಿಂತ ಮಿಗಿಲಾಗಿ ಚಿತ್ರವೀಕ್ಷಕನ ನಾಡಿಹಿಡಿದು ಆತನಿಗೆ ಬೇಕೆನಿಸುವಂತೆಯೇ ಅಳವಡಿಸಲಾಗಿದ್ದ ಸಂಭಾಷಣೆ – ಇವೆಲ್ಲ ಸೇರಿ ಚಿತ್ರಕ್ಕೆ ಅಭೂತ ಪೂರ್ವ ಯಶಸ್ಸು ತಂದುಕೊಟ್ಟಿತು. ಇದೇ ಜಾಡಿನಲ್ಲಿಯೇ ಮುಂದುವರಿಯಬಯಸಿ ಉಪೇಂದ್ರ ನಂತರ ಭಯೋತ್ಪಾದಕ ಚಟುವಟಿಕೆಗಳ ಹಿನ್ನೆಲೆಯಲ್ಲಿ 'ಸ್ವಸ್ತಿಕ್' ನಿರ್ದೇಶಿಸಿದರೂ ಅದು ಕಳೆದ ವರ್ಷದ ಭಾರಿ ಸೋಲುಗಳಲ್ಲಿ ಒಂದಾಯಿತು.

ಇವೆಲ್ಲದರ ಲಾಭ ಪಡೆದು ಈ ವರ್ಷ ನೀಡಿರುವ ಚಿತ್ರ ತಮ್ಮದೇ ಹೆಸರಿನ 'ಉಪೇಂದ್ರ.' ಈ ಚಿತ್ರ ಅರ್ಥವಾಗಬೇಕಾದರೆ ಇನ್ನೊಮ್ಮೆ ನೋಡಬೇಕು ಎಂಬ ಜಾಹೀರಾತೇ ಚಿತ್ರವೀಕ್ಷಕ ಇದನ್ನೊಂದು ಸವಾಲನ್ನಾಗಿ ತೆಗೆದುಕೊಳ್ಳಲು ಸಾಕು. ಕೆಲವರು ಅಮಾಯಕರು ಚಿತ್ರವನ್ನು ಎರಡನೇ ಬಾರಿ ನೋಡಿದಾಗಲೇ ತಮಗೆ ಅರ್ಥವಾಯಿತೆಂದು ಹೇಳಿಯೂ ಇದ್ದಾರೆ. ಉಪೇಂದ್ರ ಬ್ರೇನ್‌ವಾಷಿಂಗ್‌ನಲ್ಲಿ ಸಮರ್ಥರು ಎಂಬುದಕ್ಕೆ ಇದೊಂದು ನಿದರ್ಶನ.



'ಕಾನೂರು ಹೆಗ್ಗಡಿತಿ'ಯ ಒಂದು ದೃಶ್ಯ

ಕೆಲವು ಪತ್ರಿಕಾ ವಿಮರ್ಶೆಗಳಲ್ಲಿ 'ಉಪೇಂದ್ರ' ಚಿತ್ರದ ಅಂತಿಮ ಸಂದೇಶವನ್ನು ವಿಶ್ಲೇಷಿಸಿ ಆ ಹಿನ್ನೆಲೆಯಲ್ಲಿ ಚಿತ್ರದ ಎಲ್ಲ ಹೊಲಸುತನವೂ, ನಾಯಕನ ಅಸಹ್ಯ ಹುಟ್ಟಿಸುವಂತಹ ಎಲ್ಲ ವಿಕ್ಷೇಪತನದ ವರ್ತನೆಯೂ ಸಮರ್ಥನೀಯ ಎನ್ನಲಾಗಿದೆ. ಉದಾಹರಣೆಗೆ ಚಿತ್ರದ ಸನ್ನಿವೇಶವೊಂದರಲ್ಲಿ ಮೂವರು ನಾಯಕನಟಿಯರಲ್ಲಿ ಒಬ್ಬರಾದ ಪ್ರೇಮ ಮಹಿಳೆಯ ದೇಹದ ಮಾರಾಟವನ್ನು ಅಸಭ್ಯವಾದ ರೀತಿಯಲ್ಲಿ ವ್ಯಾಖ್ಯಾನಿಸಿ ದೇಹಪ್ರದರ್ಶನ ಮಾಡುವುದಿದೆ. ಅದು ಅಂತಹ ವ್ಯವಹಾರದ ಒಂದು ರೀತಿಯ ಸಮರ್ಥನೆ ಮಾತ್ರವೇ ಅಲ್ಲದೆ ಲಕ್ಷಾಂತರ ಮಂದಿ ದುಡಿವ ಮಹಿಳೆಯರಿಗೆ ನೇರ ಅವಮಾನವೆಂಬುದು ಎಲ್ಲರ ಗಮನಕ್ಕೂ ಬರಬೇಕಾಗಿದೆ. ಇಂಥ ವಿಕೃತ ಸಿದ್ಧಾಂತವನ್ನು ಯಾವ ಮಹಿಳಾ ಸಂಘಟನೆಯೂ ಪ್ರಶ್ನಿಸದಿರುವುದಂತೂ ಇನ್ನೂ ಸೋಜಿಗ. ಮುಂದಿನ ಸನ್ನಿವೇಶವಂತೂ ಎಲ್ಲ ಸೌಂಡ್ ಎಫೆಕ್ಟ್ ಸೇರಿದಂತೆ ಸ್ಪಷ್ಟ ಕಾಮಕೇಳಿಯದು. ಇದು ಕೇವಲ ಗಲ್ಲಾಪೆಟ್ಟಿಗೆ ಆಕರ್ಷಣೆಯೆಂಬುದರಲ್ಲಿ ಯಾವ ಅನುಮಾನವೂ ಬೇಕಿಲ್ಲ. ಆದರೆ ಚಿತ್ರದ ಕೊನೆಯಲ್ಲಿ ಬರುವ ಗಹನವಾದ ಸಂದೇಶವೊಂದು ಇವೆಲ್ಲಕ್ಕೂ ಸಮರ್ಪಕ ವಿವರಣೆ ಕೊಡುವ ಸೋಗುಹಾಕುತ್ತದೆ. 'ನಾನು' ಎಂಬ ಅಹಂಕಾರವೇ ಜಗತ್ತಿನ ಸಮಸ್ತ ಕೆಡಕುಗಳಿಗೆ ಹಾನಿ, ಇದು ಕಡಮೆಯಾದಂತೆಲ್ಲಾ ಸುಂದರ ಸಮಾಜ ಸೃಷ್ಟಿಯಾಗುತ್ತದೆ ಎಂಬರ್ಥದ್ದು. ಇದು ಕೇವಲ ಬಡಬಡಿಕೆಯ ಮಾತು.

ಗ್ಯಾರಿ ಝುಕಾವ್, ವೇನ್ ಡ್ಯಯರ್, ಬರ್ನೀ ಸೀಗಲ್ ಮುಂತಾದ ವಿಜ್ಞಾನಿಗಳು, ಮನೋವೈದ್ಯರು, ಶಸ್ತ್ರಚಿಕಿತ್ಸಕರು ಹೇಳುತ್ತಿರುವ ಮಾತುಗಳನ್ನು ಹೇಳಲು ಇವರು ಸಮಸ್ತ ಸಿನಿಮಾ ಮಸಾಲೆಗಳನ್ನೂ ಬಳಸಿಕೊಂಡು ಪ್ರೇಕ್ಷಕನಿಗೆ ಮಂಕುಬೂದಿ ಎರಚಿರುವುದಕ್ಕೆ ನಿರ್ದೇಶಕ-ನಾಯಕನಿಗೆ ಕೊನೆಯಲ್ಲಿ ತನ್ನ ಸಂದೇಶ ಹೇಳುವುದಕ್ಕೆ ಉಪನ್ಯಾಸದ ವಿನಾ ಮಾಧ್ಯಮದ್ದೇ ಆದ ಬೇರೆ ಯಾವುದೇ ರೀತಿಯ ಭಾಷೆಯನ್ನೂ ದುಡಿಸಿಕೊಳ್ಳ ಆಗುವುದಿಲ್ಲ. ಅದು ಯಾವುದೇ [illegible] ಪ್ರಸಂಗಗಳಲ್ಲಿ [illegible] ಏಕವ್ಯಕ್ತಿಯ ಮಾತುಗಾರಿಕೆ, [illegible] ಭಾಷಣದಂತೆ [illegible] ಸೋಲು, ಸೋಗಲಾಡಿತನ [illegible] ಕಾಣುವುದು ಇಲ್ಲೇ. ವಾಸ್ತವವಾಗಿ ಅವರು ಮಾಡಿರುವುದೇನೆಂದರೆ 'ಎ' ಕೇಳಿದಂತೆ ಎಲ್ಲ ಮಸಾಲಾ ಚಿತ್ರಗಳ ಲವಾಜಮೆಯನ್ನೂ [illegible] ಘೋರವಾಗಿ, ಅಶ್ಲೀಲವಾಗಿ ಬಳಸಿಕೊಂಡು ಕೊನೆಗೆ ನಮ್ಮ ಅಮಾಯಕ ಭಾರತೀಯ ಮನಸ್ಸಿಗೆ ಒಪ್ಪುವಂತೆ ಅದೆಲ್ಲಕ್ಕೂ ಒಂದು ಚಿಂತನೆಯ ಮೆರಗು ಕೊಟ್ಟಿರುವುದು!

* * *

ಇನ್ನು ತೆಲುಗಿನಿಂದ ಡಬ್ ಆಗಿ ತನ್ನದೇ ವಿವಾದ ಸೃಷ್ಟಿಸಿದ ಬಾಬು ಅವರ 'ಭಾರತ್-೨೦೦೦.' ಇಲ್ಲೂ ಖಂಡನೀಯವೆನಿಸುವುದು ಕೇವಲ ಮಾಧ್ಯಮದ ದೃಷ್ಟಿಯಿಂದಲೇ ಬಾಬು ಜನರ ಕಣ್ಣಿಗೆ ಮಣ್ಣೆರಚಿರುವುದು. ಇಡೀ ಜಗತ್ತೇ ಹೊಸ ಮನ್ವಂತರವೊಂದಕ್ಕೆ ಕಾಲಿಡುತ್ತಿರುವ ಸಂಭ್ರಮದಲ್ಲಿರುವಾಗ ಬಾಬು ತಮ್ಮ ಚಿತ್ರದ ಮೂಲಕ ಹೇಳುವ ಕತೆಯಾದರೂ ಎಂಥದ್ದು? ಪೆಟ್ರೋಲ್‌ಗೆ ಪರ್ಯಾಯ ರಾಸಾಯನಿಕವೊಂದನ್ನು ಕಂಡುಹಿಡಿದು ದೇಶೋದ್ಧಾರ ಮಾಡುವ ಕನಸು ಕಾಣುತ್ತಿರುವಾಗಲೇ ರಾಷ್ಟ್ರಘಾತುಕರ ಸಂಚಿನಿಂದ ಅಪಘಾತ ಒಂದರಲ್ಲಿ ಸತ್ತ ವಿಜ್ಞಾನಿ ತಂದೆ ತನ್ನ ಸಂಶೋಧನೆಯ ಫಲ ಪರದೇಶದವರ ಕೈಸೇರಬಾರದೆಂದು ಭೂತವಾಗಿ ಕಾಣಿಸಿಕೊಂಡು ಮಕ್ಕಳಿಗೆ ಮಾರ್ಗದರ್ಶನ ಮಾಡುವುದು! ಇಲ್ಲಿ ಮಂತ್ರ, ಮಾಟಗಳ ಧಾರಾಳ ಬಳಕೆ. ಇದೊಂದು ಫ್ಯಾಂಟಸಿ, ಇದಕ್ಕೆ ಆಕ್ಷೇಪಣೆಯೇಕೆ ಎಂದು ಕೇಳಬಹುದು. ಆದರೆ ಚಿತ್ರದ ಹೆಸರನ್ನು ಗಮನಿಸಿ : 'ಭಾರತ್-೨೦೦೦.' ಬಾಬು ದೃಷ್ಟಿಯಲ್ಲಿ ಭಾರತ ೨೧ನೇ ಶತಮಾನಕ್ಕೆ ಕಾಲಿಡುವ ಬಗೆ ಇಂಥದ್ದು. ನಿರೂಪಣೆಯನ್ನು ನೋಡೋಣವೆಂದರೆ ಅದರಲ್ಲೂ ವಿಶೇಷವೇನಿಲ್ಲ.

* * *

ಅರೆಬರೆ ಸಮಕಾಲೀನ ವಸ್ತುಗಳನ್ನಾಧರಿಸಿದ ಈ ಚಿತ್ರಗಳನ್ನು ನೋಡಿದ ನಂತರ ನಿಜಕ್ಕೂ ಹಿತವೆನಿಸುವ ಅನುಭವ ನೀಡಿದುದು ಗಿರೀಶ್ ಕಾರ್ನಾಡ್ ಅವರು ಕುವೆಂಪುರವರ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಕಾದಂಬರಿಯನ್ನು ಆಧರಿಸಿ ನೀಡಿರುವ 'ಕಾನೂರು ಹೆಗ್ಗಡಿತಿ.' ಸ್ವಾತಂತ್ರ್ಯ ಪೂರ್ವದ ಹಿಂದಿನ ಕಥೆಯನ್ನು ಅದೇ ಕಾಲಕ್ಕೆ ಹೊಂದುವಂತೆ ತೆರೆಗೆ ಅಳವಡಿಸಿಕೊಂಡಿರುವುದು ಚಿತ್ರದ ಒಂದು ವಿಶೇಷ ಮಾತ್ರವಷ್ಟೆ. ಅಷ್ಟೇ ಆಗಿದ್ದರೆ ಚಿತ್ರಕ್ಕೆ ತನ್ನದೇ ಆಯಾಮ ಬರುತ್ತಿರಲಿಲ್ಲ. ಇದು ಮಲೆನಾಡಿನ ಪ್ರಕೃತಿ ಸೌಂದರ್ಯದ ಹಿಂದಿನ ಕರಾಳತೆಯನ್ನು, ಆ ಕರಾಳತೆಯಲ್ಲೂ ಮಿಂಚುವ ಮಾನವತೆಯನ್ನು ವೀಕ್ಷಕನೆದುರಿಗೆ ಪದರಪದರವಾಗಿ ತೆರೆದಿಡುತ್ತದೆ. ಇಲ್ಲಿ ತೋರಿಕೆಯ ಸಂದೇಶವಾಗಲೀ, ತಾಂತ್ರಿಕ ಡಂಭಾಚಾರವಾಗಲೀ ಇಲ್ಲ. ಪ್ರತಿಯೊಂದು ಪಾತ್ರದ ಬೆಳವಣಿಗೆಯೂ ತುಂಬ ನವುರು. ಕುವೆಂಪುರವರು ಕಾಯಾ, ವಾಚಾ, ಮನಸಾ ದ್ವೇಷಿಸುತ್ತಿದ್ದ ಪೌರೋಹಿತ್ಯಶಾಹಿಯ ಪ್ರತಿನಿಧಿಯೊಬ್ಬರನ್ನು ಬಿಟ್ಟು ಉಳಿದೆಲ್ಲ ಪಾತ್ರಗಳೂ ಅವು ಪರಿಣಾಮದಲ್ಲಿ ಎಷ್ಟೇ ಕೆಟ್ಟದಾಗಿದ್ದರೂ ತಮ್ಮ ಮನಸ್ಸಿನ ಆಂತರಿಕ ಸಂಘರ್ಷಗಳನ್ನು, ದೌರ್ಬಲ್ಯಗಳನ್ನು ನಮ್ಮ ಹೃದಯಕ್ಕೆ ನೇರವಾಗಿ ತಾಗಿಸುವ ಮೂಲಕ ಆ ಮಟ್ಟಿಗೆ ನಮ್ಮ ಸಹಾನುಭೂತಿಯನ್ನೇ ಪಡೆಯುತ್ತವೆ. ಹೀಗೆ ಚಿತ್ರ ಇಲ್ಲಿ ಮಹಾಕಾವ್ಯಗಳ ಗುಣವನ್ನು ತನ್ನಲ್ಲಿ ಉಳಿಸಿಕೊಂಡಿದೆ. ಈ ಚಿತ್ರದ ಕತೆಯಲ್ಲಿ ವಿಲನ್ ಇಲ್ಲ. ಆದರೆ ಶಬ್ದಗ್ರಾಹಕ ಇಡೀ ಚಿತ್ರಕ್ಕೆ ವಿಲನ್ ಆಗಿ ಪರಿಣಮಿಸಿರುವುದು ಮಾತ್ರ ಒಂದು ದುರಂತ. ಚಿತ್ರದ ಹಲವು ಮುಖ್ಯ ಭಾಗಗಳಲ್ಲಿ ಶಬ್ದವೇ ಇಲ್ಲ. ಇನ್ನು ಹಲವೆಡೆ ಸಂಭಾಷಣೆ ಏನೇನೂ ಅರ್ಥವಾಗುವುದಿಲ್ಲ. ಇನ್ನು ಬಿ.ವಿ. ಕಾರಂತರ ಹಿನ್ನೆಲೆ ಸಂಗೀತವನ್ನಂತೂ ಎಲ್ಲಿದೆ ಎಂದು ಹುಡುಕಬೇಕಾಗುತ್ತದೆ. ಅತ್ಯಾಧುನಿಕ ಉಪಕರಣಗಳನ್ನು ಹೊಂದಿರುವ ನಮ್ಮ ಧ್ವನಿ ಮುದ್ರಣ ಸ್ಟೂಡಿಯೋಗಳು ಇನ್ನೂ ಕಾರ್ಯನಿರ್ವಹಣೆಯಲ್ಲಿ ಕಲಿಯುವುದು ಬಹಳಷ್ಟಿದೆ ಎನ್ನುವುದನ್ನು ಇದು ಎತ್ತಿ ತೋರಿಸುತ್ತದೆ.

ಟಿ. ಸೀತಾರಾಮ್
'ಶ್ರೀ ಲಕ್ಷ್ಮೀ' [illegible], ೯ನೇ ಕ್ರಾಸ್, [illegible] ಮೇನ್, [illegible], ಬೆಂಗಳೂರು-[illegible]

# ಯೋಗಪ್ರವೇಶ - ೫

**ಜಿ. ರಾಮಕೃಷ್ಣ**

ದೇಹ ಮತ್ತು ಮನಸ್ಸು ಸಮತೋಲನವನ್ನು ಜೊತೆಯಾಗಿ ಕ್ರಿಯಾಶೀಲವಾಗುವುದು ಯೋಗಾಭ್ಯಾಸದಲ್ಲಿ ಪ್ರಾಥಮಿಕ ಆವಶ್ಯಕತೆ ಎನ್ನುವುದನ್ನು ನಾವು ಈವರೆಗೆ ನೋಡಿದ್ದೇವೆ. ಈ ಸಮತೋಲನದ ಸಾಧನೆಗೆ ಧ್ಯಾನ ಪ್ರಮುಖ ಪ್ರಕಾರ ಎನ್ನಬಹುದು. (ಇದನ್ನು ಬೌದ್ಧ ಸಂಪ್ರದಾಯದಲ್ಲಿ 'ಝಾನ' ಎನ್ನುತ್ತಾರೆ. ಜಪಾನಿನ 'ಝೆನ್' ಎನ್ನುವುದು ಇದರ ಇನ್ನೊಂದು ರೂಪ. ಚೀನಾದ 'ತವೋ' ಅಭ್ಯಾಸಗಳಲ್ಲಿಯೂ ಇದರ ಛಾಯೆ ಕಂಡುಬರುತ್ತದೆ.)

ಧ್ಯಾನದ ಅಭ್ಯಾಸಕ್ಕೆ ಪೂರ್ವಭಾವಿಯಾಗಿ ದೇಹ ಮತ್ತು ಮನಸ್ಸು ಸ್ಥಿಮಿತವಾಗಿರಬೇಕು. ಆ ಕಡೆ ಮತ್ತು ಈ ಕಡೆ ಅವು ಜಗ್ಗುತ್ತಿದ್ದರೆ ಧ್ಯಾನಾಸಕ್ತರಾಗುವುದು ಅಸಾಧ್ಯದ ಮಾತು. ಭಾವನೆಗಳು ನಿಜವಾಗಿಯೂ ಸ್ಥಿರವಾಗಿರುವುದು ಮತ್ತು ವ್ಯಕ್ತಿತ್ವವು ಋಜುತ್ವದಿಂದ ಕೂಡಿರುವುದು ಅಪೇಕ್ಷಣೀಯ ಎನ್ನುವುದಾದರೆ ಯೋಗಾಭ್ಯಾಸವನ್ನು ಮಾನ್ಯ ಮಾಡಬಹುದು: ಅದರಲ್ಲಿ ಧ್ಯಾನಕ್ಕೆ ವಿಶಿಷ್ಟ ಸ್ಥಾನವಿದೆ. ಅಂದರೆ, ಯಾವಾಗಲೂ ಮೂಗು ಹಿಡಿದುಕೊಂಡು ಒಂದು ಮೂಲೆಯಲ್ಲಿ ಕೂತಿರಬೇಕೆಂದು ಅರ್ಥವಲ್ಲ; ಅಥವಾ ಹಿಮಾಲಯಕ್ಕೆ ಹೋಗಿ ಒಂದು ಗುಹೆ ಹುಡುಕಿಕೊಳ್ಳಬೇಕೆಂದೂ ಅಲ್ಲ. ದಿನನಿತ್ಯದ ಬೇರಲ್ಲ ವ್ಯವಹಾರಗಳಲ್ಲಿ ತೊಡಗಿಕೊಳ್ಳುತ್ತಲೇ ನಿರ್ದಿಷ್ಟವಾದ ಸಮಯವನ್ನು ಕಾದಿರಿಸಿ ಧ್ಯಾನದಲ್ಲಿ ತೊಡಗಬಹುದು. ಆ ಕ್ರಿಯೆಗೆ ದೇವರಲ್ಲಿ ನಂಬಿಕೆ ಕೂಡ ಅನವಶ್ಯಕ. (ನಂಬಿದ್ದರೆ ಅದರಿಂದ ತೊಡಕುಂಟಾಗುತ್ತದೆಂದು ಇದರ ಸೂಚನೆಯಲ್ಲ). ಶರೀರವು



ಗಡಸುತನವನ್ನು ಬಿಟ್ಟುಕೊಟ್ಟು, ಮನಸ್ಸು ವ್ಯಥಾ ಅಲೆಯುವುದನ್ನು ತಪ್ಪಿಸಿ, ಏಕತಾನತೆಯನ್ನು ಮೈಗೂಡಿಸಿಕೊಳ್ಳುವುದೇ ಧ್ಯಾನ.

ಅದನ್ನು ಅಭ್ಯಾಸ ಮಾಡುವಾಗ ಹೇಗೆ ಕುಳಿತುಕೊಳ್ಳಬೇಕು ? ಇದಕ್ಕೆ ಕೊಡಲಾಗುವ ಸಾಮಾನ್ಯ ಉತ್ತರ : ಪದ್ಮಾಸನದಲ್ಲಿ ಅಥವಾ ಸಿದ್ಧಾಸನದಲ್ಲಿ ಎಂದು. ಅದನ್ನೇ ದೊಡ್ಡದು ಮಾಡುವ ಅಗತ್ಯವಿಲ್ಲ. ಹೇಗೆ ಬೇಕಾದರೂ ಕುಳಿತು ಧ್ಯಾನದಲ್ಲಿ ನಿರತರಾಗಬಹುದು. ಕುರ್ಚಿಯಲ್ಲಿ ಕುಳಿತುಕೊಳ್ಳಲೇಕೂಡದೆಂಬ ನಿಯಮ ವೇನೂ ಇಲ್ಲ. ಇರುವ ನಿಯಮ ಬಹಳ ಸರಳ: ಹೇಗಾದರೂ ಕುಳಿತುಕೊಳ್ಳಿ, ಆದರೆ ಧ್ಯಾನವೆಂದರೆ ನಿದ್ದೆ ಹೋಗುವುದಲ್ಲ. ಎರಡನೆಯದಾಗಿ, ದೇಹ-ಮನಸ್ಸುಗಳ ಸ್ಥಿರತೆಯನ್ನು ಕಲಕುವಂತಹ ರೀತಿಯಲ್ಲಿ ಆಸೀನರಾಗಬಾರದು.

ಉದಾಹರಣೆಯೊಂದನ್ನು ನೋಡೋಣ. ಬಸ್ಸಿನಲ್ಲೋ, ರೈಲಿನಲ್ಲೋ ಪ್ರಯಾಣ ಮಾಡುವಾಗ ತೂಕಡಿಕೆ ಬಂದು ತಲೆ ಎತ್ತೆತ್ತಲೋ ವಾಲುವುದು ಸಾಮಾನ್ಯ ಅನುಭವ. ಪಕ್ಕದಲ್ಲಿ ಕುಳಿತವರು ಹಾಗೆ ವಾಲುತ್ತಾ ನಮ್ಮ ಮೇಲೆ ಒರಗಿದರೆ ಮುಜುಗರ, ಅಸಮಾಧಾನ ಹೇಳತೀರದು. ಒಂದು ಚಿಕ್ಕ ಪ್ರಯತ್ನದಿಂದ ಬೇರೆಯವರ ಮೇಲೆ ವಾಲುವುದನ್ನು ತಪ್ಪಿಸಬಹುದು. ಅದೇನೆಂದರೆ ಶರೀರವನ್ನು ''ಸಮಕಾಯ ಶಿರೋಗ್ರೀವ'' ಸ್ಥಿತಿಯಲ್ಲಿಡುವುದು. ಅಂದರೆ ತಲೆ, ಕತ್ತು ಮತ್ತು ಮುಂಡ ನೆಟ್ಟಗೆ ಒಂದು ಸರಳರೇಖೆಯ ಮಾದರಿಯಲ್ಲಿರುವಂತೆ ಕುಳಿತುಕೊಳ್ಳು

---

(೪೭ನೇ ಪುಟದಿಂದ)

ಮತೀಯವಾದಿಗಳು, ಸಂಘಪರಿವಾರದಷ್ಟು ಬಲಿಷ್ಠರಾಗಲು ಸಾಧ್ಯವೇ ಇಲ್ಲ. ನಮ್ಮ ರಾಜಕೀಯದಲ್ಲಂತೂ ಮುಸ್ಲಿಮ್ ಮತೀಯವಾದಿ ಸಂಘಟನೆಗಳ ಪ್ರಭಾವ ಏನೇನೂ ಇಲ್ಲ. ಆದರೆ ಶಾ ಬಾನೂ ಪ್ರಕರಣದಲ್ಲಿ ಈ ಎಲ್ಲ ಸತ್ಯಗಳನ್ನೂ ಮರೆಮಾಚಲಾಯಿತು. ನಮ್ಮ ಎಡ ಮತ್ತು ಉದಾರವಾದೀ ನಿಲುವಿನ ಪತ್ರಿಕೆಗಳು ಕೂಡ ಮುಸ್ಲಿಮ್ ಮತೀಯವಾದಿಗಳನ್ನೂ ಸಂಘಪರಿವಾರವನ್ನೂ ಒಂದೇ ತಕ್ಕಡಿಯಲ್ಲಿ ತೂಗತೊಡಗಿದವು. ಅಂತೂ ಎಲ್ಲ ಒಟ್ಟು ಸೇರಿ, ಜನರ ಮನಸ್ಸುಗಳಿಗೆ ಲಗ್ಗೆ ಇಡಲು ಸಂಘ ಪರಿವಾರಕ್ಕೆ ಅನುಕೂಲ ಮಾಡಿಕೊಟ್ಟರು.

ರಾಜೀವ್ ಗಾಂಧಿಯವರ ನಂತರ, ೧೯೯೧ರಲ್ಲಿ ಅಧಿಕಾರಕ್ಕೆ ಬಂದ ನರಸಿಂಹರಾವ್ ನೇತೃತ್ವದಲ್ಲಿ ಸರಕಾರದ ಕಣ್ಣೆದುರಿಗೇ ಬಾಬರಿ ಮಸೀದಿ ಧ್ವಂಸವಾದದ್ದು, ನಂತರ ದೇಶದ ಅನೇಕ ಕಡೆ, ಮುಖ್ಯವಾಗಿ ಮುಂಬಯಿಯಲ್ಲಿ, ನಡೆದ ಮತೀಯ ಗಲಭೆಗಳಿಗೆ ಕಾಂಗ್ರೆಸ್ ಮೂಕ ಪ್ರೇಕ್ಷಕನಾಗಿದ್ದುದು ಇವುಗಳನ್ನು ವಿವರಿಸಬೇಕಾದ ಅಗತ್ಯವಿಲ್ಲ. ಆದರೆ ಸಂಘ ಪರಿವಾರದ ರಾಜಕೀಯದಲ್ಲಿ ಶಾಮೀಲಾಗಿರುವುದು ಕಾಂಗ್ರೆಸ್ ಪಕ್ಷ ಮಾತ್ರವಲ್ಲ. ಬಿ.ಜೆ.ಪಿ.ಯ ಏಕಾಂಗಿತನದ (grand isolation) ಬಗ್ಗೆ ನಮ್ಮ ಮಾಧ್ಯಮಗಳು ದೊಡ್ಡ ಕತೆ ಕಟ್ಟಿವೆ. **ಆದರೆ ಎಡಪಕ್ಷಗಳನ್ನು ಹೊರತುಪಡಿಸಿ ಉಳಿದ ಎಲ್ಲ ರಾಜಕೀಯ ಪಕ್ಷಗಳೂ ಒಂದಲ್ಲ ಒಂದು ಸಂದರ್ಭದಲ್ಲಿ ಬಿ.ಜೆ.ಪಿ. ಜೊತೆ ಚಳುವಳಿಗಳನ್ನು ನಡೆಸಿವೆ; ಚುನಾವಣೆಗಳನ್ನು ಎದುರಿಸಿವೆ ಮತ್ತು** ಅಧಿಕಾರ ಹಂಚಿಕೊಂಡಿವೆ. ಬಿ.ಜೆ.ಪಿ. ರಾಜಕೀಯವಾಗಿ ಅಸ್ಪೃಶ್ಯವಾಗಿದ್ದುದು ನೆಹರೂ ಕಾಲದಲ್ಲಿ ಮಾತ್ರ. ಇದರ ಅರ್ಥವೇನು? ಬಿ.ಜೆ.ಪಿ. ನಮ್ಮ ರಾಜಕೀಯದಲ್ಲಿ ಚಲಾವಣೆಗೆ ತಂದ, ನಾವು ಮತ್ತು ಪರಕೀಯರು ವಿಭಜನೆಯನ್ನು ಕಮ್ಯುನಿಸ್ಟರನ್ನು ಬಿಟ್ಟು ಉಳಿದ ಎಲ್ಲರೂ ಒಂದಲ್ಲ ಒಂದು ಮಟ್ಟದಲ್ಲಿ ಒಪ್ಪಿಕೊಂಡಿದ್ದಾರೆ; ಹಾಗಾಗಿ ಮತೀಯವಾದವನ್ನು ಸಂಘಪರಿವಾರ ಈ ದೇಶದ ನೆಲದಲ್ಲಿ ನೆಟ್ಟ ವಿಷವೃಕ್ಷ ಎಂದು ಗುರುತಿಸುವುದರ ಜೊತೆ, ಈ 'ಪುಣ್ಯ ಕಾರ್ಯ'ದಲ್ಲಿ ಅವರಿಗೆ ನೆರವಾದ ಇತರ ಪಕ್ಷಗಳ ಪಾತ್ರವನ್ನೂ ನಾವು ಗಮನಿಸಬೇಕು. **ಅಂದರೆ ನಮ್ಮ ರಾಜಕೀಯ ವ್ಯವಸ್ಥೆಯನ್ನು ಮತೀಯವಾದಿ ಪಕ್ಷಗಳು ಮತ್ತು ಸೆಕ್ಯುಲರ್ ಪಕ್ಷಗಳು ಎಂದು ಸರಳವಾಗಿ ಬೇರ್ಪಡಿಸಲು ಬರುವುದಿಲ್ಲ.** ಮತೀಯವಾದ ಕಪ್ಪು ಬಿಳುಪು ಎಂಬ ಎರಡು ಬಣ್ಣಗಳಲ್ಲಿ ಮಾತ್ರ ಕಾಣಿಸಿಕೊಳ್ಳುವಂತಹದ್ದಲ್ಲ. ಅದು ಹಲವು ನೇಸಲುಗಳ ಒಂದು ಪಟ್ಟಿಕೆ.

ಮತೀಯವಾದ, ಬಡಜನರನ್ನು ಬಗ್ಗು ಬಡಿಯಲು ಈ ಸಮಾಜದ ಪ್ರತಿಷ್ಠಿತ ವರ್ಗಗಳು ಕಂಡುಕೊಂಡ ಅಸ್ತ್ರ. ಕಳೆದ ೨೦ ವರ್ಷಗಳ ದೇಶದ ರಾಜಕೀಯದಲ್ಲಿ ಮತೀಯವಾದದ ಉತ್ಕರ್ಷದ ಜೊತೆ ಬೇರೆ ಕೆಲವು ವಿದ್ಯಮಾನಗಳನ್ನೂ ನಾವು ಗಮನಿಸಬೇಕು. ಈ ಅವಧಿಯಲ್ಲೇ ಭಾರತದ ಆಳುವ ವರ್ಗ, ದೇಶದ ಆರ್ಥಿಕ ಸ್ವಾಯತ್ತತೆಯನ್ನು ಸಾಮ್ರಾಜ್ಯಶಾಹಿ ಹಿತಾಸಕ್ತಿಗಳಿಗೆ ಇಡಿಯಾಗಿ ಒತ್ತೆ ಇರಿಸಿತು. ಸಂಘ ಪರಿವಾರದ ದೇಶಪ್ರೇಮದ ಅಬ್ಬರ ಜೋರಾಗುತ್ತ ನಡೆದ ದಿನಗಳಲ್ಲೇ ಈ ದೇಶದ ಆರ್ಥಿಕತೆ ಪರಾಧೀನವಾಯಿತು. ಸಂಘಪರಿ ವಾರ ಇದನ್ನು ವಿರೋಧಿಸಲಿಲ್ಲ. ಅದರ ಸ್ವದೇಶಿ ಜಾಗರಣ ಮಂಚ ಇತ್ಯಾದಿ ಸ್ಟಂಟುಗಳು ಸಾರ್ವಜನಿಕ ಪ್ರದರ್ಶನಕ್ಕೆ ಮಾತ್ರ ಇರುವಂತಹವು. **ಭಾರತವನ್ನು ಅಂತರ ರಾಷ್ಟ್ರೀಯ ದಲ್ಲಾಳಿಗಳ ಲೂಟಿಗೆ ತೆರವು ಮಾಡಿಕೊಡುವ ವಿಷಯದಲ್ಲಿ ಕಾಂಗ್ರೆಸ್ ಮತ್ತು ಸಂಘ ಪರಿವಾರಗಳ ನಡುವೆ ಭಿನ್ನಮತವೇ ಇಲ್ಲ.** ವಾಜಪೇಯಿ ಸರಕಾರ, ಹಿಂದಿನ ಕಾಂಗ್ರೆಸ್ ಸರಕಾರದ ಆರ್ಥಿಕ ಉದಾರೀಕರಣದ ಧೋರಣೆಯನ್ನು ಮುಂದು ವರಿಸುವುದಾಗಲೀ, ಕಾಂಗ್ರೆಸ್ ಅದನ್ನು ಬೆಂಬಲಿಸುವ ವಾಗ್ದಾನ ಮಾಡಿರುವುದಾಗಲೀ ಆಕಸ್ಮಿಕವಲ್ಲ. ಈ ದೇಶದ ಜನರ ಕೊನೆಯ ತುತ್ತನ್ನೂ ಕಸಿದುಕೊಂಡು ಪಶ್ಚಿಮದ ಹೊಟ್ಟೆಬಾಕರಿಗೆ ಊಣ ಬಡಿಸುವ ವಿಷಯದಲ್ಲಿ ಎರಡೂ ಪಕ್ಷಗಳ ನಡುವೆ ಒಮ್ಮತವಿದೆ. ಅದಕ್ಕೆ ಬರಬಹುದಾದ ಪ್ರತಿಭಟನೆಯನ್ನು ಹತ್ತಿಕ್ಕುವುದಕ್ಕೆ ಒಂದು ಫ್ಯಾಸಿಸ್ಟ್ ಸರಕಾರವೇ ಬೇಕೆನ್ನುವುದಾದರೆ ಹಾಗೇ ಆಗಲಿ ಎಂದು ನಮ್ಮ ಪ್ರತಿಷ್ಠಿತ ವರ್ಗಗಳು ಮತ್ತು ಅವರ ಹಿಡಿತದಲ್ಲಿರುವ ಮಾಧ್ಯಮಗಳು ಭಾವಿಸಿವೆ. ಚರಿತ್ರೆಯ ಘಟನೆಗಳು ಕಾಲ ಕಳೆದಂತೆ ಹೊಸ ಅರ್ಥಗಳನ್ನು ಪಡೆದುಕೊಳ್ಳುತ್ತವೆ. ಶ್ರೀಮತಿ ಇಂದಿರಾ ಗಾಂಧಿ ತುರ್ತು ಪರಿಸ್ಥಿತಿಯ ತಾಲೀಮು ನಡೆಸಿದ್ದು ಪಶ್ಚಿಮ ಬಂಗಾಳದಲ್ಲಿ. ೬೦ರ ದಶಕದ ಅಂತ್ಯದಲ್ಲಿ ಆಕೆ ಬಂಗಾಳದ ಕಮ್ಯುನಿಸ್ಟರ ಮೇಲೆ ನಡೆಸಿದ ದೌರ್ಜನ್ಯದ ಅರ್ಥವೇನು ಎನ್ನುವುದು ಈಗ ಸ್ಪಷ್ಟವಾಗುತ್ತಿದೆ. ಆಗಲೂ ಆಕೆಗೆ ಪ್ರತಿಷ್ಠಿತರ ಬೆಂಬಲವಿತ್ತು; ಮತ್ತು ಅವರ ಪತ್ರಿಕೆಗಳು ಆ ಬಗ್ಗೆ ಒಂದು ಸಾಲು ಕೂಡ ಬರೆಯಲಿಲ್ಲ. ಹೀಗಾಗಿ ಐಜಾಜ್ ಅಹ್ಮದ್ ಹೇಳುವಂತೆ **ಅಸಮಾನತೆಯನ್ನು ಪ್ರತಿಭಟಿಸದೆ ಫ್ಯಾಸಿಸಂಅನ್ನು ಎದುರಿಸುವ ಮಾತು ಅರ್ಥಹೀನ.**

ಜಿ. ರಾಜಶೇಖರ್
ಎಲ್ ಐ ಸಿ ಆಫ್ ಇಂಡಿಯಾ, ಡಿವಿಜನಲ್ ಆಫೀಸ್, 'ಜೀವನಕೃಷ್ಣ',
ಅಜ್ಜರ ಕಾಡು, ಉಡುಪಿ - ೫೭೬೧೦೧

ವುದು. ಆ ಸ್ಥಿತಿಯಲ್ಲೂ ನಿದ್ದೆ ಮಾಡಬಹುದು; ಆದರೆ ಪಕ್ಕದವರ ಮೇಲೆ ವಾಲಿ ಒರಗುವ ಸಂದರ್ಭ ಬರುವುದಿಲ್ಲ. ಇದನ್ನೇ ಶರೀರದ ಗುರುತ್ವ ಕೇಂದ್ರವನ್ನು ನಿರ್ಧರಿಸುವ ಕ್ರಮದಲ್ಲಿರುವ ಒಂದು ವಿಧಾನ ಎನ್ನಬಹುದು. ಅದು ಪೃಷ್ಠ ಮಧ್ಯದಲ್ಲಿ ಎಲ್ಲೋ ಇರುತ್ತದೆಂದು ತೋರುತ್ತದೆ. ಅದು ಚಲಿಸದೆ ಒಂದೆಡೆ ಸ್ಥಿಮಿತಗೊಂಡಿರುತ್ತದೆ. ತೂಕಡಿಸುವಾಗ ಗುರುತ್ವ ಕೇಂದ್ರವು ಚೆಲ್ಲಾಪಿಲ್ಲಿಯಾಗಿ ಎಲ್ಲೆಲ್ಲಿಗೋ ಓಡುತ್ತಿರುತ್ತದೆ.

ಸಿಗ್ಮಂಡ್ ಫ್ರಾಯ್ಡ್ ಮತ್ತು ಕಾರ್ಲ್ ಯುಂಗ್ ಎಂಬ ಮನೋವಿಜ್ಞಾನಿಗಳ ನೇರ ಶಿಷ್ಯನಾಗಿದ್ದ ಡಾ॥ ಬರೋ ಎಂಬಾತ ಸುಮಾರು ಎಂಬತ್ತು ವರ್ಷಗಳ ಹಿಂದೆ ಕೆಲವು ಪ್ರಯೋಗಗಳನ್ನು ನಡೆಸಿದ್ದರು. ಅವರಿದ್ದುದು ಅಮೆರಿಕಾದ ಕನೇಟಿಕಟ್ ರಾಜ್ಯದ ವೆಸ್ಟ್‌ಪೋರ್ಟ್ ಎಂಬಲ್ಲಿ. ಪ್ರಯೋಗವು ಮಾನವನ ನಡತೆ (ಅಥವಾ ಚರ್ಯೆ) ಯಲ್ಲಿ ಉಂಟಾಗುವ ಬದಲಾವಣೆಯನ್ನು ಕುರಿತಾದದ್ದು. ಬರೋ ಮನೋವಿಶ್ಲೇಷಣೆಯಲ್ಲಿ ತಜ್ಞನಾಗಿದ್ದ ಮತ್ತು ಅದನ್ನು ಉಪಯೋಗಿಸಿ ಅವನಲ್ಲಿಗೆ ಬಂದ ರೋಗಿಗಳಿಗೆ ಮದ್ದು ನೀಡುತ್ತಿದ್ದ. ಕೆಲಕಾಲದ ನಂತರ ಅವನಿಗನ್ನಿಸಿತು: ಎಲಾ ಏನಿದು, ಒಬ್ಬೊಬ್ಬನ ಸಾಮಾಜಿಕ ಸಂಬಂಧಗಳನ್ನೂ ಪೂರ್ಣವಾಗಿ ಗುರುತಿಸಿ ಅವನನ್ನು ಗುಣಪಡಿಸುವ ಕೆಲಸದಲ್ಲಿ ನಿರತನಾಗಿದ್ದೇನಲ್ಲ! ಹಾಗೆ ನೋಡಿದರೆ ಅದು ವೈಯಕ್ತಿಕ ಲಕ್ಷಣವೇ ಅಲ್ಲ; ಅದು ಮನುಕುಲಕ್ಕೆ ಇಡಿಯಾಗಿ ಅಂಟಿಕೊಂಡಿರುವ ಜಾಡ್ಯ, ಎಂದು. ಒಬ್ಬೊಬ್ಬನನ್ನೇ ಪರೀಕ್ಷಿಸುವ ಬದಲು 'ಮನುಷ್ಯ'ನನ್ನು ಪರೀಕ್ಷಿಸಿದರೆ ಉತ್ತಮ ಪರಿಹಾರ ದೊರಕಬಹುದು ಎನಿಸಿತು ಆತನಿಗೆ. ಅಲ್ಲಿಂದ ಮುಂದಕ್ಕೆ ಆತ ಮನುಷ್ಯನ ಶರೀರಶಾಸ್ತ್ರವನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿ ಅದು ಯಾವ ಪ್ರಕಾರದಲ್ಲಿ ಕೆಲಸ ಮಾಡುತ್ತಿದ್ದಾಗ ಮಾನಸಿಕ ಒತ್ತಡ, ಬಾಧೆ ಉಂಟಾಗುತ್ತದೆಂಬುದನ್ನು ಕಂಡುಕೊಂಡ. ಒತ್ತಡ ಕಡಿಮೆಯಾಗಬೇಕಾದರೆ ಶರೀರದ ಆಂತರಿಕ ಕ್ರಿಯೆಗಳಲ್ಲಿ ಯಾವ ಪ್ರಕಾರವು ಒತ್ತಡಕ್ಕೆ ಕಾರಣವಾಗುತ್ತದೆಯೋ ಆ ಪ್ರಕಾರದಲ್ಲಿ ಶರೀರಕ್ರಿಯೆ ಸಾಗಬಾರದು ಎಂದು ತೀರ್ಮಾನಿಸಿದ. ಅದರಂತೆ ಅಭ್ಯಾಸಗಳನ್ನು ರೂಪಿಸಲು ಮುಂದಾದ. ಮನೋವಿಶ್ಲೇಷಣಾ ತಂತ್ರದಲ್ಲಿ ಮನಸ್ಸನ್ನು ಹರಿಯಬಿಡುವಂತೆ ಮಾಡುವುದು, ಮುಕ್ತವಾಗಿ ಅದು ಸಂಚರಿಸುವಂತೆ ಮಾಡುವುದು ನೀತಿಯಾದರೆ, ಬರೋನ ಹೊಸ ತಂತ್ರದಲ್ಲಿ ಮನಸ್ಸನ್ನು ಹರಿಯಬಿಡದೆ ಸೌಮ್ಯವಾಗಿ ಕಟ್ಟಿಡುವುದು ನೀತಿಯಾಯಿತು. ಹಾಗೆ ಮಾಡಿದಾಗ ಅಭ್ಯಾಸಿಯ ಉಸಿರಾಟದ ವೇಗ, ಕಣ್ಣಿನ ಚಲನೆ, ಮಿದುಳಿನ ಕ್ರಿಯೆ ಇತ್ಯಾದಿಗಳನ್ನೆಲ್ಲಾ ಮಾಪನ ಮಾಡಿ ಬೇರೆ ಸಂದರ್ಭಕ್ಕೂ ಈ ಸಂದರ್ಭಕ್ಕೂ ಇರುವ ವ್ಯತ್ಯಾಸವನ್ನು ಗುರುತಿಸಿದ. ಇಲ್ಲಿ ಮನಸ್ಸು ಮನಸ್ಸನ್ನೇ ನೋಡಲು ಉಪಕ್ರಮಿಸಿದಂತೆ ತೋರಿತು. ಹೊರಗಿನ ಬೇರೆ ಚಿತ್ರಗಳು ಮಾಸಿಹೋಗಿ ಮನಸ್ಸಿನ ಚಿತ್ರವೊಂದೇ ಉಳಿಯಿತು. ಅಭ್ಯಾಸಿಯ ವೇದನೆಯು ಕೊನೆಯಾಗಿ ಹೊಸ ಸಂವೇದನೆಯೊಂದು ಬೆಳಕಿಗೆ ಬಂದಂತಾಯಿತು.

ಧ್ಯಾನದ ಪ್ರಕ್ರಿಯೆ ಬಹುಮಟ್ಟಿಗೆ ಇದೇ ಎನ್ನಬಹುದು. ಹಠಯೋಗ ಪ್ರದೀಪಿಕೆಯಲ್ಲಿ ಬರುವ ಒಂದು ವಿವರಣೆ ಹೀಗಿದೆ :

ಶಕ್ತಿ ಮಧ್ಯೇ ಮನಃ ಕೃತ್ವಾ ಶಕ್ತಿಂ ಮಾನಸಮಧ್ಯಗಾಮ್।
ಮನಸಾ ಮನ ಆಲೋಕ್ಯ ಧಾರಯೇತ್ ಪರಮಂ ಪದಮ್ ॥ (೪.೫೪)

ಸ್ವತಃ ಸ್ವಾತ್ಮಾರಾಮಸೂರಿಯೇ ಬರೆದ ವ್ಯಾಖ್ಯಾನದಲ್ಲಿ ಇದನ್ನು ವಿವರಿಸುವುದು ಹೀಗೆ: ಮನಸಾ ಅಂತಃಕರಣೇನ ಮನಃ ಆಲೋಕ್ಯ ಬುದ್ಧಿಂ ಮನಸಾ ಅವಲೋಕನೇನ ಸ್ಥಿರೀಕೃತ್ಯ ಇತ್ಯರ್ಥಃ॥

(ಮನಸ್ಸನ್ನು ಮನಸ್ಸಿನಿಂದ ನೋಡುತ್ತಾ ಅದನ್ನು ಸ್ಥಿರವಾಗಿರಿಸುವುದು ಎಂದರ್ಥ.)

ಮಾನಸಿಕ ಒತ್ತಡವನ್ನು ಹತೋಟಿಯಲ್ಲಿಡಲು ಬರೋ ನಡೆಸಿದ ಶರೀರಕ್ರಿಯೆಯ ಪ್ರಯೋಗವು ಸ್ವಾತ್ಮಾರಾಮನು ವಿವರಿಸಿರುವ ಧ್ಯಾನದ ಪ್ರಕ್ರಿಯೆಯಿಂದ ಭಿನ್ನವಲ್ಲ. ಧ್ಯಾನ ಮಾಡಿ ಮೋಕ್ಷ ಪಡೆದ, ಅಥವಾ ದೇವರು ಎದುರುಬಂದು ನಿಲ್ಲುವಂತೆ ಮಾಡಿದ ಎಂಬ ಕಥೆಗಳು ನಮ್ಮ ಪುರಾಣಗಳಲ್ಲಿ ಬೇಕಾದಷ್ಟಿವೆ. ಧ್ಯಾನ ಮಾಡುವ ವ್ಯಕ್ತಿಯ ಮನಸ್ಸು ತನ್ನ ಮನಸ್ಸನ್ನೇ ನೋಡುತ್ತಾ ಸ್ಥಿರವಾಗಿ ನಿಂತಾಗ ದೇವರು ಪ್ರತ್ಯಕ್ಷನಾದ ಎಂಬ ಭ್ರಾಂತಿ ಮೂಡಬೇಕೆಂಬ ನಿಯಮವನ್ನು ಬರೋ ಆಗಲಿ ಸ್ವಾತ್ಮಾರಾಮನಾಗಲಿ ಎತ್ತಿಹಿಡಿದಿಲ್ಲದಿರುವುದನ್ನು ಮನನ ಮಾಡುವುದು ಆರೋಗ್ಯಕರ.

○○

## ವೇದವೆಂಬುದು ಓದಿನ ಮಾತು

ವೇದಗಳಲ್ಲಿ ಭಾರತೀಯರ ಭಾವಸಂಪತ್ತು, ಚಿಂತನೆಯ ಸಂಪನ್ಮೂಲ ಅಡಗಿದೆ. ನಮ್ಮ ಪ್ರಾಚೀನ ಋಷಿಗಳ ನಿಸರ್ಗಭಕ್ತಿ, ಕಾವ್ಯಶಕ್ತಿ, ದಟ್ಟ ಜೀವನಾನುಭವ, ಅಪ್ಪಟ ಸತ್ಯನಿಷ್ಠೆಗಳಿಗೆ ವೇದಗಳು ಕನ್ನಡಿ ಹಿಡಿಯುತ್ತವೆ. ವಿಶ್ವಸಂಸ್ಕೃತಿಯ ಭೂಪಟದಲ್ಲಿ ವೇದಗಳು ಸದಾಕಾಲಕ್ಕೂ ತಲೆಯೆತ್ತಿ ನಿಂತಿರುವ ಗೌರಿಶಂಕರ, ಕಾಂಚನಗಂಗಾ ಶಿಖರಗಳಾಗಿವೆ.

ಆದರೂ ಈ ವೇದಗಳು ಮುಂದಿನ ಸಹಸ್ರಾರು ಪೀಳಿಗೆಗಳ ವೇದನೆಗೆ ಕಾರಣವಾದದ್ದು ಎಂಥ ಸಾಂಸ್ಕೃತಿಕ ವಿಪರ್ಯಾಸ ! ವೇದ ಎಂದರೆ ತಿಳುವಳಿಕೆ ಎಂದರ್ಥ. ವೇದಗಳನ್ನು ತಿಳಿದುಕೊಳ್ಳಲು ಮತ್ತು ತಿಳಿಸಿಹೇಳಲು ಹೊರಟವರು ಉಂಟುಮಾಡಿರುವ ಬಗೆಬಗೆಯ ವಿರೋಧಾಭಾಸಗಳಿಂದ ಹೀಗಾಯಿತೆ ? ಮತೀಯ ಅನುಸಂಧಾನ, ಕೂಪಮಂಡೂಕ ಪಾಂಡಿತ್ಯ, ಇದಮಿತ್ಥಂ ಎಂಬ ಹಟಮಾರಿ ನಿಲುವು, ಅಪಾರ್ಥ- ಅಪವ್ಯಾಖ್ಯಾನಗಳ ಸರಮಾಲೆ, ಇವು ವೇದಗಳಿಗೇ ಹಾದಿ ತಪ್ಪಿಸಲು ಹವಣಿಸಿದವೆ ?

ಬಹುಜನರಿಗೆ ವೇದಗಳ ಬಗ್ಗೆ ಇರುವ ಗೌರವ ವೈದಿಕ ಪರಂಪರೆ ಬಗ್ಗೆ ಇರುವುದಿಲ್ಲ. ಯಾಕೆಂದರೆ ವೈದಿಕ ಪರಂಪರೆ ಜಾತಿವ್ಯವಸ್ಥೆಯನ್ನು ಹುಟ್ಟಿಹಾಕಿತು; ಅಸ್ಪೃಶ್ಯತೆಯ ಆಚರಣೆಯನ್ನು ಗಟ್ಟಿಗೊಳಿಸಿತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ವರ್ಣಗಳಿಗೆ ಬೇರೆಬೇರೆ ಬಗೆಯ ಸವಲತ್ತುಗಳನ್ನು ನೀಡಿ ಶೂದ್ರರನ್ನೂ, ಪಂಚಮರನ್ನೂ ಪಾತಾಳಕ್ಕೆ ತುಳಿಯಿತು. ನೂರೆಂಟು ಬಗೆ ಮುಟ್ಟುಚಟ್ಟು, ಕಟ್ಟುಪಾಡುಗಳ ಮುಳ್ಳುಬೇಲಿ ಕಟ್ಟಿ ತನ್ನ ದೇಶಬಾಂಧವರನ್ನು ತಾನೇ ಗುಂಪುಗಾರಿಕೆಗೆ, ಕಚ್ಚಾಟಕ್ಕೆ ಈಡುಮಾಡಿತು. ವೈದಿಕ ಪರಂಪರೆ ಮಾನವ ಸಹಜ ನ್ಯಾಯ ಸತ್ಯಗಳನ್ನು ಬದಿಗೊತ್ತಿ ವರ್ಗ ಹಿತಾಸಕ್ತಿಯ ಧರ್ಮಕಾರಣವನ್ನು ಜಾರಿಗೆ ತಂದಿತು.

ಆದರೆ ವೈದಿಕ ಪರಂಪರೆಯ ಟೀಕಾಕಾರರು ವೈದಿಕ ಪರಂಪರೆ ಜಾರಿಗೆ ತಂದ ಅನಿಷ್ಟಗಳಿಗೆಲ್ಲ ವೇದಗಳ ಸಮ್ಮತಿ ಇದೆಯೆ ಎಂದು ಪ್ರಮಾಣಿಸಿ ನೋಡುವುದು ಉಚಿತ. ಮೂಲ ವೇದಗಳನ್ನು ರಚಿಸಿದ ಋಷಿಗಳಿಗೆ ಯಾವುದೇ ಹಿತಾಸಕ್ತಿ ಇದ್ದಂತೆ ಕಾಣುವುದಿಲ್ಲ. ಅವರ ಆಲೋಚನಾ ಪ್ರವಾಹ ಹಾಗೂ ಭಾವ ತರಂಗಗಳು, ಹೆಸರಿಡದಷ್ಟು ಹಿಂದಿನ ಕಾಲದ ಮಹಾನದಿಯಾಗಿ ಹರಿದುಬಂದಿವೆ. ಪ್ರಾಕೃತಿಕ ಬದುಕಿನ ಸಹಜಾನಂದ, ಸರಳ ರೀತಿನೀತಿಗಳೇ ಅದರ ಒಳಸ್ರೋತವಾಗಿದೆ.

ವೈದಿಕರು ವೇದಗಳ ಹೆಸರಿನಲ್ಲಿ ನಡೆಸಿದ ದುರಾಡಳಿತವನ್ನು ಖಂಡಿಸುವುದೇ ಅವೈದಿಕ, ಅನುಭಾವಿಕ ಪರಂಪರೆಗಳ ಮುಖ್ಯ ಉದ್ದೇಶವಾಗಿದೆ. 'ವೇದವೆಂಬುದು ಓದಿನ ಮಾತು/ ಶಾಸ್ತ್ರವೆಂಬುದು ಸಂತೆಯ ಸುದ್ದಿ/ ಪುರಾಣವೆಂಬುದು ಪುಂಡರ ಗೋಷ್ಠಿ' ಎಂದು ಅಲ್ಲಮಪ್ರಭು ಗುಡುಗುವುದು ಇದೇ ಅವೈದಿಕ ಅನುಭಾವಿಕ ಉದ್ದೇಶದಿಂದ. ವೈದಿಕರು ವೇದಗಳ ಬಗ್ಗೆ ಗಳಹುವ ಅಸತ್ಯಗಳನ್ನೆಲ್ಲ ಕಿತ್ತೊಗೆದು ಕೇವಲ ಅನುಭವಕ್ಕೆ ನಿಷ್ಠನಾಗಬೇಕೆಂಬುದು ಅಲ್ಲಮನ ಅಭಿಮತ. ಎಲ್ಲಕ್ಕೂ ಅತೀತವಾದ 'ಗುಹೇಶ್ವರನೆಂಬುದು ಮೀರಿದ ಘನವು' ಎಂಬುದು ಅವನ ಸಹಜಾನುಭವ. ನಿಜವಾಗಿ ನೋಡಿದರೆ ಅಲ್ಲಮನೆ ಮೂಲದ ವೇದರ್ಷಿಗಳ ನಿಜವಾದ ಅನುಯಾಯಿ. ಅವನು 'ವೇದ' ಎಂದರೆ 'ತಿಳಿದುಕೊ' ಎಂಬ ಅರ್ಥದಲ್ಲಿ ಅರಿವಿನ ಮಂಥನದಲ್ಲಿ ತೊಡಗಿದ್ದಾನೆ. ಆದ್ದರಿಂದ ಅಲ್ಲಮ, ಬುದ್ಧ, ರಾಮಕೃಷ್ಣ ಪರಮಹಂಸ ಇಂಥವರುಗಳೇ ನಿಜವಾದ ವೇದರ್ಷಿಗಳು.

ಬದರಹಳ್ಳಿ ನರಸಿಂಹಮೂರ್ತಿ
ಅನಿಮಿಷ, ಕನಕದಾಸ ರಸ್ತೆ, ದುರ್ಗಿಗುಡಿ ಬಡಾವಣೆ, ಹೊನ್ನಾಳಿ - ೫೭೭೨೧೭

## ಜೀವವೈವಿಧ್ಯ

ಬೆಂಗಳೂರಿನಿಂದ ಗುಬ್ಬಚ್ಚಿಗಳು ಮಾಯವಾಗತೊಡಗಿವೆ; ತುಂಗಭದ್ರಾ ನದಿಯ ದಡದಲ್ಲಿ ಸಹಸ್ರಾರು ಮೀನುಗಳು ಸತ್ತು ಬಿದ್ದಿವೆ; ಕಾಡುಗಳಿಗೆ ಬೆಂಕಿಬಿದ್ದು ಅತ್ಯಮೂಲ್ಯ ಅರಣ್ಯಗಳು ನಾಶಹೊಂದಿವೆ. - ಈ ಬಗೆಯ ಸುದ್ದಿಗಳನ್ನು ನಾವು ಆಗಾಗ ವೃತ್ತಪತ್ರಿಕೆಗಳಲ್ಲಿ ಓದುತ್ತಿರುತ್ತೇವೆ. ಈ ಎಲ್ಲದರ ಅರ್ಥ ಜಗತ್ತಿನ ವಿವಿಧ ಬಗೆಯ ಜೀವಜಾತಿಗಳ ನಾಶ.

'ಜೀವ ವೈವಿಧ್ಯ' ಎನ್ನುವುದು ಈಚೀಚೆಗೆ ಹೆಚ್ಚು ಪ್ರಚಾರದಲ್ಲಿರುವ ಶಬ್ದ. ಒಂದೇ ಜೀವಜಾತಿಯಲ್ಲಿನ ವಿವಿಧ ಬಗೆಗಳನ್ನೂ, ವಿವಿಧ ಜೀವಜಾತಿಗಳ ನಡುವೆ ಇರುವ ಪ್ರಭೇದಗಳನ್ನೂ, ವಿಪುಲವೂ ವಿಭಿನ್ನವೂ ಆದ ಪರಿಸರ ವ್ಯವಸ್ಥೆಗಳನ್ನೂ ಅದು ಒಳಗೊಂಡಿರುತ್ತದೆ. ಸಾಗರಗಳು, ಕಾಡುಮೇಡುಗಳು, ಹುಲ್ಲುಗಾವಲುಗಳು, ಜೌಗು ಪ್ರದೇಶಗಳು ಮುಂತಾದೆಡೆ ಕಂಡುಬರುವ ಪಶುಪಕ್ಷಿ ಜಲಚರ ಜೀವಿಗಳು, ಕ್ರಿಮಿಕೀಟ ಜೀವಾಣುಗಳೆಲ್ಲವೂ ಪರಿಸರ ವ್ಯವಸ್ಥೆಗೆ ಸೇರ್ಪಡುತ್ತವೆ.

ವಿಜ್ಞಾನಿಗಳ ಪ್ರಕಾರ, ಈಗ ಜೀವಜಾತಿಗಳ ನಾಶ ಅತ್ಯಲ್ಪ ಕಾಲದಲ್ಲಿ ಅತಿದೊಡ್ಡ ಪ್ರಮಾಣದಲ್ಲಿ ಸಾಗುತ್ತಿದೆ. ಈ ಜಗತ್ತಿನ ಜೀವಜಾತಿಗಳಲ್ಲಿನ ಅರ್ಧದಷ್ಟರ ನೆಲೆಯನ್ನು ಮಾನವ ನಾಶಗೊಳಿಸುವ ಸಾಧ್ಯತೆಯಿದೆ, ಉಳಿದ ಜೀವಜಾತಿಗಳನ್ನು ಅವನು ಮಲಿನಗೊಳಿಸುತ್ತಾನೆ.

ಮಾನವ ತನ್ನ ಆಹಾರಕ್ಕಾಗಿ, ಆರ್ಥಿಕ ಲಾಭಕ್ಕಾಗಿ ಬೇಟೆಯಾಡಿ ಜೀವಿಗಳನ್ನು ಕೊಲ್ಲುವುದರಿಂದ, ಜೀವ ಸಂಕುಲಗಳ ವಾಸಸ್ಥಳಗಳನ್ನು ನಾಶಗೊಳಿಸುವುದರಿಂದ ಮತ್ತು ಒಂದು ಪ್ರದೇಶಕ್ಕೆ ವಿದೇಶೀ ಜೀವಜಾತಿಗಳನ್ನು ತಂದು ಸೇರಿಸುವುದರಿಂದ ಜೀವ ವೈವಿಧ್ಯವನ್ನು ಕ್ಷೀಣಗೊಳಿಸಬಹುದು; ಅದರ ವಿನಾಶಕ್ಕೂ ದಾರಿಮಾಡಿಕೊಡಬಹುದು.

ಆದರೆ, ಜೀವವೈವಿಧ್ಯದ ಸಂರಕ್ಷಣೆಯಲ್ಲಿ ಸೃಷ್ಟಿ ಸೌಂದರ್ಯ, ನೈತಿಕ ಹೊಣೆಗಾರಿಕೆ ಮತ್ತು ಆಧ್ಯಾತ್ಮಿಕ ಚಿಂತನೆಗಳೂ ಮೌಲ್ಯಗಳೂ ಪಾಲ್ಗೊಳ್ಳುತ್ತವೆ. ನಮ್ಮ ಸುತ್ತಲಿನ ಪರಿಸರ ಪದ್ಧತಿಯಿಂದ ನಮಗೆಷ್ಟು ಲಾಭವಿದೆಯೆಂದು ತಿಳಿದರೆ ನಾವು ಪರಿಸರ ಪದ್ಧತಿಯನ್ನೂ ಅದರಲ್ಲಿನ ಜೀವವೈವಿಧ್ಯವನ್ನೂ ಗೌರವಿಸುತ್ತೇವೆ, ಸಂರಕ್ಷಿಸಲೆತ್ನಿಸುತ್ತೇವೆ.

ಜೀವ ವೈವಿಧ್ಯವನ್ನು ಕಾಪಾಡುವ ಸಲುವಾಗಿ ಖ್ಯಾತ ಭೌತವಿಜ್ಞಾನಿ ಹಾಗೂ ಲೇಖಕ ಗ್ರಿಗೊರಿ ಬೆನ್‌ಫರ್ಡ್ ಕಾರ್ಯಸಾಧುವಾದ ತನ್ನ ''ಜೀವ ಸಂಕುಲ ಸಂರಕ್ಷಣಾ ಶೀತಾಗಾರ''ದ ಕಲ್ಪನೆಯನ್ನು ಪ್ರಚುರಗೊಳಿಸಿದ್ದಾನೆ.

ಅದೆಂದರೆ, ಈಗ ಜಗತ್ತಿನಲ್ಲಿ ದೊರೆಯುವ ಎಲ್ಲ ಜೀವ ಜಾತಿಗಳನ್ನೂ ಸೆರೆಹಿಡಿಯುವುದು. ಗಿಡಮರಗಳು ಮತ್ತು ಅವುಗಳನ್ನು ಆಶ್ರಯಿಸಿ ಬದುಕುವ ಇನ್ನಿತರ ಸಸ್ಯಜಾತಿಗಳು, ಗಿಡಮರಗಳ ರೆಂಬೆಗಳಲ್ಲಿ ವಾಸಿಸುವ ಕ್ರಿಮಿಕೀಟಗಳು, ಎಲೆಕಾಂಡ ತೊಗಟೆಗಳಲ್ಲಿ ಕಾಣಸಿಗುವ ಕೀಟಾಣುಗಳು, ಬೇರುಗಳಲ್ಲಿ ಬದುಕಿರುವ ಮತ್ತು ನೆಲದ ಮಣ್ಣಿನಲ್ಲಿ ನೆಲೆಗೂಡಿರುವ ಸೂಕ್ಷ್ಮಾಣು ಜೀವಿಗಳು - ಈ ಎಲ್ಲವನ್ನೂ ಸಂಗ್ರಹಿಸಿ ದ್ರವೀಕೃತ ಸಾರಜನಕದ ಶೈತ್ಯಾಗಾರದಲ್ಲಿ ಶೇಖರಿಸಿಡುವುದೇ ಬೆನ್‌ಫರ್ಡ್‌ನ 'ಚಿಂತನಾ ಪ್ರಯೋಗ'.

ಸಿಹಿ ಹುಲ್ಲನ್ನು ಬೆಳೆಯುತ್ತಿದ್ದ ಹುಲ್ಲುಗಾವಲನ್ನೂ ರಸವತ್ತಾದ ಹಾಗೂ ಸಮೃದ್ಧ ಹಣ್ಣುಗಳನ್ನುಳ್ಳ ತೋಟವನ್ನೂ ನೋಡಿಕೊಳ್ಳಲು ಮೂವರು ತೋಟಗಾರರಿದ್ದರಂತೆ. ಅವರಿಗೂ ತಮ್ಮ ತೋಟವೆಂದರೆ ಪಂಚಪ್ರಾಣ. ಆಗೊಂದು ದಿನ ತಮ್ಮ ತೋಟದ ಹೊರಗೆ ದೈತ್ಯಾಕಾರದ ಜನರ ಭಾರಿ ಗುಂಪೊಂದು ಸೇರಿದುದನ್ನು ಅವರು ಕಂಡರಂತೆ. ಆ ಜನರಿಗೆ ಭೂಮಿಯ ಮೇಲೆ ಕುಣಿದು ಕುಪ್ಪಳಿಸಿ ಕಾಲಿಗೆ ಸಿಕ್ಕದ್ದನ್ನೆಲ್ಲ ತುಳಿದು ಧ್ವಂಸ ಮಾಡುವಂತಹ ಬೃಹತ್ ಪಾದಗಳು; ಅಷ್ಟೇ ದೊಡ್ಡ ರಾಕ್ಷಸ ಹೊಟ್ಟೆ; ಕಂಡದ್ದನ್ನೆಲ್ಲ ತಿಂದು ಕಬಳಿಸಬೇಕೆನ್ನುವ ಕೆಂಗಣ್ಣ ನೋಟ!

ಅಂಥವರು ಇಂತಹ ತೋಟವನ್ನು ಕಂಡರೆ ಬಿಟ್ಟಾರೆಯೇ? ತೋಟಕ್ಕೆ ನುಗ್ಗಲು ಅವರು ಸಿದ್ಧರಾದರು. ಆಗ ತೋಟಗಾರರಲ್ಲೊಬ್ಬ ತಾನು ಆ ತೋಟವನ್ನು ಎಷ್ಟೊಂದು ಪ್ರೀತಿಸುತ್ತೇನೆಂದು ತಿಳಿಸುತ್ತಾ ಅವರು ಒಳಬರಲು ದಾರಿಮಾಡಿಕೊಟ್ಟ. ಮತ್ತೊಬ್ಬ ತನ್ನ ಚೂಪಾದ ಕಳೆಗುದ್ದಲಿ ಹಿಡಿದು ಹೋರಾಟಕ್ಕೆ ಸಜ್ಜಾಗಿ ನಿಂತ. ಮೂರನೆಯವನು ಅವರ ಕಣ್ತಪ್ಪಿಸಿಕೊಂಡು ಗಿಡಮರಗಳ ಸಂದಿನಲ್ಲಿ ಹುಲ್ಲುಗಾವಲಿನ ನಡುನಡುವೆ, ತೋಟದಲ್ಲೆಲ್ಲಾ ಓಡೋಡಿ ಹೂಹಣ್ಣುಗಳನ್ನೂ ಬೀಜಗಳನ್ನೂ ಶೇಖರಿಸಿ, ಅದನ್ನು ಅತ್ಯಂತ ಎಚ್ಚರಿಕೆಯಿಂದ ಚೆನ್ನಾಗಿ ಗಂಟುಕಟ್ಟಿ ಒಂದು ಗೋಪ್ಯವಾದ ಜಾಗದಲ್ಲಿ ಅಡಗಿಸಿಟ್ಟ. ಈ ಮೂರನೆಯವನಿಗೆ ಅನ್ನಿಸಿತಂತೆ- ಈಗ ಹೀಗೆ ಧ್ವಂಸ ಮಾಡುತ್ತಿರುವ ಈ ಜನರೇ ಮುಂದೆ ಎಂದಾದರೊಂದು ದಿನ ಈ ತೋಟವನ್ನು ಪ್ರೀತಿಸಿಯಾರು ಎಂದು. ಅದು ಅವನ ಚಿಂತನೆ, ಆಶಯ.

ವಾಸ್ತವದಲ್ಲಿ, ಈ ಮೂವರು ತೋಟಗಾರರೂ ಒಳ್ಳೆಯವರೇ ಇದ್ದರು. ಧೈರ್ಯಶಾಲಿಗಳೂ ಆಗಿದ್ದರು. ಆದರೆ ತೋಟದ ಪಾರುಪತ್ಯದಲ್ಲಿ ಈ ಮೂವರಲ್ಲಿ ಯಾರು ಜಾಣರು ನೀವು ಹೇಳಬಲ್ಲಿರಾ ? *(ಆಕಾಶವಾಣಿ ಕೃಪೆ)*

ಸೂ. ಸುಬ್ರಹ್ಮಣ್ಯಂ
'ವನಸುಮ', ೨೧೧, ೪ನೇ ಬ್ಲಾಕ್, ಜಯನಗರ, ಬೆಂಗಳೂರು - ೧೧

# ನವಕರ್ನಾಟಕ ಪ್ರಕಾಶನದ ಮಹತ್ವದ ಪ್ರಕಟಣೆಗಳು

ನಿಮ್ಮ ಪುಸ್ತಕ ಸಂಗ್ರಹದಲ್ಲಿ ಇರಲೇಬೇಕಾದ ಅಮೂಲ್ಯ ಕೃತಿಗಳು

## ಎರವಲು ಪದಕೋಶ

(ಕನ್ನಡದಲ್ಲಿರುವ ಅನ್ಯದೇಶ್ಯಗಳ ನಿಘಂಟು)

ಪ್ರೊ॥ ಜಿ. ವೆಂಕಟಸುಬ್ಬಯ್ಯ

ಪುಟ : 248 ಬೆಲೆ : ರೂ. 100

ಒಂದು ಭಾಷೆಗೆ ಬೇರೊಂದು ಭಾಷೆಯಿಂದ ಎರವಲಾಗಿ ಬಂದು ಬಳಕೆಯಾಗುವ ಪದಗಳ ಕುರಿತ ವ್ಯಾಸಂಗವು ಭಾಷಾಶಾಸ್ತ್ರದ ಬಹು ಮುಖ್ಯವಾದ ಅಂಗವಾಗಿದೆ. ಇದು ಭಾಷೆಯ ದೃಷ್ಟಿಯಿಂದ ಮಾತ್ರವಲ್ಲದೆ ಸಂಸ್ಕೃತಿಯ ದೃಷ್ಟಿಯಿಂದಲೂ ಪ್ರಧಾನವಾಗಿದೆ. ಹಲವು ವರ್ಷಗಳ ಅವಧಿಯಲ್ಲಿ ಕೆಲವು ಪ್ರಭಾವಗಳಿಂದ ತನ್ನಷ್ಟಕ್ಕೆ ನಡೆದುಹೋಗುವ ಪದಗಳ ಇಂಥ ಹೊಕ್ಕು ಬಳಕೆಯ ಅರ್ಥವ್ಯಾಪ್ತಿಯು ಅತ್ಯಂತ ರೋಚಕವಾಗಿದೆ. ಎರವಲು ಪದಗಳು ಕನ್ನಡದ ಸ್ವಭಾವವನ್ನು, ಸ್ವರೂಪವನ್ನೂ ಹೇಗೆ ಪಡೆಯುತ್ತವೆ ಎಂಬುದು ಕುತೂಹಲಕಾರಿಯಾಗಿದೆ.

## ಇಗೋ ಕನ್ನಡ

ಸಾಮಾಜಿಕ ನಿಘಂಟು

ಪ್ರೊ॥ ಜಿ. ವೆಂಕಟಸುಬ್ಬಯ್ಯ

ಪುಟ : 448 (2ನೇ ಮುದ್ರಣ)

ಜನಪ್ರಿಯ ಆವೃತ್ತಿ : ರೂ. 150

ಗ್ರಂಥಾಲಯ ಆವೃತ್ತಿ : ರೂ. 180

ಇದೊಂದು ಅರ್ಥಕೋಶ ಅಥವಾ ನಿಘಂಟು ಎಂದು ತಿಳಿಯಬೇಕಾಗಿಲ್ಲ. ಓದಿದಾಗ ಮುದ ಕೊಡುವ ಇದರ ವ್ಯಾಪಕತೆ ಒಂದು ಪದಕ್ಕೆ ಅರ್ಥ ನೀಡುವಷ್ಟಕ್ಕೇ ಸೀಮಿತವಾಗಿಲ್ಲ. ಪದದ ಅರ್ಥ ಹುಡುಕುತ್ತ ಅದರ ಬೇರು, ಕಾಂಡ, ರೆಂಬೆ-ಕೊಂಬೆ ಇತ್ಯಾದಿಗಳ ಮೂಲ ಶೋಧಿಸಿ, ಬಳಕೆಯಲ್ಲಿ ಅದು ಹೇಗೆಲ್ಲ ಬದಲಾವಣೆಗೊಳಗಾಗಿದೆ ಎಂಬುದನ್ನು ಪತ್ತೆ ಮಾಡುವ, ಅಂತೆಯೇ ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಅತ್ಯಂತ ಕ್ರಿಯಾಶೀಲವಾದ ಪರಿಶ್ರಮ ಈ ಕೃತಿಗೆ ಹಿನ್ನೆಲೆಯಾಗಿದೆ.

## ಪದಾರ್ಥ ಚಿಂತಾಮಣಿ

(ಎರಡನೇ ಮುದ್ರಣ)

ಪಾ. ವೆಂ. ಆಚಾರ್ಯ

ಪುಟ : 352 ಬೆಲೆ : ರೂ. 140

ಅಧ್ಯಯನದ ಸಂದರ್ಭದಲ್ಲಿ ಎದುರಾಗುವ ಹಲವು ಪದಗಳ ಅರ್ಥ ಹುಡುಕುತ್ತ ಹೋದಂತೆ ಅವು ನಮ್ಮನ್ನು ಹಲವು ಕಡೆ ತಿರುಗಾಡಿಸಿ ಬೇರೊಂದು ಕಾಲಕ್ಕೆ, ಬೇರೊಂದು ಸಂಸ್ಕೃತಿಗೆ ಒಯ್ದು ಅಚ್ಚರಿ ಉಂಟುಮಾಡಬಲ್ಲವು. ಈ ಪದಾರ್ಥಲೋಕ ನಾವೆಣಿಸಿಕೊಂಡದ್ದಕ್ಕಿಂತಲೂ ರಂಗುರಂಗಿನದು; ಶಬ್ದ ಮೂಲಗಳು ಯಾವ ಯಾವ ಐತಿಹಾಸಿಕ, ನರವಂಶ ಚರಿತ್ರೆಯ, ಅರ್ಥವ್ಯವಸ್ಥೆಯ, ಸಂಸ್ಕೃತಿ ಸಂಪ್ರದಾಯಗಳ ಬಗ್ಗೆ ಗುಟ್ಟು ಹೇಳುತ್ತವೆ ಎಂಬುದು ಇವುಗಳಿಂದ ತಿಳಿಯುತ್ತದೆ. ಪ್ರತಿಯೊಂದು ಪದಕ್ಕೂ ಅದರದೇ ಆದ ಚರಿತ್ರೆಯುಂಟು, ಐತಿಹ್ಯವುಂಟು, ಕಥೆಯುಂಟು. 'ವರ್ಡ್‌ಲೋರ್'ಗೆ ಸಂಬಂಧಿಸಿದ ಮೊತ್ತಮೊದಲ ಪುಸ್ತಕ.

## ಹೊಸತು

ಮಾಸಪತ್ರಿಕೆಗೆ ಮೂರು ವರ್ಷದ ಚಂದಾ ಹಣ ರೂ. 250/- ನೀಡಿ ನವಕರ್ನಾಟಕ ಪ್ರಕಾಶನದ ಎಲ್ಲಾ ಪುಸ್ತಕಗಳ ಮೇಲೆ 20% ರಿಯಾಯಿತಿ ಪಡೆಯಿರಿ

### ನವಕರ್ನಾಟಕ ಶಾಖೆಗಳು

5ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - 560 009 ☎ : 2251382
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - 560 009 ☎ : 2872385
ಕೆ. ಎಸ್. ಆರ್. ರಸ್ತೆ
ಮಂಗಳೂರು - 575 001 ☎ : 441016
ರಾಮಸ್ವಾಮಿ ವೃತ್ತ
ಮೈಸೂರು - 570 024 ☎ : 444094
ಸ್ಟೇಷನ್ ರಸ್ತೆ
ಗುಲ್ಬರ್ಗಾ - 585 102 ☎ : 24302

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ 5159, ಬೆಂಗಳೂರು-560 001
ದೂರವಾಣಿ / ಫ್ಯಾಕ್ಸ್ : 2203580 / 81 / 82
e-mail : nkp@bgl.vsnl.net.in

RNI Regn. No. 11308/99 **HOSATHU** Kannada Monthly Magazine / December 1999 REGISTERED CPMG/KA/BG-7/99



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna